# ಮುನ್ನುಡಿ

(ಮರಾಠಿಯಿಂದ ಅನುವಾದಿತ)

ನನ್ನ ಹಿಂದಿನ ವಿದ್ಯಾರ್ಥಿಗಳೂ, ಈಗ ವಿಜಯಪುರದ ವಿಜಯ ಕಾಲೇಜದಲ್ಲಿ ಅರ್ಧಮಾಗಧಿಯ ಅಧ್ಯಾಪಕರೂ ಆದ ಶ್ರೀ. ರ. ಭಿಡೆ, ಎಂ. ಏ. ಇವರು ಬರೆದ **ಅರ್ಧ ಮಾಗಧಿ ಭಾಷೆಯ ವ್ಯಾಕರಣ** ವನ್ನು ನಾನು ಬಹುಶಃ ಪೂರ್ಣವಾಗಿ ಓದಿ ನೋಡಿದ್ದೇನೆ. ಇತ್ತೀಚೆಗೆ ಅನೇಕ ವಿದ್ಯಾರ್ಥಿಗಳು ಮ್ಯಾಟ್ರಿಕ್ ಪರೀಕ್ಷೆಗೆ ಅರ್ಧ ಮಾಗಧಿಯನ್ನು ಐಚ್ಛಿಕವಾಗಿ ತೆಗೆದುಕೊಳ್ಳುವರು. ಮತ್ತು ಉತ್ತರಗಳನ್ನು *ಮಾತೃಭಾಷೆಯಲ್ಲಿಯೆ ಬರೆಯುವರು. ಭಾಷೆಯ ಅಭ್ಯಾಸವು ಇಂತಹ ವ್ಯಾಕರಣಗ್ರಂಥಗಳಿಂದ ಸುಲಭವೂ ಆನಂದದಾಯಕವೂ ಆಗುವದು. ಇಲ್ಲಿಯ ವರೆಗೆ ವಿದ್ಯಾರ್ಥಿಗಳಿಗಾಗಿ ಅಥವಾ ವಿದ್ವಾಂಸರಿಗಾಗಿ ಬರೆಯಲ್ಪಟ್ಟ ವ್ಯಾಕರಣಗ್ರಂಥಗಳು—ಉದಾಹರಣೆಗಾಗಿ-ನನ್ನ A mannual of Ardhamagadhi Grammar ಅಥವಾ ಕೊಲ್ಹಾಪುರದ ಡಾ. ಘಾಟಗೆಯವರ Introduction to Ardhamagadhi, ಮುಂತಾದವುಗಳು ಇಂಗ್ಲೀಷು ಭಾಷೆಯಲ್ಲಿವೆ. ಈ ಗ್ರಂಥಗಳನ್ನು ವಿದ್ಯಾರ್ಥಿಗಳು ಪರೀಕ್ಷೆಗಳಿಗಾಗಿ ಅಧ್ಯಯನಮಾಡುತ್ತಿದ್ದರೂ ಮಾತೃಭಾಷೆಯಲ್ಲಿ ಬರೆಯಲ್ಪಟ್ಟ ಗ್ರಂಥಗಳು ಯಾವಾಗಲೂ ಹೆಚ್ಚು ಅಪೇಕ್ಷಿಸತಕ್ಕವುಗಳೇ ಸರಿ. ಪ್ರಾ. ಭಿಡೆಯವರ ಗ್ರಂಥವು ವಿದ್ಯಾರ್ಥಿಗಳಿಗೆ ಹೆಚ್ಚಾಗಿ ಉಪಯೋಗವಾಗಬೇಕು ಮತ್ತು ಹಾಗೆ ಆದೀತು ಎಂದು ನನ್ನ ಬಲವಾದ ಆಶೆಯಿದೆ.

ಪ್ರಾ. ಭಿಡೆಯವರು ವ್ಯಾಕರಣದಂತಹ ನೀರಸ ವಿಷಯವನ್ನು ಸಾಧ್ಯವಾದಷ್ಟು ಸುಲಭಮಾಡಿದ್ದಾರೆ. ಅವರು ರಚಿಸಿದ ಎಲ್ಲ ನಿಯಮಗಳೂ ವಿದ್ವಾಂಸರಿಗೆ ಒಪ್ಪಿಗೆಯಾಗಲಿಕ್ಕಿಲ್ಲವಾದರೂ 'ನಿಯಮಗಳಿಗೆ ಅಪವಾದ ಇರಲೇಬೇಕು' ಎಂಬ ನ್ಯಾಯದಂತೆ ಎಲ್ಲರೂ ಈ ವಿಷಯವನ್ನು ಪರಿಶೀಲಿಸಬೇಕೆಂದು ಸೂಚಿಸಿ ಪ್ರಾ. ಭಿಡೆಯವರ ಈ ಗ್ರಂಥಕ್ಕೆ ನಾನು ಯಶಸ್ಸನ್ನು ಕೋರುತ್ತೇನೆ.

ಕಾಶೀವಿಶ್ವವಿದ್ಯಾಲಯ — **ಪರಶುರಾಮ ಲಕ್ಷ್ಮಣ ವೈದ್ಯ**

---

* ಮೂಲದಲ್ಲಿ ಮರಾಠಿ ಎಂದಿರುವದನ್ನು 'ಮಾತೃಭಾಷೆ' ಎಂದು ಉಪಯೋಗಿಸಿದೆ.
— ಅನುವಾದಕ.

# ನಿವೇದನ

ಶಾಲಾಂತ ಪರೀಕ್ಷೆಯವರೆಗಿನ ಅಭ್ಯಾಸಕ್ರಮದಲ್ಲಿ ವಿವಿಧ ವಿಷಯಗಳನ್ನೂ ಮಾತೃಭಾಷೆಯ ಮೂಲಕವಾಗಿಯೇ ಕಲಿಯುವ ಮತ್ತು ಕಲಿಸುವ ಏರ್ಪಾಡು ಆಗ ಬೇಕು ಎಂಬ ಮಾತು ಇದೀಗ ಸರ್ವಮಾನ್ಯವಾಗಿದ್ದು ಆ ಪ್ರಕಾರದ ಅನು ಕೂಲತೆಯೂ ಈಗ ಎಲ್ಲ ಕಡೆಗೆ ಬಹುತರವಾಗಿ ಆಗಿದೆ. ಉಚ್ಚ ಶಿಕ್ಷಣದಲ್ಲಿಯೂ ಮಾತೃಭಾಷೆಯು ಶಿಕ್ಷಣದ ಮಾಧ್ಯಮವಾಗಬೇಕು ಎಂದು ಇದೀಗ ಬೇಡಿಕೆ ಆರಂಭ ವಾಗಿದ್ದು, ಪ್ರಾದೇಶಿಕ ವಿಶ್ವವಿದ್ಯಾಲಯಗಳ ಸ್ಥಾಪನೆಯಿಂದ ಅದು ತೀವ್ರವೆ ಕಾರ್ಯರೂಪದಲ್ಲಿ ಬರುವ ಸಂಭವವೂ ಇದೆ. ಇಂಥ ಸಮಯದಲ್ಲಿ ಮಾತೃಭಾಷೆ ಯಲ್ಲಿ ವಿವಿಧ ವಿಷಯಗಳಮೇಲೆ ಪುಸ್ತಕಗಳು ಬರೆಯಲ್ಪಡುವದು ಅವಶ್ಯವಾಗಿದೆ. ಅದೇ ದೃಷ್ಟಿಯಿಂದ ಇದೊಂದು ಚಿಕ್ಕ ಪ್ರಯತ್ನವಾಗಿದೆ.

ಮಾಧ್ಯಮಿಕ ಶಾಲೆಗಳ ಅಭ್ಯಾಸಕ್ರಮದಲ್ಲಿ ಮೇಲಿನ ಎರಡು ಇಯತ್ತೆಗಳಲ್ಲಿ ಅರ್ಧಮಾಗಧಿಯನ್ನು ಐಚ್ಛಿಕವಾಗಿ ತೆಗೆದುಕೊಳ್ಳುವ ಸೌಲಭ್ಯವು ೧೯೩೭ ರಿಂದ ಆಗಿದೆ. ಅಂದಿನಿಂದ ಸುಮಾರು ಹತ್ತುವರುಷಗಳ ವರೆಗೂ ಅರ್ಧಮಾಗಧಿಯ ಪರಿಚಯವನ್ನು ಚನ್ನಾಗಿ ಮಾಡಿಕೊಡುವ ಒಂದೂ ಪುಸ್ತಕವು ಮರಾಠಿಯಲ್ಲಿ ಬರೆ ಯಲ್ಪಡಲಿಲ್ಲ. ಒಂದೆರಡು ಅಂತಹ ಪ್ರಯತ್ನಗಳಾದರೂ ಅವು ಕೇವಲ ಟಿಪ್ಪಣಿಯ ಸ್ವರೂಪದವಾಗಿದ್ದವು. ಆದ್ದರಿಂದ ವಿದ್ಯಾರ್ಥಿಗಳಿಗೆ ಡಾ. ಪ. ಲ. ವೈದ್ಯ ಮತ್ತು ಡಾ. ಘಾಟಗೆ ಇವರ ಇಂಗ್ಲೀಷದಲ್ಲಿಯ ವ್ಯಾಕರಣ ಪುಸ್ತಕಗಳನ್ನು ಅವಲಂಬಿಸ ಬೇಕಾಗುತ್ತಿತ್ತು. ಈ ಪುಸ್ತಕಗಳು ಉತ್ತಮವಿರುವಬಗ್ಗೆ ಸಂಶಯವೇ ಇಲ್ಲ. ಆದರೆ ಇಂಗ್ಲೀಷದಲ್ಲಿದ್ದುದರಿಂದ ವ್ಯಾಕರಣದಂತಹ ವಿಷಯವನ್ನು ತಿಳಿದುಕೊಳ್ಳಲು ಮಾತೃಭಾಷೆಯಿಂದ ಬರೆದ ಪುಸ್ತಕದಷ್ಟು ಸಾಮಾನ್ಯ ವಿದ್ಯಾರ್ಥಿಗಳಿಗೆ ಇವು ಉಪ ಯೋಗವಾಗಲಾರವೆಂಬುದನ್ನು ಲಕ್ಷಿಸಿ ಈ ಕೊರತೆಯನ್ನು ದೂರಮಾಡುವದಕ್ಕಾಗಿ ನಾನು ೧೯೪೭ ರಲ್ಲಿ ಈ ಪುಸ್ತಕವನ್ನು ಬರೆದೆನು. ಸುಮಾರು ಒಂದುವರೆ ವರ್ಷ ಗಳಲ್ಲಿಯೆ ಅದರ ಕನ್ನಡ ಭಾಷಾಂತರವಾಯಿತು. ವಿದ್ಯಾರ್ಥಿಗಳೂ ಶಿಕ್ಷಕರೂ ಕೊಟ್ಟ ಪ್ರೋತ್ಸಾಹದಿಂದಲೇ ಅಲ್ಪಾವಧಿಯಲ್ಲಿ ಎರಡೂ ಭಾಷೆಗಳಲ್ಲಿ ಎರಡನೆಯ ಆವೃತ್ತಿಯನ್ನು ಪ್ರಕಟಿಸುವ ಸುಯೋಗವುಂಟಾಯಿತು.

## ಎರಡನೆಯ ಆವೃತ್ತಿಯ ವಿಶೇಷಗಳು.

ವಿದ್ಯಾರ್ಥಿಗಳು, ಸ್ನೇಹಿತರು, ಶಿಕ್ಷಕ ಬಂಧುಗಳು ಇವರೆಲ್ಲರ ಸೂಚನೆಗಳನ್ನು ಪರಾ ಮರ್ಶಿಸಿ ಈ ಆವೃತ್ತಿಯನ್ನು ಸಿದ್ಧಗೊಳಿಸುವಾಗ ಕೆಳಗಿನ ಹೆಚ್ಚುಕಡಿಮೆಗಳನ್ನು ಮಾಡಲಾಗಿದೆ.

(೧) ಪಾಠಗಳ ರಚನಾಕ್ರಮವನ್ನೂ ಅಭ್ಯಾಸದಲ್ಲಿಯ ವಾಕ್ಯಗಳನ್ನೂ ಬದಲಿಸಿದ್ದು ಅಭ್ಯಾ ಸಕ್ಕೆ ಅವಶ್ಯವಾದ ಶಬ್ದಸಂಗ್ರಹವನ್ನು ಪ್ರತಿಯೊಂದು ಪಾಠದಲ್ಲಿ ಅಕಾರಾದಿ ಕ್ರಮದಿಂದ ಕೊಡ ಲಾಗಿದೆ.

(೨) ಪ್ರಯೋಗ ಮತ್ತು ಸಮಾಸ ಪ್ರಕರಣಗಳನ್ನು ಹೆಚ್ಚು ವಿಸ್ತಾರಗೊಳಿಸಿದೆ.

(೩) ಮೊದಲನೆಯ ಆವೃತ್ತಿಯಲ್ಲಿಯ "ಭಾಷಾಂತರ" ಎಂಬ ಕೊನೆಯ ಭಾಗವನ್ನು ಬಿಟ್ಟು ಕೊಡಲಾಗಿದೆ.

(೪) ಸುಮಾರು ೨೦೦೦ ಶಬ್ದಗಳನ್ನು ಕೊನೆಗೆ ಅಕಾರಾದಿಕ್ರಮದಿಂದ ಕೊಟ್ಟಿದ್ದು ಯಾವ ದಾದರೂ ವಾಕ್ಯ ಮುಂತಾದ್ದರ ಅರ್ಥವಾಗಲು ಬೇಕಾಗುವ ಎಲ್ಲ ಶಬ್ದಗಳೂ ಈ ಚಿಕ್ಕ ಶಬ್ದಸೂಚಿ ಯಲ್ಲಿ ದೊರಕುವವೆಂದು ಆತ್ಮವಿಶ್ವಾಸದಿಂದ ಹೇಳಬಹುದು.

ವರ್ಣವಿಚಾರ ಮತ್ತು ಶಬ್ದವಿಚಾರ ಈ ವಿಭಾಗಗಳ ದೃಷ್ಟಿಯಿಂದ ವಾಕ್ಯವಿಚಾರವೆಂಬ ಪ್ರಕರಣವು ಅಸ್ವಾಭಾವಿಕವೆನಿಸುವದು ಸಹಜವದೆ. ವಾಕ್ಯರಚನೆಯ ವೈಶಿಷ್ಟ್ಯಗಳನ್ನು ಶಬ್ದವಿಚಾರ ದಲ್ಲಿ ಬೇರೆ ಬೇರೆ ವಿಭಾಗಗಳನ್ನು ವಿಚಾರಿಸುತ್ತಿರುವಾಗ ಆಯಾ ಸ್ಥಳಗಳಲ್ಲಿ ಕೊಡಲಾಗಿದೆ. ಪುಟ ಗಳು ಮರ್ಯಾದಿತವಾಗಬೇಕಾದ್ದರಿಂದ ಮತ್ತೆ ಎಲ್ಲದನ್ನೂ ವಾಕ್ಯವಿಚಾರದಲ್ಲಿ ಕೊಡದೆ ಸಂಕ್ಷೇಪ ವಾಗಿ ಕೊಟ್ಟಿದೆ. ಮತ್ತು ಶಬ್ದವಿಚಾರದಲ್ಲಿ ಬರದಿರುವಂತಹವುಗಳಲ್ಲಿ ಪೂರಕವೆಂದು ಕೊಡಲಾಗಿದೆ. ವಿದ್ಯಾರ್ಥಿಗಳಿಗೆ ಅಭ್ಯಾಸದ ದೃಷ್ಟಿಯಿಂದ ಇಷ್ಟು ಸಾಕು ಎನಿಸುತ್ತದೆ. ಆದರೂ ಇನ್ನೂ ಹೆಚ್ಚು ವಿವರಗಳು ಬೇಕು ಎಂದು ಸೂಚನೆಗಳು ಬಂದರೆ ಮೂರನೆಯ ಆವೃತ್ತಿಯಲ್ಲಿ ಅವುಗಳನ್ನು ಲಕ್ಷಿಸ ಲಾಗುವದು.

ಡಾ. ಪ. ಲ. ವೈದ್ಯ, ಎಂ. ಏ. ಡಿ. ಲಿಟ್. ಪ್ರಾ. ರಂ. ದ. ವಾಡೇಕರ, ಎಂ. ಏ. ಮತ್ತು ಪ್ರಾ. ನಾ. ಅ. ಗೋರೆ ಈ ಎಲ್ಲ ಗುರುವರ್ಯರ ಬಳಿಯಲ್ಲಿ ಕಲಿ ಯುವ ಸುಯೋಗದಿಂದ ಉಂಟಾದ ಲಾಭವೂ, ಅವರು ಮೇಲಿಂದಮೇಲೆ ಕೊಟ್ಟ ಪ್ರೋತ್ಸಾಹವೂ ಈ ಪುಸ್ತಕವನ್ನು ಬರೆಯಲು ತುಂಬಾ ಉಪಯುಕ್ತವಾದವೆಂದು ಹೇಳದಿರೆನು. ಪ್ರಾ. ವಾಡೇಕರ, ಪ್ರಾ. ಗೋರೆ, ಮತ್ತು ಪ್ರಾ. ಪಟವರ್ಧನ ಇವರು ಪುಸ್ತಕಕ್ಕೆ ಅಭಿಪ್ರಾಯವನ್ನು ಕೊಟ್ಟು, ಮತ್ತು ಡಾ. ಪ. ಲ. ವೈದ್ಯ ಇವರು ಮುನ್ನುಡಿ ಬರೆದು ಕೊಟ್ಟು ನನಗೆ ಬಹಳ ಪ್ರೋತ್ಸಾಹವನ್ನು ಕೊಟ್ಟಿದ್ದಾರೆ. ನನ್ನ ಸ್ನೇಹಿತರೂ, ಸಹೋದ್ಯೋಗಿಗಳೂ ಆದ ಪ್ರಾ. ವಿ. ಬಾ. ಇನಾಮದಾರ ಎಂ. ಏ. ಇವರು ವಿವೇಚನದೃಷ್ಟಿಯಿಂದಲೂ ಮತ್ತು ಮುದ್ರಣ ದೃಷ್ಟಿಯಿಂದಲೂ ಸಾಧ್ಯವಾ ದಷ್ಟು ನಿರ್ದೋಷವಾಗುವಂತೆ ಮಾಡಲು ಸಹಾಯ ಮಾಡಿದ್ದಾರೆ. ಅವರ ಸೂಚನೆ ಗಳು ಅತ್ಯಂತ ಮೌಲಿಕವಾಗಿದ್ದರೂ ಎಲ್ಲವನ್ನೂ ನನಗೆ ತೆಗೆದುಕೊಳ್ಳುವದಾಗಲಿಲ್ಲ. ಪ್ರಾ. ಇನಾಮದಾರರ ವಿವೇಚಕ ದೃಷ್ಟಿ ಮತ್ತು ಶಬ್ದ–ಅರ್ಥಗಳ ಸೂಕ್ಷ್ಮ ಸಂಬಂಧ ವನ್ನು ಶೋಧಿಸುವ ಮಾರ್ಮಿಕತೆ ನನಗೆ ಬಹಳ ಉಪಯುಕ್ತವಾಗಿವೆ. ಪ್ರಾ. ವಾ. ತ್ರ್ಯಂ. ಸಾಕುರೀಕರ, ಎಂ. ಏ.; ಪ್ರಾ. ದ. ತ್ರ್ಯಂ. ಸಾಕುರೀಕರ. ಎಂ. ಎ.; ಎಲ್. ಎಲ್. ಬಿ. ಶ್ರೀ. ಪಾ. ನಾ. ಮುಳೆ, ಬಿ. ಏ. ಬಿ. ಟಿ. ಮತ್ತು ಕನ್ನಡ ಅನುವಾದಕ –ವಿದ್ವಾನ್ ಗು. ಜ. ಮಂಗಲಗಿ ಎಂ. ಏ.; ಬಿ. ಟಿ. ಇವರೆಲ್ಲರ ಸೂಚನೆಗಳ ಉಪ ಯೋಗವು ನನಗೆ ವಿಶೇಷವಾಗಿದೆ. ಈ ಪುಸ್ತಕಕ್ಕಾಗಿ ತೆಗೆದುಕೊಂಡ ಸಹಾಯಕ ಗ್ರಂಥಗಳ ಯಾದಿಯನ್ನು ಬೇರೆಡೆಗೆ ಕೊಟ್ಟಿದೆ. ಶಬ್ದಸೂಚಿಯನ್ನು ತಯಾರಿಸುವಾಗ ನನ್ನ ವಿದ್ಯಾರ್ಥಿ ಮಿತ್ರರಾದ ಶ್ರೀ. ಕೃ. ವಿ. ದೇಶಪಾಂಡೆ ಇವರ ನೆರವು ತುಂಬಾ ಆಗಿದೆ.

ಮಾಡರ್ನ ಬುಕ್‌ಡಿಪೊದವರು ಎಂದಿನಂತೆ ಪ್ರಸಿದ್ಧಿಸುವ ಹೊಣೆಯನ್ನು ಹೊತ್ತು ಕೊಂಡರು ಮತ್ತು ಚಿತ್ರಶಾಲಾ ಪ್ರೆಸ್ಸಿನವರು ಅಲ್ಪಾವಧಿಯಲ್ಲಿ ಸುಂದರವಾಗಿಮುದ್ರಿಸಿ ಕೊಟ್ಟರು. ಮಾಡರ್ನ ಬುಕ್‌ಡಿಪೋದ ಕರ್ತವ್ಯಕುಶಲಸಂಚಾಲಕರಾದ ಕೈ. ನಾರಾಯಣರಾವ ಭಿಡೆಯವರು ಇದೀಗ ಇಲ್ಲವೆಂಬು ನನಗೆ ಅತ್ಯಂತ ದುಃಖವಾಗುತ್ತದೆ. ಮೊದಲನೆಯ ಆವೃತ್ತಿಯನ್ನು ಪ್ರಕಾಶಗೊಳಿಸಿದ ಶ್ರೇಯಸ್ಸು ಕೈ. ವಾ. ಶ್ರೀ ಭಿಡೆಯವರದು. ಯುದ್ಧೋತ್ತರ ಬಂದ ತುಟ್ಟಿಯಕಾಲದಲ್ಲಿ ಪುಸ್ತಕ ಪ್ರಕಟಿಸುವ ಜವಾಬ್ದಾರಿಯನ್ನು ತೆಗೆದುಕೊಳ್ಳುವದು ಕಠಿಣವೇಸರಿ. ಅಂತಹ ಸಮಯದಲ್ಲಿ ಕೈ. ವಾ. ಭಿಡೆಯವರು ಮುಂದೆ ಬಂದು ಈ ಪುಸ್ತಕವನ್ನು ಪ್ರಕಟಿಸಿದರು ಮತ್ತು ಈ ಎರಡನೆಯ ಆವೃತ್ತಿಯು ಪ್ರಕಟವಾಗುವ ಕಾಲದಲ್ಲಿ ಅವರು ಇಲ್ಲವೆಂದು ವಿಷಾದವಾಗುತ್ತದೆ. ಆದರೆ ಅವರ ಪತ್ನಿ ಶ್ರೀ. ಕಮಲಾಬಾಯಿ ಭಿಡೆ, ಮತ್ತು ನನ್ನ ಸ್ನೇಹಿತರಾದ ಶ್ರೀ. ಪ್ರ. ಕಾನಿಟಕರ, ಎಂ. ಏ. ಇವರು ಕೈ. ವಾ. ಭಿಡೆ ಇವರು ಕಣ್ಮರೆಯಾದ ಕೊರತೆಯು ಅನಿಸದಂತೆಯೂ ಮತ್ತು ಮೊದಲಿನಂತಹ ಆತ್ಮೀಯತೆಯಿಂದಲೇ ಪುಸ್ತಕ ಪ್ರಕಾಶನದ ಜವಾಬ್ದಾರಿಯನ್ನು ತೆಗೆದುಕೊಂಡರು.

ಮೇಲೆ ಹೇಳಿದ ವ್ಯಕ್ತಿಗಳು, ಸಂಸ್ಥೆ, ಗ್ರಂಥಗಳು ಮತ್ತು ಅವುಗಳ ಲೇಖಕರು ಇವರೆಲ್ಲರ ಆಭಾರವನ್ನು ನಾನು ಮನ್ನಿಸುತ್ತೇನೆ.

ಈ ಪುಸ್ತಕದ ಅಭ್ಯಾಸದಿಂದ ಅರ್ಧಮಾಗಧೀ ಭಾಷೆ, ವ್ಯಾಕರಣ ಮತ್ತು ವಾಙ್ಮಯ ಇವುಗಳ ಬಗ್ಗೆ ಓದುಗರಿಗೆ ಅಭಿರುಚಿಯು ಸ್ವಲ್ಪಾದರೂ ಉಂಟಾದರೆ ನಾನು ಕೃತಕೃತ್ಯನಾದೆನೆಂದು ತಿಳಿಯುವೆನು.

ವಿಜಾಪುರ — ಶ್ರೀ. ರ. ಭಿಡೆ

೧–೧೧.-೧೯೫೧

## ಅನುವಾದಕರ ಮಾತು

ಇದು ಎರಡನೆಯ ಆವೃತ್ತಿಯಾದರೂ ಮೊದಲನೆಯ ಆವೃತ್ತಿಯಿಂದ ಸಂಪೂರ್ಣ ಭಿನ್ನವಾಗಿದ್ದು ಅನೇಕ ಹೊಸ ಮಾರ್ಪಾಟುಗಳಿಂದ ಕೂಡಿದೆ. ಮೂಲ ಲೇಖಕರು ಹೇಳಿದಂತೆ ಅರ್ಧಮಾಗಧೀ ಭಾಷೆಯ ಅಭ್ಯಾಸಕ್ಕೆ ತುಂಬಾ ಉಪಯುಕ್ತವಾಗಿದೆ. ಕನ್ನಡ ಅನುವಾದದ ಶೈಲಿಯು ಸಾಧ್ಯವಾದಷ್ಟು ಸುಲಭವಾಗುವಂತೆ ಮಾಡಿದೆ. ಅರ್ಧಮಾಗಧೀ ಭಾಷಾಭ್ಯಾಸಿಗಳು ಈ ಪುಸ್ತಕದ ಉಪಯೋಗವನ್ನು ಸರಿಯಾಗಿ ಮಾಡಿಕೊಳ್ಳುವರೆಂದು ನಂಬಿದ್ದೇವೆ. ಈ ಅನುವಾದಕ್ಕೆ ಅವಕಾಶ ಮಾಡಿಕೊಟ್ಟ ಪ್ರಾ. ಶ್ರೀ. ರ. ಭಿಡೆಯವರಿಗೂ ಪ್ರಕಾಶನಗೊಳಿಸಲು ಮುಂದೆಬಂದ ದಿ ಸ್ಟೂಡಂಟ್ಸ ಓನ್ ಬುಕ್‌ಡಿಪೋ ಧಾರವಾಡದವರಿಗೂ ತುಂಬಾ ಆಭಾರಿಯಾಗಿದ್ದೇವೆ.

೧-೩-೧೯೫೨ — ಗು. ಜ. ಮಂಗಲಗಿ

## ಡಾ. ಎಸ್. ಸಿ. ನಂದಿಮಠ.

ಎಂ. ಏ., ಪಿ. ಎಚ್. ಡಿ. (ಲಂಡನ್)

### ಪ್ರಿನ್ಸಿಪಲ್, ಬಸವೇಶ್ವರ ಕಾಲೇಜ. ಬಾಗಲಕೋಟೆ.

ಪ್ರೋ. ಶ್ರೀ. ರ. ಭಿಡೆಯವರು ಮರಾಠಿ ಭಾಷೆಯಲ್ಲಿ ಬರೆದ ಅರ್ಧಮಾಗಧೀ ವ್ಯಾಕರಣವನ್ನು ಶ್ರೀ. ಗು. ಜ. ಮಂಗಲಗಿಯವರು ಕನ್ನಡಕ್ಕೆ ಅನುವಾದಿಸಿರುವರು. ಮೂಲ ಗ್ರಂಥದ ಮುನ್ನುಡಿಯಲ್ಲಿ, 'ಡಾ. ಪ. ಲ. ವೈದ್ಯರವರು ಪ್ರೋ. ಭಿಡೆಯವರು ವ್ಯಾಕರಣದಂತಹ ನೀರಸ ವಿಷಯವನ್ನು ಸಾಧ್ಯವಾದಷ್ಟು ಸುಲಭ ಮಾಡಿದ್ದಾರೆ,' ಎಂದು ಅಂದಿರುವರು. ಸಂಸ್ಕೃತದ ಬದಲಾಗಿ ಅರ್ಧಮಾಗಧೀಯನ್ನು ಮಾಧ್ಯಮಿಕ ಶಾಲಾಂತ ಪರೀಕ್ಷೆಗೆ ತೆಗೆದು ಕೊಳ್ಳಲು ಬರುವಂತೆ ಸೌಲಭ್ಯವನ್ನು ಕಲ್ಪಿಸಿ ಸುಮಾರು ೧೫ ವರುಷಗಳಾದವು. ಈ ಅವಧಿಯಲ್ಲಿ ಅನೇಕ ವಿದ್ಯಾರ್ಥಿಗಳು ಇದರ ಲಾಭವನ್ನು ಪಡೆದಿರುವರು ಮತ್ತು ಪಡೆಯುತ್ತಲಿರುವರು. ಕನ್ನಡದಲ್ಲಿ ಈ ವಿಷಯದ ಮೇಲೆ ಗ್ರಂಥಗಳಿರುವದು ಕಡಿಮೆ. ಇದನ್ನು ಕನ್ನಡಕ್ಕೆ ಪರಿವರ್ತಿಸಿ ವಿದ್ಯಾರ್ಥಿಗಳಿಗೆ ಬಹಳ ಅನುಕೂಲ ಮಾಡಿಕೊಟ್ಟಂತಾಗಿದೆ. ಇದನ್ನು ಸರಿಯಾಗಿ ಮನನ ಮಾಡಿಕೊಂಡರೆ ಅರ್ಧಮಾಗಧೀಯ ಉಚ್ಚ ಅಭ್ಯಾಸಕ್ಕೆ ತಳಹದಿಯಾದಂತಾಗುವದು. ವಿದ್ಯಾರ್ಥಿಗಳೂ ಶಿಕ್ಷಕರೂ ಈ ಪುಸ್ತಕದ ಲಾಭಪಡೆಯುವರೆಂದು ಭರವಸೆ.

ಬಾಗಿಲುಕೋಟೆ. ಶಿ. ಚೆ. ನಂದಿಮಠ.

೧೪-೭-೧೯೫೨.

# ಅನುಕ್ರಮಣಿಕೆ

# ಅರ್ಧಮಾಗಧೀ ಭಾಷೆ ಮತ್ತು ಸಾಹಿತ್ಯಗಳ ಸಿಂಹಾವಲೋಕನ.

## ಸಂಸ್ಕೃತ ಮತ್ತು ಪ್ರಾಕೃತ.

ಸಂಸ್ಕೃತ ಭಾಷೆ ಇಂದು ಕೇವಲ ಗ್ರಂಥಸ್ಥವಾಗಿದ್ದರೂ ಒಂದು ಕಾಲದಲ್ಲಿ ವ್ಯವಹಾರದ ಭಾಷೆಯಾಗಿತ್ತೆಂಬದನ್ನು ಮರೆಯಲಾಗದು. ಜನತೆಯಲ್ಲಿಯ ಉಚ್ಚಾರಭೇದದಿಂದ ಕಾಲಕ್ರಮದಲ್ಲಿ ಭಾಷೆಯ ಸ್ವರೂಪವೇ ಬದಲಾಗುವದುಂಟು. ಆಗ ಅಂತಹ ಸ್ವರೂಪವನ್ನು ಪ್ರತ್ಯೇಕವಾಗಿಯೇ ವಿಚಾರಿಸಬೇಕಾಗುವದು. ಇದುವೇ ಭಾಷಾಪ್ರಭೇದಗಳಿಗೆ ಕಾರಣವಾಗುವದು. ಸಂಸ್ಕೃತ ಭಾಷೆಯಲ್ಲಿಯ ಉಚ್ಚಾರಗಳು ಕ್ಲಿಷ್ಟವಾಗಿರುವದರಿಂದ ಅದು ಬಳಿಕೆಯಲ್ಲಿದ್ದಾಗಲೂ ಉಚ್ಚ ವರ್ಣದವರನ್ನುಳಿದು ಇತರರಿಗೆ ಸ್ಪಷ್ಟವಾಗಿ ಮತ್ತು ಶುದ್ಧವಾಗಿ ಮಾತನಾಡುವದು ಅಸಾಧ್ಯವಾಗಿತ್ತೆಂದೇ ಕಂಡು ಬರುವದು. ಉಚ್ಚಾರ ಭೇದದಿಂದ ಭಾಷೆಯಲ್ಲಿ ವಿವಿಧ ರೂಪಗಳು ತಲೆದೋರುವದುಂಟು. ಈ ಉಚ್ಚಾರ ಭೇದಕ್ಕೆ ದೇಶ ವಿಭೇದವೂ ಜಾತಿ ಉದ್ಯೋಗ ಮೊದಲಾದವೂ ಕಾರಣವಾಗುವವೆಂದರೆ ತಪ್ಪಾಗದು. ಕನ್ನಡ ಭಾಷೆಯಲ್ಲಿಯೇ ಈ ಪ್ರಭೇದವನ್ನು ಇಂದು ಕಾಣಬಹುದು. ಹೀಗೆ ಸಂಸ್ಕೃತವು ಜನಸಾಮಾನ್ಯರ ಬಳಕೆಯ ಭಾಷೆಯಾಗಿರುತ್ತಿರುವಾಗ ವಿವಿಧ ಸ್ವರೂಪವನ್ನು ತಳೆದು ಪ್ರಾಕೃತವಾಯಿತು. ಕಾಲಕ್ರಮದಲ್ಲಿ ದೇಶಭೇದದಿಂದ ವಿವಿಧ ಪ್ರಾಕೃತಗಳುಂಟಾದವು.

ಕೆಲವು ವಿದ್ವಾಂಸರು ‘ಸಂಸ್ಕೃತ’ ಮತ್ತು ‘ಪ್ರಾಕೃತ’ ಈ ಶಬ್ದಗಳಲ್ಲಿಯ ಧಾತ್ವರ್ಥವನ್ನು ವಿಮರ್ಶಿಸುತ್ತ ಪ್ರಾಕೃತವು ಮೊದಲು ಇರಬೇಕೆಂದೂ ಆನಂತರ ಶುದ್ಧ ಸ್ವರೂಪವನ್ನು ಹೊಂದಿ ಸಂಸ್ಕಾರ ಪಡೆದು ಸಂಸ್ಕೃತವಾಯಿತೆಂದೂ ಹೇಳುತ್ತಾರೆ. ಈ ಯುಕ್ತಿವಾದವು ಸರಿಯಾಗಿ ಕಾಣುವದಿಲ್ಲ. ಇತಿಹಾಸ ಮತ್ತು ಭಾಷಾಶಾಸ್ತ್ರಗಳನ್ನು ಪರಿಶೀಲಿಸಿದರೆ ಮತ್ತು ಇತರ ಅನೇಕ ಪ್ರಮಾಣಗಳನ್ನು ನೋಡಿದರೆ ಸಂಸ್ಕೃತವೆ ಪ್ರಾಚೀನವೆಂದು ಕಂಡುಬರುವದು. ಅದನ್ನು ಸಿದ್ಧಮಾಡಿ ತೋರಿಸುವದು ಇಲ್ಲಿ ಅವಶ್ಯವಿಲ್ಲ.

ಸಂಸ್ಕೃತದ ಪ್ರಾಂತಿಕ ಭೇದವೆ ಪ್ರಾಕೃತವೆಂದಂತಾಯಿತು. ಈ ದೃಷ್ಟಿಯಿಂದ ಆಗಿನ ಪ್ರಾಂತ ಭೇದಗಳನ್ನು ಇಲ್ಲಿ ತಿಳಿದುಕೊಳ್ಳುವದು ಯುಕ್ತವು. ಆರ್ಯಾವರ್ತದಲ್ಲಿ ಈ ರೀತಿಯ ವಿಭಾಗಗಳು ಇದ್ದವೆಂದು ಕಂಡುಬರುವದು.

(೧) **ಶೂರಸೇನ**— ದಿಲ್ಲಿ, ಆಗ್ರಾ, ಮಥುರೆಯ ಸುತ್ತಲಿನ ಪ್ರದೇಶ.

(೨) **ಪಿಶಾಚ**—ಪಂಜಾಬದ ಉತ್ತರಭಾಗ ಮತ್ತು ವಾಯವ್ಯ ಸರಹದ್ದಿನ ಪ್ರಾಂತ.

(೩) **ಮಗಧ**—ಬಂಗಾಲ ಮತ್ತು ಬಿಹಾರ.

(೪) **ಮಹಾರಾಷ್ಟ್ರ**—ನರ್ಮದೆಯ ದಕ್ಷಿಣದ ಪ್ರದೇಶ.

ಸಾಮಾನ್ಯವಾಗಿ ಪ್ರಾಂತದ ಹೆಸರೇ ಭಾಷೆಯ ಹೆಸರಾಗುವದು. ಬಂಗಾಲೀ, ಸಿಂಧೀ ಮೊದಲಾದ ಹೆಸರುಗಳನ್ನು ನೋಡಬಹುದು. ಅದೇ ರೀತಿಯಾಗಿ **ಶೌರಸೇನೀ, ಪೈಶಾಚೀ, ಮಾಗಧೀ** ಮತ್ತು **ಮಹಾರಾಷ್ಟ್ರೀ** ಎಂದು ಪ್ರಾಕೃತ ಭೇದಗಳಾದವೆಂಬುದನ್ನು ತಿಳಿಯಬೇಕು. ಇವು ನಾಲ್ಕು ಮುಖ್ಯವಾದ ಪ್ರಾಕೃತಗಳು. ಅವರಲ್ಲಿಯೂ ಮಹಾರಾಷ್ಟ್ರೀಪ್ರಾಕೃತಕ್ಕೆ ಹೆಚ್ಚು ಮಹತ್ವವಿದೆ. ವರರುಚಿ, ಹೇಮಚಂದ್ರ ಮೊದಲಾದ ಪ್ರಾಕೃತ ವ್ಯಾಕರಣಕಾರರು ಮೊದಲು ಮಹಾರಾಷ್ಟ್ರೀ ಪ್ರಾಕೃತದ ಎಲ್ಲ ವಿಚಾರಗಳನ್ನು ಹೇಳಿ ಆಮೇಲೆ ಇತರ ಪ್ರಾಕೃತಗಳು ಅದರಿಂದ ಹೇಗೆ ಭಿನ್ನವಾಗುವವು ಎಂಬುದನ್ನು ಹೇಳುತ್ತ ಹೋಗಿದ್ದಾರೆ. ಮತ್ತು “ಶೇಷಂ ಪ್ರಾಕೃತವತ್” ಎಂದು ಮುಗಿಸುತ್ತಾರೆ. ಹೀಗೆ ಈ ಪ್ರಾಕೃತ ಭಾಷೆಯಲ್ಲಿಯೂ ಅನೇಕ ಪ್ರಕಾರಗಳು ಕಾಲಾಂತರದಲ್ಲಿ ತೋರುತ್ತ ಬಂದು ಅರ್ವಾಚೀನ ಪ್ರಾದೇಶಿಕ ಭಾಷೆಗಳುಂಟಾದವೆಂದು ಹೇಳಬಹುದು. ಆದ್ದರಿಂದ ಇಂದಿನ ಹಿಂದೀ, ಮರಾಠೀ, ಗುಜರಾಥೀ ಇವುಗಳಿಗೂ ಸಂಸ್ಕೃತಕ್ಕೂ ಇರುವ ನಡುವಿನ

ಸ್ಥಿತಿಯೆ ಪ್ರಾಕೃತವೆಂದರೂ ತಪ್ಪಾಗದು. **ಅರ್ಧಮಾಗಧೀ ಭಾಷೆಯು** ಪ್ರಾಕೃತದ ಒಂದ ಮಿಶ್ರ ಸ್ವರೂಪವಾಗಿದೆ.

## ಅರ್ಧಮಾಗಧೀ ಭಾಷೆಯ ಹುಟ್ಟು ಮತ್ತು ಬೆಳವಣಿಗೆ.

'ಅರ್ಧ' ಮತ್ತು 'ಮಾಗಧೀ' ಎಂಬ ಎರಡು ಪದಗಳಿಂದಾದ ಸಾಮಾಸಿಕ ಶಬ್ದವು 'ಅರ್ಧಮಾಗಧೀ' ಯಾಗಿದೆ "**अर्धं मागध्याः**" ಎನ್ನು ವವರಿಂದ ಮಾಗಧೀ ಭಾಷೆಯು ಅರ್ಧ ಲಕ್ಷಣವುಳ್ಳದ್ದೆಂದು ಅರ್ಥವನ್ನು ಸ್ಥೂಲವಾಗಿ ಹೇಳಿವದೂ ಕಂಡುಬರುತ್ತದೆ. ಆದರೆ 'ಅರ್ಧ' ಇದು ಮಾಗಧೀ ಭಾಷೆಗೆ ಸಂಖ್ಯಾವಾಚಕವಾಗಿ ವಿಶೇಷಣವಾಗಿರದೆ 'ಮಗಧ' ದೇಶಕ್ಕೆ ಸಂಬಂಧವುಳ್ಳದ್ದಾಗಿದೆಯೆಂದು ತಿಳಿದು "**अर्धं मगधस्येयम्**" ಎಂದು ಅದರ ಸ್ವರೂಪವನ್ನು ತಿಳಿಯುವದು ಯುಕ್ತವಾದುದು. ಮತ್ತು '**पोराणमद्धमागहभासानिययं हवइ सुत्तं**' ಮತ್ತು '**मगहद्धविसयभासानिबद्धं अद्धमागहं**' ಎಂಬ ಎರಡು ಮಾತುಗಳಿಂದ ಈ ವಿಚಾರವು ಸ್ಪಷ್ಟವಾಗುತ್ತದೆ. ಮಗಧ ದೇಶದ ಕೆಲವೊಂದು ಭಾಗದಲ್ಲಿ ಪ್ರಚಾರದಲ್ಲಿರುವದರಿಂದ ಮಾಗಧೀ ಭಾಷೆಯ ಕೆಲವು ಲಕ್ಷಣಗಳು ಇದರಲ್ಲಿಯೂ ಸಿಗುತ್ತವೆ. ಆದರೆ ಮಾಗಧೀ ಪ್ರಾಕೃತಕ್ಕಿಂತಲೂ ಮಹಾರಾಷ್ಟ್ರೀ ಪ್ರಾಕೃತದೊಡನೆ ಇದರ ಹೋಲಿಕೆ ಹೆಚ್ಚಾಗಿರುವದೆಂದು ಕಂಡುಬರುವದು. ಇದೊಂದು ವಿಚಿತ್ರವೇ ಸರಿ. ಯಾಕಂದರೆ ಮಗಧ ಪ್ರಾಂತದ ಪಶ್ಚಿಮ ಭಾಗವೆ ಅರ್ಧಮಾಗಧಿಯ ಮೂಲ ಸ್ಥಾನವೆನ್ನಬಹುದು. ಅದರಿಂದ ಮಾಗಧೀ ಮತ್ತು ಶೌರಸೇನೀ ಭಾಷೆಗಳೊಡನೆ ಅದರ ಸಂಬಂಧ ಹೆಚ್ಚಾಗಿರಬೇಕು. ಆದರೆ ದೂರದ ಮಹಾರಾಷ್ಟ್ರದೊಡನೆ ಹೆಚ್ಚಿನ ಸಾಮ್ಯವು ತೋರುವದಕ್ಕೆ ಕಾರಣವೆಂದರೆ ಕ್ರಿ. ಶ. ಪೂ. ೩೧೦ ರ ಸುಮಾರಕ್ಕೆ ಚಂದ್ರಗುಪ್ತನ ಕಾಲದಲ್ಲಿ ಮಗಧದೇಶದಲ್ಲಿ ದೊಡ್ಡ ಬರಗಾಲವಾಗಲು ಅನೇಕ ಜೈನ ಸಾಧುಗಳು ಅಲ್ಲಿಂದ ದಕ್ಷಿಣಕ್ಕೆ ಬಂದದ್ದು ಮತ್ತು ದಕ್ಷಿಣದಲ್ಲಿಯೆ ಇವರು ನೆಲಿಸಿದುದರಿಂದ ಮಹಾರಾಷ್ಟ್ರೀ ಪ್ರಾಕೃತದ ಪ್ರಭಾವವು ಅರ್ಧಮಾಗಧಿಯ ಮೇಲೆ ಹೆಚ್ಚಾಗಿ ಆಗಲು ಅವಕಾಶವಾಯಿತು.

## ಪ್ರಾಕೃತದ ಉತ್ಪತ್ತಿಕಾಲ.

ಕ್ರಿಸ್ತಶಕದ ಎರಡನೆಯ ಶತಮಾನದಲ್ಲಿ ಎಲ್ಲ ಪ್ರಾಕೃತ ಭಾಷೆಗಳು ಉಂಟಾಗಿರಬೇಕೆಂದು ಡಾ. ಭಾಂಡಾರಕರರೂ, ಸಂಸ್ಕೃತ ನಾಟಕಗಳಲ್ಲಿ

ಬರುವ ಪ್ರಾಕೃತವೂ, ಮತ್ತು ಜೈನ ಮಹಾರಾಷ್ಟ್ರೀ ಪ್ರಾಕೃತವೂ ಕ್ರಿಸ್ತಶಕದ ಮೂರನೆಯ ಶತಮಾನದಲ್ಲಿ ಉಂಟಾಗಿರಬೇಕೆಂದು ಡಾ. ಚತರ್ಜಿಯವರೂ ಹೇಳುತ್ತಾರೆ. ಆದರೆ 'ಅಶ್ವಘೋಷ' ವೆಂಬ ನಾಟಕದಲ್ಲಿ ಜೈನ ಅರ್ಧ ಮಾಗಧಿಯ ಉಲ್ಲೇಖವಿದ್ದು ಈ ನಾಟಕದ ಕಾಲವು ಕ್ರಿಸ್ತಶಕದ ಒಂದನೆಯ ಶತಮಾನವೆಂದು ತಿಳಿಯುತ್ತದೆ. ಜೈನ ಸೂತ್ರಗಳಲ್ಲಿಯ ಭಾಷೆಯೂ ಕ್ರಿ. ಪ. ೮೩ ರ ಸುಮಾರದ ಮಥುರೆಯ ಶಿಲಾಲಿಪಿಯ ಭಾಷೆಯೂ ಪರಸ್ಪರ ಹೋಲಿಕೆ ಯುಳ್ಳವಾಗಿವೆ. ಇದರಿಂದ ಕ್ರಿ. ಶ. ಪೂರ್ವದಲ್ಲಿ ೪ ನೆಯ ಶತಮಾನದ ಅಂತ್ಯಭಾಗದಲ್ಲಿ ಅಥವಾ ಮೂರನೆಯ ಶತಮಾನದ ಅಂತ್ಯಭಾಗದಲ್ಲಿ ಅರ್ಧ ಮಾಗಧೀ ಭಾಷೆಯು ತಲೆದೋರಿರಬೇಕೆಂದು ತಿಳಿಯಬಹುದಾಗಿದೆ. ಯಾಕಂ ದರೆ ಯಾವದೊಂದು ಭಾಷೆಯು ಗ್ರಂಥಗಳಲ್ಲಿ ಬಳಸಲ್ಪಡಲು ಅದು ಕೊನಲು ಎರಡು ಮೂರುನೂರು ವರ್ಷವಾದರೂ ವ್ಯವಹಾರದಲ್ಲಿ ಉಪಯೋಗವಾಗಿರ ಬೇಕು.

## ಅರ್ಧಮಾಗಧೀ ಮತ್ತು ಜೈನಮಹಾರಾಷ್ಟ್ರೀ.

ಅರ್ಧಮಾಗಧೀ ಮತ್ತು ಜೈನಮಹಾರಾಷ್ಟ್ರೀ ಎರಡೂ ಪ್ರಾಕೃತಗಳು ಒಂದೇಯಾಗಿರಬೇಕೆಂದು ಅನಿಸುವದುಂಟು. ಯಾಕಂದರೆ ಎರಡರಲ್ಲಿಯೂ ವ್ಯಾಕರಣದ ದೃಷ್ಟಿಯಿಂದ ಹೋಲಿಕೆ ವಿಶೇಷವಾಗಿದೆ. ಎರಡೂ ಪ್ರಾಕೃತ ಗಳಲ್ಲಿ ಜೈನ ವಾಙ್ಮಯವು ದೊರೆಯುವದು. ಆದರೂ ಇವೆರಡರಲ್ಲಿ ಅಂತರ ವಿಲ್ಲದಿಲ್ಲ. ವ್ಯಾಕರಣದ ದೃಷ್ಟಿಯಿಂದಲೂ ಭೇದಗಳಿವೆ. ಪಉಮಚರಿಯಂ, ಸಮರಾಇಚ್ಚಕಹಾ, ಮೊದಲಾದ ಚರಿತ್ರಾತ್ಮಕವಾದ ಲಲಿತವಾಙ್ಮಯವು ಜೈನಮಹಾರಾಷ್ಟ್ರೀ ಪ್ರಾಕೃತದಲ್ಲಿದೆ. ಅರ್ಧಮಾಗಧೀ ಭಾಷೆಯು ಧಾರ್ಮಿಕ ಗ್ರಂಥಗಳಲ್ಲಿ ಉಪಯುಕ್ತವಾಗಿದ್ದು ಆರ್ಷ (ಋಷಿಪ್ರಣೀತ) ಭಾಷೆ ಎನಿಸಿ ಕೊಳ್ಳುವದು. ಶ್ವೇತಾಂಬರ ಜೈನರ ಧಾರ್ಮಿಕಗ್ರಂಥಗಳೆಲ್ಲ ಈ ಭಾಷೆಯಲ್ಲಿವೆ. ಹೀಗೆ ವಿಷಯ ದೃಷ್ಟಿಯಿಂದಲೂ ಈ ಎರಡೂ ಭಾಷೆಗಳಲ್ಲಿ ಸ್ವಲ್ಪ ಭೇದವಿದೆ.

## ಅರ್ಧಮಾಗಧೀ ವಾಙ್ಮಯ.

ಶ್ವೇತಾಂಬರ ಜೈನರ ಧಾರ್ಮಿಕಗ್ರಂಥಗಳೆಲ್ಲ ಅರ್ಧಮಾಗಧಿಯಲ್ಲಿದ್ದು ಅವು ಒಟ್ಟು ೪೬ ಇವೆ. ಆದರೆ ಅವುಗಳಲ್ಲಿ ಒಂದೂ ಉಪಲಬ್ಧವಿಲ್ಲ. ಈ ಗ್ರಂಥಗಳನ್ನು ಕೆಳಗಿನಂತೆ ವಿಭಾಗಮಾಡುವರು.

(೧) ಅಂಗ (ಗ್ರಂಥ ಸಂಖ್ಯೆ ೧೨)

**आयारंग** (आचारांग); **सूयगडंग** (सूत्रकृतांग); **ठाणंग** (स्थानांग); **समवायंग** (समवायांग); **वियाहपण्णत्ति** (व्याख्याप्रज्ञप्ति ಅಥವಾ भगवतीसूत्र); **नायाधम्मकहाओ** (ज्ञातृधर्मकथा:); **उवासगदसाओ** (उपासकदशा:); **अन्तगडदसाओ** (अन्तकृद्दशा:); **अणुत्तरोववाइय** (अनुत्तरौपपातिक); **पण्हावागरणाइं** (प्रश्नव्याकरणानि); **विवागसूयं** (विपाकसूत्रं) ಮತ್ತು **दिट्ठिवाय** (दृष्टिवाद);*

(೨) ಉಪಾಂಗ (ಗ್ರಂಥಸಂಖ್ಯೆ ೧೨)

**ओववाइय** (औपपातिक); **रायपसेणइज्ज** (राजप्रश्नीय); **जीवाजीवाभिगमसुत्त** (जीवाजीवाभिगमसूत्र); **पण्णवणा** (प्रज्ञापना); **सूरियपण्णत्ति** (सूर्यप्रज्ञप्ति); **जम्बूद्दीवपण्णत्ति** (जम्बूद्वीपप्रज्ञप्ति); **चन्दपण्णत्ति** (चन्द्रप्रज्ञप्ति); **निरयावलि**; **कप्पवडिंसिआओ** (कल्पावतंसिका:); **पुप्फियाओ** (पुष्पिका:); **पुप्फचूलिआओ** (पुष्पचूलिका:); **वण्हिदसाओ** (वृष्णिदशा:).

(೩) ಪ್ರಕೀರ್ಣ (ಗ್ರಂಥ ಸಂಖ್ಯೆ ೧೦)

**चउसरणं** (चतु:शरण); **आउरपच्चक्खाण** (आतुरप्रत्याख्यान); **भत्तपरिन्ना** (भक्तपरिज्ञा); **संथार** (संस्तार); **तण्डुलवेयालिय** (तंदुलवैचारिक); **चंदाविज्झय** (चन्द्रवेध्यक); **देविन्दत्थव** (देवेन्द्रस्तव); **गणिविज्जा** (गणिविद्या); **महापच्चक्खाण** (महाप्रत्याख्यान); **वीरत्थव** (वीरस्तव).

(೪) ಛೇದಸೂತ್ರ (ಗ್ರಂಥಸಂಖ್ಯೆ ೬)

**निसीह** (निशीथ); **महानिसीह** (महानिशीथ); **ववहार** (व्यवहार); **आयारदसाओ** (आचारदशा:); **बृहत्कल्पसूत्र**; **पञ्चकप्प** (पञ्चकल्प).

(೫) ಮೂಲ ಸೂತ್ರ (ಗ್ರಂಥಸಂಖ್ಯೆ ४)

**उत्तरज्झयण** (उत्तराध्ययनं); **आवस्सय** (आवश्यक); **दसवेयालिय** (दशवैकालिक); **पिंड [ओह] निज्जुत्ति** (पिण्ड [ओघ] निर्युक्ति).

(೬) ಇತರ (ಗ್ರಂಥಸಂಖ್ಯೆ ೨)

**नन्दिसुत्त** (नन्दी सूत्र); **अणुयोगदारसुत्त** (अनुयोगद्वार सूत्र).

* ಕೊನೆಯ ಗ್ರಂಥವು ಈಗ ಉಪಲಬ್ಧವಿಲ್ಲ.

ಅರ್ಧಮಾಗಧೀ ಭಾಷೆಯು ಸಂಸ್ಕೃತದಿಂದ ಉಂಟಾದ ಪ್ರಾಕೃತಗಳಲ್ಲೊಂದಾಗಿರುವದರಿಂದ ಶಬ್ದಗಳನ್ನು ಸಂಸ್ಕೃತದಿಂದ ಎತ್ತಿಕೊಳ್ಳುವದು ಸ್ವಾಭಾವಿಕವಾಗಿದೆ. ಆದರೆ ಇದ್ದಂತೆ ಹಲವು ಶಬ್ದಗಳನ್ನು ತೆಗೆದುಕೊಂಡರೂ ಅನೇಕ ಶಬ್ದಗಳನ್ನು ಉಚ್ಚಾರ ಸುಗಮತೆಯ ದೃಷ್ಟಿಯಿಂದ ವ್ಯತ್ಯಾಸಮಾಡಿ ತೆಗೆದುಕೊಳ್ಳಲಾಗಿದೆ. ಇದರಿಂದ ಪ್ರಾಕೃತದ ವೈಶಿಷ್ಟ್ಯವು ಉಳಿದು ಸ್ವತಂತ್ರ ಭಾಷೆಯಾಗಿ ಬೆಳೆಯಲು ಅವಕಾಶವಾಗಿದೆಯನ್ನಬಹುದು. ಹೀಗೆ ಸಂಸ್ಕೃತದಿಂದ ಅನೇಕ ಶಬ್ದಗಳು ಬಂದಿದ್ದರೂ ಸಂಸ್ಕೃತಕ್ಕೆ ಸಂಬಂಧ ಹತ್ತದ ಕೆಲವು ಶಬ್ದಗಳೂ ಉಂಟು. ಈ ಶಬ್ದಗಳು ಪ್ರಾದೇಶಿಕ ಭಾಷೆಯಿಂದ ಸೇರಿರಬೇಕೆಂದು ಹೇಳಬಹುದು. ಯಾವುದೊಂದು ಭಾಷೆಯು ಯಾವ ಪ್ರಾಂತದಲ್ಲಿ ಪ್ರಚಾರದಲ್ಲಿ ಬರುವದೋ ಆ ಪ್ರಾಂತದಲ್ಲಿ ರೂಢವಾದ ಭಾಷೆಯಿಂದ ಅನೇಕ ಶಬ್ದಗಳನ್ನು ಎತ್ತಿಕೊಳ್ಳುವದುಂಟು. ಇದಲ್ಲದ ರಾಜಕೀಯ ವ್ಯವಹಾರದ ಅಥವಾ ರಾಜಭಾಷೆಯ ಪ್ರಭಾವವೂ ಭಾಷೆಯಮೇಲೆ ಆಗದಿರದು. ಇಂದಿನ ಕನ್ನಡವನ್ನೇ ನೋಡಿದರೂ ಅದರಲ್ಲಿ ಅನೇಕ ಮರಾಠಿ-ಉರ್ದು, ಪರ್ಶಿಯನ್, ಇಂಗ್ಲೀಷು ಮೂಲವಾಗಿರುವ ಶಬ್ದ ರೂಪಗಳು, ಸೇರಿರುವದೂ ವಾಕ್ಯರಚನೆ ಮೊದಲಾದವುಗಳಲ್ಲಿಯೂ ಅವುಗಳ ರೀತಿ ಸೂಕ್ಷ್ಮವಾಗಿ ಬೆರತಿರುವದೂ ಕಂಡುಬರುವದು. ಹೀಗೆ ಪ್ರಾಕೃತಗಳು ಪ್ರಚಾರದಲ್ಲಿ ಬಂದ ಪ್ರಾಂತಗಳಲ್ಲಿ ಮೂಲವಾಗಿರುವ ಸಂಸ್ಕೃತೇತರ ಭಾಷೆಗಳಿಂದ ಶಬ್ದಗಳು ಅವುಗಳಲ್ಲಿ ಸೇರಿಕೊಂಡಿದ್ದರೆ ಆಶ್ಚರ್ಯವಲ್ಲ. ಇಂತಹ ಶಬ್ದಗಳಿಗೆ ಮೂಲವನ್ನು ಸಂಸ್ಕೃತದಲ್ಲಿ ಹುಡುಕುವದೂ ಶಕ್ಯವಿಲ್ಲ. ಈ ಶಬ್ದಗಳನ್ನು ಭಾಷಾವಿದರು **ದೇಶೀ** ಅಥವಾ **ದೇಶ್ಯ** ಶಬ್ದಗಳೆಂದು ಕರೆದಿದ್ದಾರೆ. ಅರ್ಧಮಾಗಧಿಯಲ್ಲಿಯೂ ಈ ಪ್ರಕಾರದ **ದೇಶ್ಯ** ಶಬ್ದಗಳೂ ಉಂಟು. ಇವುಗಳಲ್ಲಿ ಕೆಲವು ಸಂಸ್ಕೃತದ ಮೂಲದಿಂದಲೇ ಬಂದಿರಬಹುದು. ಆದರೆ ಅವುಗಳ ಸ್ವರೂಪವು ಆ ಬಗೆಯ ಯಾವ ಸುಳಿವೂ ಹತ್ತದಷ್ಟು ಬದಲಾಗಿರುವದರಿಂದ ದೇಶ್ಯವೆಂದು ಹೇಳಿಕೊಂಡು ಹೋಗಿದ್ದಾರೆಂದೂ ಅನ್ನಬಹುದು. ಇದಲ್ಲದೆ ಕೆಲವು ಶಬ್ದಗಳು 'ದ್ರಾವಿಡಭಾಷೆ' ಗಳಿಂದ ಬಂದಿರಲೂ ಸಾಕು. ಹೀಗೆ ಸಂಸ್ಕೃತಕ್ಕೆ ಸಂಬಂಧ ಹತ್ತ ಶಬ್ದಗಳನ್ನೆಲ್ಲ '**ದೇಶೀ**' ಎಂದು ಹೇಳಿಬಿಡುವದುಂಟು. ಇಂಗ್ಲೀಷರು ಹಿಂದೀಯರಿಗೆಲ್ಲ 'ನೇಟಿವ್ಜ' ಎಂದು ಹೇಳಿದಂತೆ.

ಅರ್ಧಮಾಗಧಿಯ ಶಬ್ದ ಸಂಪತ್ತಿಯನ್ನು ಕೆಳಗಿನಂತೆ ವಿಭಾಗಿಸಬಹುದು.

**ಶಬ್ದಗಳು**

| ತತ್ಸಮ | ತದ್ಭವ | ದೇಶೀ ಅಥವಾ ದೇಶ್ಯ. |
|---|---|---|
| ಸಂಸ್ಕೃತದಿಂದ ಏನೂ ಹೆಚ್ಚು ಕಡಿಮೆಯಾಗದೆ ಬಂದ ಶಬ್ದಗಳು. ಉದಾ: — **देव**, **कमल**, **नर** ಮುಂತಾದವು. | ಉಚ್ಚಾರ ಸುಗಮತೆಯ ದೃಷ್ಟಿಯಿಂದ ವರ್ಣವ್ಯತ್ಯಾಸವಾಗಿ ಉಂಟಾದ ಶಬ್ದಗಳು. **मणुस्स** [मनुष्य] **पुरिस** [पुरुष] **वाणर** [वानर] ಮುಂತಾದವು.* | ಸಂಸ್ಕೃತ ಮೂಲವು ಸಿಕ್ಕದಿರುವ ಶಬ್ದಗಳು. ಉದಾ: **बप्प**, **बोक्कड** ಮುಂತಾದವು.§ |

ಕನ್ನಡ ಶಬ್ದಸಂಪತ್ತಿಯೂ ಇದೇ ತೆರನಾಗಿರುವದನ್ನು ನೋಡಬಹುದು.

* ಈ ಬಗೆಯ ಶಬ್ದಗಳೇ ಹೆಚ್ಚಾಗಿವೆ.

§ ಈ ಬಗೆಯ ಶಬ್ದಗಳು ಬಹಳ ಕಡಮೆ ಇವೆ.

# ವರ್ಣವಿಚಾರ

## ವರ್ಣಮಾಲೆ.

ಅಕ್ಷರಗಳಿಂದ ಶಬ್ದವಾಗುವದು. ಒಂದು ಶಬ್ದದಲ್ಲಿ ಒಂದು ಅಥವಾ ಹೆಚ್ಚು ಅಕ್ಷರಗಳಿರಬಹುದು. ಅಕ್ಷರದ ಸೂಕ್ಷ್ಮ ರೂಪವೇ ವರ್ಣವೆನಿಸು ವದು. ವರ್ಣವು ಭಾಷೆಗೆ ಅವಿಭಾಜ್ಯವಾದ ಪರಮಾಣುವಿದ್ದಂತೆ. ಆದರೆ ವರ್ಣದಲ್ಲಿಯೂ ಎರಡು ಪ್ರಕಾರಗಳುಂಟು. ಸ್ವಂತ್ರವಾದ ಅಥವಾ ಸ್ವಯಂ ಪೂರ್ಣವಾದ ಉಚ್ಚಾರವುಳ್ಳವುಗಳು ಮತ್ತು ಮತ್ತೊಂದು ವರ್ಣದ ಸಹಾಯ ದಿಂದ ಪೂರ್ಣ ಉಚ್ಚಾರ ಪಡೆಯತಕ್ಕವುಗಳು. ಮೊದಲಿನವುಗಳು **ಸ್ವರ** ಗಳೆಂದೂ ಎರಡನೆಯವುಗಳು **ವ್ಯಂಜನ**ಗಳೆಂದೂ ಹೇಳಲ್ಪಡುವವು.

ಅರ್ಧಮಾಗಧಿಯಲ್ಲಿಯ ವರ್ಣಗಳೆಲ್ಲ ಸಂಸ್ಕೃತದಿಂದಲೇ ಬಂದವುಗಳು. ಆದರೆ ಉಚ್ಚಾರ ಸೌಲಭ್ಯದ ದೃಷ್ಟಿಯಿಂದ ಕೆಲವು ವರ್ಣಗಳನ್ನು ಬಿಟ್ಟು ಕೊಡಲಾಗಿದೆ. ಆದರೆ ಸಂಸ್ಕೃತದಲ್ಲಿರದ ಯಾವ ವರ್ಣವೂ ಅರ್ಧಮಾಗಧಿ ಯಲ್ಲಿಲ್ಲ. ಆದ್ದರಿಂದ ಸಂಸ್ಕೃತದಿಂದ ತೆಗೆದುಕೊಳ್ಳಲಾಗದ ವರ್ಣಗಳಿಗೆ ಬದಲಾಗಿ ಕೆಲವೊಂದು ವರ್ಣಗಳನ್ನು ಉಪಯೋಗಿಸುವದು ಅವಶ್ಯವಾಗು ವದು. ಇಂಥ ವರ್ಣಕ್ಕೆ ಪ್ರತಿಯಾಗಿ ಇಂಥದೇ ಬರುವದೆಂದು ಕೆಲವು ಸ್ಥೂಲ ನಿಯಮಗಳಿದ್ದರೂ ಅವುಗಳಿಗೆ ಅನೇಕ ಅಪವಾದಗಳೂ ಇವೆ. ಯಾಕಂದರೆ ಯಾವುದೊಂದು ಭಾಷೆ ಮೊದಲು ಮಾತಿನಲ್ಲಿ ವ್ಯವಹಾರದಲ್ಲಿ ಬೆಳೆಯುವದು. ಅದು ಬೆಳೆಯುತ್ತ ಬಂದು ಗ್ರಂಥಸ್ಥವಾಗಹತ್ತಲು ವ್ಯಾಕರಣಕಾರರು ಕೆಲ ವೊಂದು ಸ್ಪಷ್ಟವಾದ ಸಾಮ್ಯಗಳನ್ನು ಲಕ್ಷಿಸಿ ನಿಯಮಗಳನ್ನು ಮಾಡು ವರು. ಉಪಯೋಗದಲ್ಲಿದ್ದು ಈ ನಿಯಮಗಳಿಗೆ ಹೊಂದದ ಪ್ರಯೋಗಗಳೇ ಅಪವಾದಗಳೆನಿಸುವವು.

ವರ್ಣವಿಚಾರವನ್ನು ಮಾಡುವಾಗ ನಾವು ಕೆಳಗಿನ ಮೂರು ಭಾಗ ಗಳನ್ನು ಮಾಡಿಕೊಂಡು ಅವುಗಳ ವ್ಯತ್ಯಾಸವು ಹೇಗೆ ಆಗುವದೆಂಬುದನ್ನು ನೋಡಬಹುದು.

(೧) ಸ್ವರ (೨) ಅಸಂಯುಕ್ತ ವ್ಯಂಜನ (೩) ಸಂಯುಕ್ತ ವ್ಯಂಜನ.

## ಸ್ವರಗಳು.

**ಸಂಸ್ಕೃತ ಸ್ವರಗಳು :—** अ, आ, इ, ई, उ, ऊ, ऋ, ॠ, ऌ, ए, ऐ, ओ, औ.

**ಅರ್ಧಮಾಗಧಿ ಸ್ವರಗಳು :—** अ, आ, इ, ई, उ, ऊ, ए, ओ.

**ಅರ್ಧಮಾಗಧಿಯಲ್ಲಿಲ್ಲದ ಸ್ವರಗಳು :—** ऋ, ॠ, ऌ, ऐ ಮತ್ತು औ.

ऌ ಕಾರಕ್ಕೆ ॠ ಕಾರದಂತೆ ದೀರ್ಘವಿಲ್ಲ. ಸಂಸ್ಕೃತದಲ್ಲಿ ಸಾಮಾನ್ಯವಾಗಿ ऌ ಕಾರವು क् ವ್ಯಂಜನದೊಡನೆ क्लृप् ಎಂಬ ಧಾತುವಿನಲ್ಲಿ ಮಾತ್ರ ತೋರುವುದು. ಆದುದರಿಂದ ಅರ್ಧಮಾಗಧಿಯಲ್ಲಿ ಅದರ ಉಪಯೋಗವು ಇಲ್ಲವೆಂದರೂ ಅಡ್ಡಿಯಿಲ್ಲ. ಮತ್ತು ऋ, ऌ ಇವು ಉಚ್ಚಾರಕ್ಕೆ ಕಠಿಣವಾಗಿರುವುದರಿಂದಲೂ, ऐ औ ಇವು ಸಂಯುಕ್ತ ಸ್ವರಗಳೆನಿಸುವುದರಿಂದಲೂ ಅರ್ಧಮಾಗಧಿಯಲ್ಲಿ ಇವುಗಳನ್ನು ಬಿಟ್ಟುಕೊಡಲಾಗಿದೆ. ए, ओ ಇವೂ ಸಂಯುಕ್ತ ಸ್ವರಗಳಾದರೂ (अ + इ ಮತ್ತು अ + उ) ಅವು इ, उ ಗಳ ದೀರ್ಘಗಳಂತೆ ತಿಳಿಯಲ್ಪಡುವವು. ಆದರೆ ಮುಂದೆ ಸಂಯುಕ್ತವ್ಯಂಜನವಿದ್ದಾಗ ಅವುಗಳ ಉಚ್ಚಾರವು ಹ್ರಸ್ವವಾಗುವದು. ಉದಾ-क्षेत्र > खेत्त ; ओष्ठ > ओट्ठ.

अ, इ, उ – ಶುದ್ಧ ಹ್ರಸ್ವ ಸ್ವರಗಳು

आ, ई, ऊ – ಶುದ್ಧ ದೀರ್ಘ ಸ್ವರಗಳು.

ए ಮತ್ತು ओ – ಹ್ರಸ್ವ ಮತ್ತು ದೀರ್ಘ ಸ್ವರಗಳು.

ಸಂಸ್ಕೃತದಲ್ಲಿಯ ಸ್ವರಗಳು ಅರ್ಧಮಾಗಧಿಯಲ್ಲಿಲ್ಲದಿದ್ದರೆ ಅವುಗಳಿಗೆ ಪ್ರತಿಯಾಗಿ ಅರ್ಧಮಾಗಧಿಯಲ್ಲಿರುವ ಸ್ವರಗಳನ್ನು ಉಪಯೋಗಿಸಬೇಕಾಗುವದು. ಒಮ್ಮೊಮ್ಮೆ ಒಂದು ಸ್ವರಕ್ಕೆ ಒಂದಕ್ಕಿಂತ ಹೆಚ್ಚು ಕೂಡ ಬರಬಹುದು. ಯಾವುದಕ್ಕೆ ಪ್ರತಿಯಾಗಿ ಯಾವದು ಬರುವದೆಂಬದಕ್ಕೆ ನಿಶ್ಚಿತ ನಿಯಮಗಳನ್ನು ಹೇಳಲಾಗದಿದ್ದರೂ ವ್ಯವಹಾರದಿಂದ ಅವುಗಳನ್ನು ತಿಳಿದುಕೊಳ್ಳಬಹುದು. ಸಾಮಾನ್ಯವಾಗಿ ಯಾವ ಸ್ವರಕ್ಕೆ ಯಾವದು ಬರುವದೆಂಬದನ್ನು ಕೆಳಗಿನ ಕೋಷ್ಟಕದಿಂದ ತಿಳಿಯಬಹುದು.

## ಅರ್ಧಮಾಗಧಿಯಲ್ಲಿರುವ ಸ್ವರಗಳ ವ್ಯತ್ಯಾಸ.

| ಸಂಸ್ಕೃತ | ಅರ್ಧಮಾಗಧಿ | ಉದಾಹರಣೆಗಳು |
|---|---|---|
| *ऋ | अ | घृत>**घय** (ತುಪ್ಪ); तृण>**तण** (ಹುಲ್ಲು), तृष्णा>**तण्हा** (ನೀರಡಿಕೆ), मृत>**मय** (ಸತ್ತ), कृत>**कय**, **कड**. |
| ऋ | इ | मृग>**मिग** (ಜಿಗರೆ), मातृ>**माइ** (ತಾಯಿ), शृंगार>**सिङ्गार** (ಶಿಂಗಾರ), नृप>**निव** (ಅರಸ), शृंग>**सिंग** (ಕೋಡು), |
| ऋ | उ | मातृ>**माउ** (ತಾಯಿ), प्रावृष>**पाउस** (ಮಳೆ), ऋतु>**उउ** (ಋತು), भ्रातृ>**भाउ** (ಅಣ್ಣ - ತಮ್ಮ), वृत्तांत>**वुत्तन्त** (ಸಮಾಚಾರ). |
| ऋ | रि | ऋण>**रिण** (ಸಾಲ), ऋषभ>**रिसह** (ಎತ್ತು), ऋषि>**रिसि**, ऋद्ध>**रिद्ध**. |
| ऌ | इलि | क्लृप्त>**किलित्त**, क्लृप्ति>**किलित्ति**, |
| ऐ | ए | वैर>**वेर**, वैद्य>**वेज्ज**, शैल>**सेल** (ಪರ್ವತ), ऐरावत>**एरावण**, |
| ए | अइ | कैलास>**कइलास**, दैत्य>**दइच्च**, दैव>**दइव्व**, चैत्य>**चेइय** (ಜಿನಮಂದಿರ). |
| औ | ओ | औषध>**ओसह**, कौतुक>**कोउय**, गौर>**गोर**, कौमुदी>**कोमुइ** (ಬೆಳ್ದಿಂಗಳು). |

*ದೀರ್ಘ **ॠ** ಕಾರವು ಸಂಸ್ಕೃತದಲ್ಲಿ ಕೂಡ ಬಹಳ ಕಡಮೆ ಉಪಯೋಗವಾಗುವದು. **ऋ** ಕಾರಕ್ಕೆ ಆಗುವ ವ್ಯತ್ಯಾಸಗಳೇ **ॠ** ಕಾರಕ್ಕೂ ಆಗುವದುಂಟು. ಇದಲ್ಲದೆ ಮೇಲೆ ಹೇಳಿದ ಪ್ರಕಾರವಲ್ಲದೆ **ऋ** ಕಾರಕ್ಕೆ ಕೆಲವು ಅನಿಯಮಿತ ವ್ಯತ್ಯಾಸಗಳೂ ಆಗುವವು. ಉದಾ: वृक्ष>**रुक्ख**; गृण्हाति>**गेण्हइ**. ಸಾಮಾನ್ಯವಾಗಿ ಶಬ್ದದ ಮೊದಲು ಇರುವ **ऋ** ಕಾರಕ್ಕೆ **रि** ಉಪಯೋಗವಾಗುವದು. ಉದಾ: **ऋषि**>**रिसि**. ऋषभ>**रिसह** ಮುಂ. ಆದರೆ ಒಮ್ಮೊಮ್ಮೆ ಶಬ್ದಾರಂಭದ **ऋ** ಕ್ಕೆ ಬದಲಾಗಿ ಬೇರೆ ಸ್ವರವೂ ಬರುವುದು. ಉದಾ : ऋषि>**इसि**; ऋद्धि>**इड्ढि**; ऋषभ>**उसह**; ऋच्छ>**अच्छ** ಮುಂ.

| | | |
|---|---|---|
| **औ** | अउ | कौशल>**कउसल**; पौर>**पउर** ( ಪಟ್ಟಣಿಗ ): गौड>**गउड**; पौरुष>**पउरिस.** |
| **औ** | आ | गौरव>**गारव.** |

## ಇತರ ಸ್ವರವ್ಯತ್ಯಾಸಗಳು.

ಸಂಸ್ಕೃತದಲ್ಲಿದ್ದು, ಅರ್ಧಮಾಗಧಿಯಲ್ಲಿರದ ಸ್ವರಗಳ ಸ್ಥಿತ್ಯಂತರವು ಹೇಗಾಗುವದೆಂಬುದನ್ನು ಹೇಳಿದ್ದಾಯಿತು. ಆದರೆ ಸಂಸ್ಕೃತದಲ್ಲಿರುವ ಸ್ವರವು ಅರ್ಧಮಾಗಧಿಯಲ್ಲಿದ್ದರೂ ಒಮ್ಮೊಮ್ಮೆ ಸಂಸ್ಕೃತದಿಂದ ಅರ್ಧಮಾಗಧಿಗೆ ಬರುವಾಗ ಹೆಚ್ಚುಕಡಿಮೆಯಾಗುವದು. ಇದಕ್ಕೆ ನಿರ್ದಿಷ್ಟವಾದ ನಿಯಮಗಳೂ ಇಲ್ಲ. ಇಂತಹ ರೂಪಗಳು ವಿಶೇಷವಾಗಿದ್ದು ಅವೆಲ್ಲವುಗಳನ್ನು ಇಲ್ಲಿ ಕೊಡುವುದು ಸಾಧ್ಯವಿಲ್ಲ. ಅವುಗಳ ರೀತಿ ತಿಳಿಯುವದಕ್ಕಾಗಿ ಮಾದರಿಗೆಂದು ಕೆಲವು ಉದಾಹರಣೆಗಳನ್ನು ಕೆಳಗೆ ಕೊಡಲಾಗಿದೆ.

| ಸಂಸ್ಕೃತ ಸ್ವರ | ಅರ್ಧಮಾಗಧಿ ಸ್ವರ | ಉದಾಹರಣೆಗಳು |
|---|---|---|
| अ | आ | समृद्धि>**सामिद्धि**; प्रवचन>**पावयण**; प्रमुख>**पामोक्ख.** |
| अ | इ | दत्त>**दिन्न**; पक्व>**पिक्क**; मध्यम>**मज्झिम.** |
| अ | उ | सर्वज्ञ>**सव्वन्नु**; कृतज्ञ>**कयन्नु.** |
| अ | ए | शय्या>**सेज्जा**; अत्र>**एत्थ.** |
| अ | ० | (ಮೊದಲ ಸ್ವರ ಲೋಪವಾಗುವದು) अलाबू>**लाऊ**; अरण्य>**रण्ण**; अपि>**पि.** |
| आ | अ | यथा>**जह**; तथा>**तह.** |
| आ | इ | सदा>**सइ**; आचार्य>**आइरिय.** |
| आ | ए | ग्राह्य>**गेज्झ**; मात्र>**मेत्त.** |
| आ | ओ | आर्द्र>**ओल्ल**; आली>**ओली.** |
| इ | अ | हरिद्रा>**हलद्दी**; शकुनि>**सउण.** |
| इ | उ | |
| इ | ए | पिण्ड>**पेण्ड**; सिन्दूर>**सेन्दूर**; मिरा>**मेरा.** |

| | | |
|---|---|---|
| इ | ० | ( ಸ್ವರಲೋಪ ) इति > त्ति, ति. |
| ई | इ | पानीय > **पाणिय**; अलीक > **अलिय**; तृतीय > **तइय.** |
| ई | उ | जीर्ण > **जुण्ण** |
| ई | ए | कीदृश > **केरिस**; आपीड > **आमेल**; नीड > **नेड्ड.** |
| उ | अ | मुकुल > **मउल**; मुकुट > **मउड**; गरुक > **गरुअ.** |
| उ | इ | पुरुष > **पुरिस**; भ्रुकुटि > **भिउडि.** |
| उ | ओ | पुष्कर > **पोक्खर**; पुष्करिणी > **पोक्खरिणी**; मुद्गर > **मोग्गर**; तुण्ड > **तोण्ड.** |
| उ | ० | (ಲೋಪ) उदक > **दग.** |
| ऊ | उ | कौतूहल > **कोउहल्ल.** |
| ऊ | ए | नूपुर > **नेउर.** |
| ऊ | ओ | कूर्पर > **कोप्पर**; मूल्य > **मोल्ल**; ताम्बूल > **तम्बोल.** |
| ए | इ | एक > एक्क > **इक्क.** |
| ओ | उ ऊ | ओष्ठ > **उट्ठ**; सोच्छ्वास > **सूसास.** |

ಮೇಲಿನ ಉದಾಹರಣೆಗಳಿಂದ ಈ ವ್ಯತ್ಯಾಸಗಳಿಗೆ ನಿಶ್ಚಿತವಾದ ನಿಯಮಗಳನ್ನು ಹೇಳಲು ಬರುವದಿಲ್ಲವೆಂದು ಸ್ಪಷ್ಟವಾಗುವದು. ಆದರೂ ಕೆಲವು ನಿಯಮಗಳನ್ನು ಕೆಳಗೆ ಕೊಡಲಾಗಿದೆ. ಆದರೆ ಅವುಗಳಿಗೆ ಅನೇಕ ಅಪವಾದಗಳಿರುವವೆಂಬುದನ್ನು ಲಕ್ಷ್ಯದಲ್ಲಿಡಬೇಕು.

(೧) ಮುಂದೆ ಸಂಯುಕ್ತ ವ್ಯಂಜನವಿದ್ದರೆ ಹಿಂದಿನ ಸ್ವರವು ಹ್ರಸ್ವ ವಾಗುವದು. ಉದಾ—क्षेत्र > **खेत्त**; मोक्ष > **मोक्ख.** ( ಕನ್ನಡದ ಎ, ಒ ಗಳಂತೆ ಉಚ್ಚರಿಸಬೇಕು.)

(೨) ದೀರ್ಘ ಸ್ವರವು ಅನುಸ್ವಾರದಿಂದ ಕೂಡಿದ್ದರೆ ಅದು ಹ್ರಸ್ವ ವಾಗುವದು. ಉದಾ—इदानीम् > **इदाणिं**; मांस > **मंस.**

(೩) ಸಮಾಸದಲ್ಲಿಯ ಮೊದಲನೆಯ ಪದದ ಅಂತ್ಯಸ್ವರವು ಸಾಮಾನ್ಯ ವಾಗಿ ಹ್ರಸ್ವವಾಗುವದು. ಉದಾ— भिक्षाकाल > **भिक्खकाल**; नदीतटाक > **नइतलाय.**

(೪) ಯಾವದೊಂದು ಪದದ ಮೇಲೆ ಹೆಚ್ಚು ಜೋರು ಕೊಡಬೇಕಾಗಿ ದ್ದರೆ ಅದರ ಅಂತ್ಯ ಸ್ವರವು ದೀರ್ಘವಾಗುವದು. ಉದಾ— **एवामेव**

**खिप्पामेव** ಮುಂ. ಆದರೆ ಒಮ್ಮೊಮ್ಮೆ ದೀರ್ಘವು ಹ್ರಸ್ವವಾಗುವದು. ಉದಾ—कुलाल>**कुलल**; अनीक>**अणिक**; अन्यथा>**अन्नह.**

**ವಿಸರ್ಗ.**

ಅರ್ಧಮಾಗಧಿಯಲ್ಲಿ ವಿಸರ್ಗದ ಉಪಯೋಗವೇ ಇಲ್ಲ. ಯಾಕಂದರೆ ಅದು ಉಚ್ಚಾರಕ್ಕೆ ಕಠಿಣವೆನಿಸುವದು. ಸಂಸ್ಕೃತದಲ್ಲಿ ವಿಸರ್ಗವು ಶಬ್ದದ ಕೊನೆಗೆ ಅಥವಾ ಮಧ್ಯದಲ್ಲಿ ಬರುವದು. ಮಧ್ಯದಲ್ಲಿ ವಿಸರ್ಗವಿರುವ ಶಬ್ದಗಳ ವಿಚಾರವನ್ನು ಸಂಯುಕ್ತ ವ್ಯಂಜನಗಳೊಡನೆ ಮಾಡಲಾಗುವದು. ಕೊನೆಗೆ ಬರುವ :ವಿಸರ್ಗವು ಯಾವ ವ್ಯತ್ಯಾಸ ಹೊಂದುವದೆಂಬುದನ್ನು ಮೊದಲು ತಿಳಿಯುವಾ.

(೧) ಸಂಸ್ಕೃತದಲ್ಲಿ ಶಬ್ದ ಅಥವಾ ಪದದ ಕೊನೆಗೆ र् ಅಥವಾ स् ಬಂದರೆ ಅದು ವಿಸರ್ಗವಾಗುವದು. ಅಂತ್ಯವಿಸರ್ಗದಹಿಂದೆ अ ಇದ್ದರೆ ಅರ್ಧಮಾಗಧಿಯಲ್ಲಿ ಎರಡೂ ಕೂಡಿ ओ ಆಗುವದು.

ಉದಾ—देव:>**देवो**; नर:>**नरो**; तत:>**तओ**; यत:>**जओ**; पुण:>**पुणो**; अत:>**अओ**; प्रात:>**पाओ**; अह:>**अहो**; सर्वत:>**सव्वओ** ಮುಂ.

* ಆದರೆ ಅನೇಕ ಕ್ರಿಯಾವಿಶೇಷಣಾವ್ಯಯಗಳಲ್ಲಿ ವಿಸರ್ಗದ ಹಿಂದೆ अ ಇದ್ದರೂ ओ ಆಗದೆ ए ಆಗಿರುವದು. ಉದಾ—अध:>**अहे**; रह:>**रहे** श्व:>**सुवे**; पुर:>**पुरे** ಮುಂ.

(೨) ಅಂತ್ಯ ವಿಸರ್ಗದ ಹಿಂದೆ अ ದ ಹೊರ್ತಾಗಿ ಬೇರೆ ಸ್ವರವಿದ್ದರೆ ಅದು ಲೋಪವಾಗುವದು. ಉದಾ—देवा:>**देवा**; नरा:>**नरा.**

* ಅಂತ್ಯವಿಸರ್ಗದ ಹಿಂದಿನ ಸ್ವರವು इ ಅಥವಾ उ ಇದ್ದರೆ ವಿಸರ್ಗವು ಲೋಪವಾಗುವದಲ್ಲದೆ ಹಿಂದಿನ ಸ್ವರವು ದೀರ್ಘವಾಗುವದು.

ಉದಾ— तरु:>**तरू**; गुरु:>**गुरू**; मुनि:>**मुणी**; साधु:>**साहू**; गिरि:>**गिरी** ಮುಂ.

## ಅಸಂಯುಕ್ತ ವ್ಯಂಜನಗಳು.

ಅರ್ಧಮಾಗಧಿಯಲ್ಲಿ ೨೭ ಅಸಂಯುಕ್ತ ವ್ಯಂಜನಗಳಿರುವವು. ಅವುಗಳನ್ನು ಕೆಳಗಿನಂತೆ ವರ್ಗೀಕರಿಸಬಹುದು.

ವ್ಯಂಜನಗಳ ವರ್ಗೀಕರಣ.*

| | | |
|---|---|---|
| ಕಂಠ — | क् ख् ग् घ् | ಕವರ್ಗ |
| ತಾಲವ್ಯ — | च् छ् ज् झ् ञ् | ಚವರ್ಗ |
| ಮೂರ್ಧನ್ಯ — | ट् ठ् ड् ढ् ण् | ಟವರ್ಗ |
| ದಂತ್ಯ — | त् थ् द् ध् न् | ತವರ್ಗ |
| ಓಷ್ಠ್ಯ — | प् फ् ब् भ् म् | ಪವರ್ಗ |
| ಅಂತಸ್ಥ — | य् र् ल् व् | |
| ಊಷ್ಮ — | स् | |
| ಮಹಾಪ್ರಾಣ — | ह् | |
| ಅನುಸ್ವಾರ — | ं | |

ಮೊದಲಿನ ಐದು ವರ್ಣಗಳಲ್ಲಿ ಕೊನೆಯದು **ಅನುನಾಸಿಕ**ವೆಂದೂ ಉಳಿದ ನಾಲ್ಕು **ಸ್ಪರ್ಶ**ಗಳೆಂದೂ ಹೇಳಲ್ಪಡುವವು. ಎರಡನೆಯ ಮತ್ತು ಮೂರನೆಯ ವರ್ಣಗಳು ಕ್ರಮವಾಗಿ ಒಂದು ಮತ್ತು ಮೂರನೆಯ ವರ್ಣಗಳಿಗೆ ह् ಕಾರ ಕೂಡಿ ಆಗಿರಬೇಕೆಂದು ತಿಳಿಯಲಾಗಿದೆ. ಉದಾ -क्+ह्=ख् ; ग्+ह्=घ् ಇತ್ಯಾದಿ. ಹೀಗೆ ಇವು ಒಂದು ದೃಷ್ಟಿಯಿಂದ ಸಂಯುಕ್ತವ್ಯಂಜನಗಳೆನಿಸುವವು. ಆದರೆ ಅವುಗಳನ್ನು ಸಂಯುಕ್ತವೆಂದು ತಿಳಿಯುವದಿಲ್ಲ. ಇದಲ್ಲದೆ ಅರ್ಧಮಾಗಧಿಯಲ್ಲಿ ವಿಜಾತೀಯ ಸಂಯುಕ್ತ ಅಕ್ಷರಗಳು ಬರುವದೇ ಇಲ್ಲವಾದರೂ 'ह' ಕಾರದೊಡನೆ ಮೂರು ಅನುನಾಸಿಕಗಳೂ ಒಂದು ಅಂತಸ್ಥ ವ್ಯಂಜನವೂ ಕೂಡಿ ಆದ ण्ह, न्ह, म्ह, ल्ह, ಸಂಯುಕ್ತಾಕ್ಷರಗಳು ಉಪಯೋಗದಲ್ಲಿ ಕಂಡು ಬರುವವು. ಇದರಿಂದ ह ಕಾರದೊಡನೆ ಕೂಡಿದ ವ್ಯಂಜನವು ಸಂಯುಕ್ತವಲ್ಲವೆಂದು ತಿಳಿಯಬಹುದಾಗಿದೆ.

ಸ್ಪರ್ಶ ವ್ಯಂಜನಗಳಲ್ಲಿ ಕೆಳಗಿನಂತೆ ಎರಡೆರಡರ ೧೦ ಗುಂಪುಗಳನ್ನು ಮಾಡಬಹುದು.

क्—ख्, च्—छ्, ट्—ठ्, त्—थ्, प्—फ्.
ग्—घ्, ज्—झ्, ड्—ढ्, द्—ध्, ब्—भ्.

* ಸಂಸ್ಕೃತದಲ್ಲಿ ಅಸಂಯುಕ್ತ ವ್ಯಂಜನಗಳಾದ श ಮತ್ತು ष् ಸಂಯುಕ್ತ ವ್ಯಂಜನಗಳಾದ क्ष ಮತ್ತು ज्ञ ಇವು ಅರ್ಧಮಾಗಧಿಯಲ್ಲಿಲ್ಲ. ಉಳಿದೆಲ್ಲ ವ್ಯಂಜನಗಳೂ ಇರುವವು. 'ಳ' ಕಾರವು ಸಂಸ್ಕೃತದಲ್ಲಿ ಕೇವಲ ವೇದಗಳಲ್ಲಿ ಹೆಚ್ಚು ಉಪಯೋಗವಾಗಿರುವಂತೆ ತೋರುವದು. ಅದೂ ಅರ್ಧಮಾಗಧಿಯಲ್ಲಿಲ್ಲ.

ಈ ಗುಂಪುಗಳಲ್ಲಿ ಒಂದು ಗುಂಪಿನ ವರ್ಣವು ಮತ್ತೊಂದಕ್ಕೆ ಸಜಾತೀಯವೆನಿಸಬಹುದು. ಉಳಿದೆಲ್ಲವೂ ವಿಜಾತೀಯವೆನಿಸುವವು. ಉದಾ— **ಕ್ಕ** ಕಾರಕ್ಕೆ **ಖ್ಖ**; ಮತ್ತು **ಖ್ಖ** ಕಾರಕ್ಕೆ **ಕ್ಕ** ಸಜಾತೀಯವೆನಿಸುವವು. ಉಳಿದೆಲ್ಲವೂ ವಿಜಾತೀಯವೆನಿಸುವವು. ಇದೇಪ್ರಕಾರ ಅನುನಾಸಿಕದೊಡನೆ ಅದೇ ವರ್ಗದ ಸ್ಪರ್ಶ ವ್ಯಂಜನವು ಕೂಡಿದರೆ ಅದು ಸಂಯುಕ್ತವೆನಿಸುವದಿಲ್ಲ. ಯಾಕಂದರೆ ಅನುಸ್ವಾರಕ್ಕೆ ಬದಲಾಗಿ ಪರಸವರ್ಣವನ್ನು ಬರೆಯುವ ರೂಢಿ ಇದೆ. ಉದಾ— **ಙ್ಕ ಞ್ಚ ಣ್ಟ ನ್ತ** ಮುಂ. ಆದರೆ ಅನುನಾಸಿಕವು ದ್ವಿತ್ವವಾದರೆ ಸಜಾತೀಯ ಸಂಯುಕ್ತವೆನಿಸುವದು. ಉದಾ— **ಣ್ಣ, ನ್ನ, ಮ್ಮ. ಙ್ಙ, ಞ್ಞ** ಗಳ ಉಪಯೋಗವು ಸಂಸ್ಕೃತದಲ್ಲಿಯೂ ಹೆಚ್ಚಾಗಿಲ್ಲ. ಎಂದಮೇಲೆ ಅರ್ಧಮಾಗಧಿಯಲ್ಲಿಯಂತೂ ಇಲ್ಲವೆ ಇಲ್ಲವೆಂದರೂ ತಪ್ಪಾಗದು. ಮತ್ತು ಇವುಗಳು ದ್ವಿತ್ವವಾಗುವದಿಲ್ಲ.*

## ಅಸಂಯುಕ್ತ ವ್ಯಂಜನಗಳ ವ್ಯತ್ಯಾಸವು.

ಸಂಸ್ಕೃತದ ಎಲ್ಲ ವ್ಯಂಜನಗಳೂ ಬಹುತರ ಅರ್ಧಮಾಗಧಿಯಲ್ಲಿದ್ದರೂ, ಸಂಸ್ಕೃತದಿಂದ ಶಬ್ದಗಳು ಅರ್ಧಮಾಗಧಿಯಲ್ಲಿ ಬರುವಾಗ ಅನೇಕ ವ್ಯತ್ಯಾಸಗಳು ಆಗುವವು. ಯಾವ ವ್ಯಂಜನದ ಬದಲು ಯಾವದು ಬರುವದೆಂಬದು ಶಬ್ದದಲ್ಲಿಯ ಆ ವ್ಯಂಜನದ ಸ್ಥಾನವನ್ನು ಅವಲಂಬಿಸಿರುವದು. ಹೀಗೆ ಸ್ಥಾನದ ವಿಚಾರದಿಂದ ಶಬ್ದದಲ್ಲಿ ಎರಡು ಭಾಗಗಳನ್ನು ಮಾಡಬಹುದು— **ಆದ್ಯಕ್ಷರ** ಮತ್ತು **ಅನಾದ್ಯಕ್ಷರ** ಎಂದು. ಅನಾದ್ಯಕ್ಷರದಲ್ಲಿ ಮತ್ತೆ **ಮಧ್ಯಾಕ್ಷರ** ಮತ್ತು **ಅಂತ್ಯಾಕ್ಷರ**ವೆಂದು ಎರಡು ಭೇದಗಳನ್ನು ಕಲ್ಪಿಸಬಹುದು. ಹೀಗೆ ಅಕ್ಷರವು **ಆದ್ಯ, ಅಂತ್ಯ** ಅಥವಾ **ಮಧ್ಯ**ವಾಗಿರುವದರ ಮೇಲಿಂದ ಶಬ್ದಗಳಲ್ಲಿಯ ವ್ಯತ್ಯಾಸವು ಬೇರೆ ಬೇರೆಯಾಗುವದು. ಈ ಮೂರು ಭೇದಗಳನ್ನು ಕೆಳಗಿನ ಉದಾಹರಣೆಯಿಂದ ತಿಳಿಯಬಹುದು.

**(೧) ಆದ್ಯಕ್ಷರ**— ಶಬ್ದದ ಮೊದಲನೆಯ ಅಕ್ಷರ. ಉದಾ— 'ಕಮಲ' ಶಬ್ದದಲ್ಲಿಯ **ಕ**.

**(೨) ಮಧ್ಯಾಕ್ಷರ**— ಶಬ್ದದ ಆದ್ಯ ಮತ್ತು ಅಂತ್ಯಗಳ ನಡುವಿನ ಅಕ್ಷರ. ಉದಾ— 'ಕಮಲ' ದಲ್ಲಿಯ **ಮ**.

* ಈ ಎಲ್ಲ ವಿವೇಚನೆಯು ಸಂಯುಕ್ತವ್ಯಂಜನಗಳ ವ್ಯತ್ಯಾಸವನ್ನು ತಿಳಿಯಲು ಉಪಯುಕ್ತವಾಗುವದು.

(೩) **ಅಂತ್ಯಾಕ್ಷರ—** ಶಬ್ದದ ಕೊನೆಯ ಅಕ್ಷರ, ಉದಾ–'ಕಮಲ' ದಲ್ಲಿಯ **ಲ.**

ಈಗ ಇವುಗಳನ್ನು ಒಂದೊಂದಾಗಿ ವಿಚಾರ ಮಾಡಬಹುದು.

**ಆದ್ಯ ವ್ಯಂಜನಗಳ ವ್ಯತ್ಯಾಸ** *

(೧) **ಶ್**, **ಷ್** ಮತ್ತು **ಯ್** ಇವುಗಳನ್ನುಳಿದು ಯಾವ ವ್ಯಂಜನವೂ ಆದಿಯಲ್ಲಿದ್ದರೆ ಬದಲಾಗುವದಿಲ್ಲ. **ಶ್ ಷ್** ಇವು ಅರ್ಧಮಾಗಧಿಯಲ್ಲಿಲ್ಲವಾದ್ದರಿಂದ ಅವು ಯಾವ ಸ್ಥಾನ (ಆದ್ಯ, ಮಧ್ಯ ಅಥವಾ ಅಂತ್ಯ) ದಲ್ಲಿದ್ದರೂ ಬದಲಾಗುವವು. **ಶ್**, **ಷ್** ಇವುಗಳಿಗೆ **ಸ್** ಕಾರವೂ **ಯ್** ಕ್ಕೆ **ಜ್** ಕಾರವೂ ಬರುವವು.

ಉದಾ— **ಆದ್ಯ ಶ್**, **ಷ್>ಸ್.** शाला>**साला**; शेष>**सेस**; शाक>**साग** (ಕಾಯಿಪಲ್ಲೆ); षण्ड>**संड** (ಗಿಡಗುಂಪು); षष्ठि>**सट्ठि**; (೬೦); शास्त्र>**सात्थ**; शब्द>**सद्द** (ಧ್ವನಿ); शत>**सय** (೧೦೦) षोडश>**सोलस** (೧೬) ಮುಂ.

**ಅನಾದ್ಯ—** ಶ್, ಷ್, पशु>**पसु**; आकाश>**आगास**; राशि>**रासि**; केश>**केस**; कषाय>**कसाय** (ಮನೋವಿಕಾರ); विष>**विस**; पुरुष>**पुरिस** ಮುಂ.

× **ಅಪವಾದ—** ಕೆಲವೆಡೆ **ಶ್**, **ಷ್** ಗಳಿಗೆ **ಸ್** ಕ್ಕೆ ಬದಲು **ಛ್** ಬರುವದು.

ಉದಾ शाव>**छाव**; (ಕರು ಅಥವಾ ಮರಿ) षट्>**छ** (೬) षट्पद>**छप्पय** (ಆರು ಕಾಲಿನ) सुधा>**छुहा**; षण्मास>**छम्मास** ಮುಂ.

**ಆದ್ಯ—** य्>ज्. युवराज>**जुवराय**; यौवन>**जोव्वण**; यज्ञ>**जन्न**; यक्ष>**जक्ख**; यशस>**जस**; यदि>**जइ**; यम>**जम**; युक्त>**जुत्त** (ಯೋಗ್ಯ); यान>**जाण** (ವಾಹನ); यथा>**जहा.**

**सम्** ಉಪಸರ್ಗದೊಡನೆ ಕೂಡಿದ ಆದಿ **य्** ಕಾರಕ್ಕೂ **ज्** ಆಗುವದು. ಇತರ ಕಡೆಗೆ ಆಗುವದಿಲ್ಲ. ಉದಾ संयोग>**संजोग**; संयम>**संजम**; संयुक्त>**संजुत्त**; ಆದರೆ प्रयोजन>**पओयण.**

---

* ಪ್ರತಿಯೊಂದು ಶಬ್ದಕ್ಕೆ ಆದ್ಯಕ್ಷರವಿದ್ದೇ ಇರುವದು. ಎರಡು ಅಕ್ಷರಗಳ ಶಬ್ದಕ್ಕೆ ಮಧ್ಯಾಕ್ಷರವಿರುವದಿಲ್ಲ. ಉದಾ **नर** ಇದರಲ್ಲಿ **न** ಆದ್ಯಕ್ಷರವೂ **र** ಅಂತ್ಯಾಕ್ಷರವೂ ಆಗಿವೆ. ಮೂರು ಅಥವಾ ಅದಕ್ಕಿಂತ ಹೆಚ್ಚು ಅಕ್ಷರಗಳಿರುವ ಶಬ್ದಗಳಲ್ಲಿ ಮಧ್ಯವ್ಯಂಜನವು ಒಂದು ಅಥವಾ ಹೆಚ್ಚು ಇರಬಹುದು ಉದಾ—**समण**, **करकण्डु** ಮುಂ.

ಅವ್ಯಯೀಭಾವ ಸಮಾಸದಲ್ಲಿ **यथा** ಅಥವಾ **यावत्** ಪೂರ್ವಪದವಾಗಿ ದ್ದರೆ **य** ಕ್ಕೆ **ज** ಅಥವಾ **अ** ಆಗುವದು. ಉದಾ— यथाशक्ति>**जहासत्ति** ಅಥವಾ **अहासत्ति**; यथासुख>**जहासुह** ಅಥವಾ **अहासुह**; यावत्कथा>**जावकहा** ಅಥವಾ **आवकहा**; यावच्चन्द्र>**जावच्चंद** ಅಥವಾ **आवच्चंद** ಮುಂ.

(೨) ಸಾಮಾಸಿಕ ಪದದಲ್ಲಿಯ ದ್ವಿತೀಯ ಪದದ ಆದ್ಯ ಅಕ್ಷರಕ್ಕೆ ಆದ್ಯಕ್ಷರ ಅಥವಾ ಮಧ್ಯಾಕ್ಷರದ ನಿಯಮವು ಅನ್ವಯಿಸುವದು. ಆದ್ದರಿಂದ ಎರಡೂ ಬಗೆಯರೂಪಗಳು ರೂಢಿಯಲ್ಲಿರುವವು. ಉದಾ— **त्रिभुवन**> **तिहुयण** ಅಥವಾ **तिभुवन**; सुखकर>**सुहयर** ಅಥವಾ **सुहकर**; जलचर>**जलयर** ಅಥವಾ **जलचर**; ಅದೇಪ್ರಕಾರ **न** जानाति ಎಂಬುದಕ್ಕೆ **न याणइ** ಅಥವಾ **जाणइ** ಎಂದು ಎರಡೂ ರೂಪಗಳು ಆಗುವವು.

ಆದ್ಯವ್ಯಂಜನವು ವರ್ಗದ ಒಂದನೆಯ ಅಥವಾ ಮೂರನೆಯ ವರ್ಣವಾಗಿದ್ದರೆ ಅವಕ್ಕೆ ಪ್ರತಿಯಾಗಿ ಕ್ರಮವಾಗಿ ಎರಡನೆಯ ಅಥವಾ ಮೂರನೆಯವರ್ಣವಾಗುವದೂ ಉಂಟು.

ಉದಾ— कुब्ज>**खुज**; गृह>**घर**; परुष>**फरुस**; बिस>**भिस** ಮುಂ.

ಆದರೆ ಒಮ್ಮೊಮ್ಮೆ ಇದಕ್ಕೆ ವಿರುದ್ಧ ರೀತಿಯೂ ಆಗಬಹುದು.

ಉದಾ— भीषण>**बीहण**.

**ಕೆಲವು ಅನಿಯಮಿತ ವ್ಯತ್ಯಾಸಗಳು**

| | |
|---|---|
| क्>ग् | कन्दुक>**गेन्दुअ** (ಚೆಂಡು) |
| क्>च् | किरात>**चिलाय** (ಬೇಡ) |
| क्>त् | किरीट>**तिरीड** |
| च्>त् | चिकित्सा>**तिगिच्छा** |
| च्>य् | चापि>**यावि** |
| ज्>य् | जुगुप्सा>**दुगुच्छा** (ತಿರಸ್ಕಾರ) |
| त्>च् | तिष्ठति>**चिट्ठइ** |
| द्>ड् | दह>**डह** |
| ब्>म् | ब्राह्मण>**माहण** |
| म्>व् | मन्मथ>**वम्मह** |

य्>ल् यष्टि>लट्ठि (ಕೋಲು)

ल्>न् लांगूल>नंगूल

**ಮಧ್ಯವ್ಯಂಜನಗಳ ವ್ಯತ್ಯಾಸಗಳು.**

**(೧) यश्रुति**

क्, ग्, च्, ज्, त् ಮತ್ತು द् ಇವು ಅನಾದಿಯಾಗಿಯೂ ಅಸಂಯುಕ್ತವಾಗಿಯೂ ಇದ್ದರೆ ಅವು ಲೋಪವಾಗುವವು. ಹೀಗೆ ಲೋಪವಾಗುವ ವ್ಯಂಜನವು ಎರಡು ಸ್ವರಗಳ ಮಧ್ಯದಲ್ಲಿರುವದು. ಉದಾ **नगर** ಈ ಶಬ್ದದಲ್ಲಿಯ ಮಧ್ಯ **ग्** ವು **न्+अ ग्+अ र्+अ**, ಎರಡುಸ್ವರಗಳ ಮಧ್ಯದಲ್ಲಿರುವದು. ಆದ್ದರಿಂದ **नगर** ಇದು **नअर** ಆಗುವದು. ಹೀಗೆ ವ್ಯಂಜನವು ಲೋಪವಾಗಿ **अ** ಅಥವಾ **आ** ಉಳಿಯುತ್ತಿದ್ದರೆ ಅದನ್ನು **य्** ಕೂಡಿಸಿ ಉಚ್ಚರಿಸುವದು ಕಂಡು ಬರುವದು. ಇದುವೆ **यश्रुति** ಎನಿಸುವದು. ಆದ್ದರಿಂದ **नगर>नयर, सकल>सयल** ಮೊದಲಾದ ರೂಪಗಳಾಗುವವು. **अ, आ** ದ ಹೊರತಾಗಿ ಬೇರೆ ಸ್ವರವು ಉಳಿಯುತ್ತಿದ್ದರೆ **य** ದ ಬಳ್ಳಿಯೆನಿಸುವ ಇತರ ಅಕ್ಷರಗಳು ಬರುವದಿಲ್ಲ. ಅರ್ಧಮಾಗಧಿಯಲ್ಲಿ **य, या, इ, ई, उ, ऊ, ए**, (ಹ್ರಸ್ವ), **ए** (ದೀರ್ಘ), **ओ** (ಹ್ರಸ್ವ), **ओ** (ದೀರ್ಘ), **ओ** (ವಿಸರ್ಗ) ಇವು **य** ದ ಬಳ್ಳಿಯೆನಿಸುವವು. ಆದ್ದರಿಂದ **सुपुरुष** ಇದಕ್ಕೆ **सुउरिस** ಎಂಬ ರೂಪವಾಗುತ್ತಿದ್ದು **सुयुरिस** ಆಗುವದಿಲ್ಲ. **यश्रुति** ಯು ನಿಯಮವು ಈ ಪ್ರಕಾರ ಯಾವುದಾದರೊಂದು ವ್ಯಂಜನವು ಲೋಪವಾಗಿ **अ** ಅಥವಾ **आ** ಉಳಿಯುತ್ತಿದ್ದರೆ ಮಾತ್ರ ಅನ್ವಯಿಸುವದು. ಸಂಸ್ಕೃತ ಶಬ್ದದಲ್ಲಿಯೆ ಇರುವ **अ आ** ಗಳಿಗೆ **य, या** ಬರುವದಿಲ್ಲ. ಆದುದರಿಂದ **आपदा, अंग** ಮೊದಲಾದ ಶಬ್ದಗಳು **यापया, यंग** ಹೀಗೆ ಆಗುವದಿಲ್ಲ.

**यश्रुति ಯು ಉದಾಹರಣೆಗಳು.**

क् य् शूकर>**सूयर** (ಹಂದಿ); नरक>**नरय**; कनक>**कणय**; जनक>**जणय**; उदक>**उदय**.

ग् य् नगर>**नयर**; सागर>**सायर**; मृग>**मिय**; छाग>**छाय**.

च य् कच>**कय**; नीच>**नीय**; वचन>**वयण**; आचार>**आयार**; उपचार>**उवयार**

ज् य् पूजा>पूया; रजत>रयय; प्रजा>पया; गज>गय; परिजन>परियण.

त् य् पिता>पिया; माता>माया; शत>सय.

द् य् कदली>कयली (ಬಾಳೆ); उदर>उयर; प्रासाद>पासाय (ಅರಮನೆ); पाद>पाय.×

(೨) ख्, घ्, थ्, ध्, फ्, भ् ಇವು ಅನಾದಿ ಮತ್ತು ಅಸಂಯುಕ್ತವಾಗಿದ್ದರೆ ಅವುಗಳ ह् ಮಾತ್ರ ಉಳಿಯುವದು.

ख् शाखा>साहा; सखि>सहि; सुख>सुह; नख>नह; मेखला>मेहला (ಡಾಬು)

घ् मेघ>मेह; राघव>राहव; मघा>महा (ಒಂದು ನಕ್ಷತ್ರ); अमोघ>अमोह (ತಪ್ಪದೆ).

थ् यथा>जहा; रथ>रह; कथा>कहा मिथुन>मिहुण; अनाथ>अणाह; यूथ>जूह.

ध् मधु>महु; साधु>साहु. वध>वह; दधि>दहि; बधिर>बहिर; विविध>विविह.

फ मुक्ताफल>मुत्ताहल (ಮುತ್ತು); रेफ>रेह (ರ ಕಾರ); विफल>विहल; सफल>सहल.

भ् शुभ>सुह; शोभा>सोहा; नभस्>नह; विभव>विहव; सभा>सहा; लाभ>लाह; लोभ>लोह.

(೩) ಅನಾದಿ ಮತ್ತು ಅಸಂಯುಕ್ತ ट् ಮತ್ತು ठ ಇವುಗಳಿಗೆ ड् ಮತ್ತು ढ् ಆಗುವದು.

× ಅಪವಾದಗಳು

क् ग् एक>एग; कनक>कणग; उदक>दग.

आगम, भोग ಇವುಗಳಲ್ಲಿಯು ग् ಲೋಪವಾಗುವದಿಲ್ಲ. ಮತ್ತು योग>जोग ಎಂದಾಗುವದು.

ಅದರಂತೆ ಕೆಳಗಿನ ಶಬ್ದಗಳಲ್ಲಿರುವ त् द् ಗಳು ಲೋಪವಾಗುವದಿಲ್ಲ.

वितथ>वितह; उदधि>उदहि; उदक>उदग; विदित>विदिय.

ಉದಾ— **ट्>ड्** पट>**पड**; भट>**भड** (ಸೈನಿಕ); घट>**घड**; शाटी>**साडी**; वट>**वड**; नाटक>**नाडय.**

**ठ् ढ्** शठ>**सढ**; पठति>**पढइ**; पादपीठ>**पायवीढ**; कुठार>**कुढार** (ಕೊಡ್ಲಿ).

(೪) ಅನಾದಿ ಮತ್ತು ಅಸಂಯುಕ್ತವಾದ **त् थ्** ಗಳಿಗೆ **ड् ढ्** ಗಳೂ ಆಗುವವು.

ಉದಾ— **त्>ड्** पतित>**पडिय**; प्रति>**पडि**; प्रतिमा>**पडिमा**; प्रतिपन्न>**पडिवन्न.**

**थ्>ढ्** प्रथम>**पढम**; पृथ्वी>**पुढवी**; शिथिल>**सिढिल.***

(೫) **न्** ಕಾರವು ಅನಾದಿ ಮತ್ತು ಅಸಂಯುಕ್ತವಾಗಿದ್ದರೆ **ण्** ಆಗುವದು. ಆದ್ದರಿಂದ '**नयन**' ಶಬ್ದದಲ್ಲಿಯ ಕೊನೆಯ '**न**' ವು **ण** ಆಗುವದು. ಮೊದಲನೆಯದು ಆಗುವದಿಲ್ಲ. ಸಂಸ್ಕೃತದಲ್ಲಿಯೇ ಇರುವ **ण्** ಕಾರವು ಹಾಗೆಯೆ ಉಳಿಯುವದು. ಉದಾ— **गण, विणा** ಮುಂ. ಆದ್ಯ **न्** ಕಾರಕ್ಕೂ **ण्** ಮಾಡಿದ್ದು ಕಂಡುಬರುವದು. ಆದರೆ ಅರ್ಧಮಾಗಧಿ ಮತ್ತು ಜೈನ ಮಹಾರಾಷ್ಟ್ರೀ ಭಾಷೆಗಳಲ್ಲಿಯ ರೀತಿಯನ್ನು ನೋಡಿದರೆ ಮತ್ತು ಪ್ರಾಕೃತ ವ್ಯಾಕರಣವಿದರ ಅಭಿಪ್ರಾಯವನ್ನು ಲಕ್ಷಿಸಿದರೆ ಹೀಗೆ ಮಾಡುವದು ಸರಿಯೆನಿಸುವದಿಲ್ಲ. ಜೈನೇತರರು ಬರೆದ ಅರ್ಧಮಾಗಧಿ ವ್ಯಾಕರಣಗಳಲ್ಲಿ ಆದ್ಯ **न्** ಕ್ಕೆ **ण्** ಹೇಳಿರುವಂತೆ ತಿಳಿಯುವದು. ಆದರೆ ಪ್ರೊ. **ಜೈನ** ಮತ್ತು ಡಾ. **ಪ. ಲ. ವೈದ್ಯ** ಇವರು ಕೂಡ ಇದನ್ನು ಒಪ್ಪುವದಿಲ್ಲ. ಅವರು ಆದ್ಯ **न्** ಕ್ಕೆ **ण्** ಹೇಳದೆ ಅನಾದ್ಯ **न्** ಕ್ಕೆ **ण्** ಹೇಳಿರುವರು. ಅವರು ತಮ್ಮಿಂದ ಸಂಪಾದಿತವಾದ ಗ್ರಂಥಗಳಲ್ಲಿ ಈ ನಿಯಮವನ್ನು ಅನುಸರಿಸಿರುವರು. ಸಂಸ್ಕೃತದಲ್ಲಿಯ **ननु** ಎಂಬ ಅವ್ಯಯಕ್ಕೆ **णं** ಎಂದು ರೂಪವಾಗುವದು; ಮತ್ತು ಇದೊಂದೇ ಆದ್ಯ **न्** ಕ್ಕೆ **ण्** ಆಗುವ ಅಪವಾದ ಶಬ್ದವು ಸಿಗುವದು. ಇದು ವ್ಯಾಕರಣಕಾರರಿಂದ ಒಪ್ಪಿತವಾಗಿರುವದು.

---

* ಸಂಸ್ಕೃತದಲ್ಲಿಯ ಅನೇಕ ಕರ್ಮಣಿ ಭೂತಕೃದಂತ ವಿಶೇಷಣಗಳಲ್ಲಿಯ **त्** ಕ್ಕೆ **ड्** ಆಗುವದುಂಟು. ಉದಾ— कृत>**कड**; मृत>**मड**; हृत>**हड**; परिवृत>**परिवुड**

× **ಅಪವಾದ**— **त्** ಕ್ಕೆ **ड्** ಆಗದೆ ಹಲವು ಕಡೆಗೆ ಲೋಪ ಬರುವದುಂಟು. **यश्रुति** ಯ ನಿಯಮಗಳಲ್ಲಿಯ **त्** ದ ಉದಾಹರಣೆಗಳಲ್ಲಿ ನೋಡಬೇಕು.

न्>ण् कनक>कनय; अनेक>अणेग; वन>वण; सेना>सेणा; वचन>वयण; कानन>काणण.

(೬) ಅನಾದಿ ಮತ್ತು ಅಸಂಯುಕ್ತವಾದ ट्, ड्, त्, द् ಈ ಸ್ಪರ್ಶ ವ್ಯಂಜನಗಳಿಗೂ ण् ಅನುನಾಸಿಕಕ್ಕೂ ಒಮ್ಮೊಮ್ಮೆ ल् ಬರುವದುಂಟು.

ಉದಾ— ट्>ल् स्फटिक>फलिह चपेटा>चवेला.

ड्>ल् पीडा>पीला; गरुड>गरुल; षोडश>सोलस.

त्>ल् सातवाहन>सालिवाहन.

द्>ल् कदम्ब>कलम्ब (ಒಂದು ಗಿಡ) द्वादश>दुवालस (೧೨)

ण्>ल् वेणु>वेलु.

(೭) ಅನಾದಿ ಮತ್ತು ಅಸಂಯುಕ್ತವಾದ प्, व् ಗಳಿಗೆ ಬಹುಶಃ ಲೋಪವಾಗುವದು. ಮತ್ತು ಅವು ಲೋಪವಾಗಲು ಉಳಿಯುವ ಸ್ವರವು अ, आ ಇದ್ದರೆ यश्रुति ಆಗುವದು. ಉದಾ—

प्. रिपु>रिउ; निपुण>निउण; त्रपु>तउ (ತವರ); वपु>वउ (ದೇಹ).

× ಅಪವಾದ. पाप>पाव; नृप>निव; शाप>साव.

व्. लावण्य>लायण्य; दिवस>दियह; दिवा>दिया; निवृत्त>नियत्त. (ತಿರುಗಿದ).

× ಅಪವಾದ. व् ಕಾರಕ್ಕೆ ಕೆಲವೆಡೆ ಲೋಪವಾಗುವದಿಲ್ಲ.

देव>देव; विवेक>विवेग; विवाह>विवाह.

(೮) ಅನಾದಿ ಮತ್ತು ಅಸಂಯುಕ್ತವಾದ य् ಕಾರದ ಹಿಂದೆ अ ಅಥವಾ आ ಇದ್ದರೆ य् ಕಾರಕ್ಕೆ ಲೋಪವಾಗುವದಿಲ್ಲ. ಆದರೆ अ, आ ಗಳ ಹೊರತಾಗಿ ಬೇರೆ ಸ್ವರವಿದ್ದರೆ य् ಕಾರವು ಲೋಪವಾಗುವದು. ಉದಾ — काय>काया (ಶರೀರ); माया>माया; ಆದರೆ वियोग>विओग.×

(೯) ಅನಾದಿ ಮತ್ತು ಅಸಂಯುಕ್ತವಾದ र् ಕಾರಕ್ಕೆ ಬಹುಶಃ ल् ಬರುವದು. ಉದಾ— करुण>कलुण; चरण>चलण; सुकुमार>सुकुमाल; दरिद्र>दलिद्द; ಆದರೆ ಇದಕ್ಕೆ ವಿರುದ್ಧವಾಗಿ ಒಮ್ಮೊಮ್ಮೆ ल् ಕಾರಕ್ಕೆ र् ಬರುವದೂ ಉಂಟು. ಉದಾ — किल>किर; शाल्मली>शावरी (ಬೂರಲ ಅರಳೆ);

× ಅಪವಾದ— वायु>वाउ; प्रिय>पिय.

ड्, त् ಮತ್ತು द् ಗಳಿಗೆ र् ಆಗಿರುವದೂ ಕೆಲವು ಕಡೆಗೆ ಕಂಡು ಬರುವದು. ಉದಾ— वैडूर्य>**वेरुलिय**; (ಒಂದು ರತ್ನ) बिडाल>**विराल** (ಬೆಕ್ಕು); उदार >**उराल**; द्वादश>**बारह** (ಹನ್ನೆರಡು).

(೧೦) श्, ष्, स् ಕಾರಗಳಿಗೆ ಕೆಲವು ಕಡೆಗೆ ह् ಕಾರವಾಗಿರುವದು.

ಉದಾ— श् ह् दशमुख>**दहमुह**; दश>**दह** (ಹತ್ತು).
ष् ह् पाषाण>**पाहाण**; भीषण>**बीहण**.
स् ह् दिवस>**दियह**.

ಮೇಲಿನ ವಿವೇಚನೆಯಿಂದ ಸಾಮಾನ್ಯವಾಗಿ ಮಧ್ಯವ್ಯಂಜನವು ಹೇಗೆ ಬದಲಾಗುವದೆಂಬುದು ತಿಳಿಯುವದು. ಇದಲ್ಲದೆ ಮತ್ತೆ ಅನೇಕ ಪ್ರಕಾರದ ವ್ಯತ್ಯಾಸಗಳೂ ಇರುವವು. ಅವು ಅನೇಕ ಪ್ರಕಾರವಾಗಿರುವದರಿಂದ ಅವುಗಳಿಗೆ ನಿರ್ದಿಷ್ಟವಾದ ನಿಯಮಗಳನ್ನು ಏರ್ಪಡಿಸುವದು ಸಾಧ್ಯವಿಲ್ಲ. ಅವೆಲ್ಲವುಗಳನ್ನು ಅಪವಾದಗಳೆಂದು ತಿಳಯಬಹುದು. ಕೆಳಗೆ ಕೆಲವು ಉದಾಹರಣೆಗಳನ್ನು ಇಂತಹ ರೂಪಗಳ ಪ್ರಕಾರವು ತಿಳಿಯಲೆಂದು ಕೊಡಲಾಗಿದೆ. ಎಲ್ಲ ಶಬ್ದಗಳನ್ನು ಇಲ್ಲಿ ಕೊಡುವದು ಸಾಧ್ಯವಿಲ್ಲ ಮತ್ತು ಅವಶ್ಯವಿಲ್ಲ.

**ಕೆಲವು ಅನಿಯಮಿತ ವ್ಯತ್ಯಾಸಗಳು.**

| ಸಂಸ್ಕೃತ ವ್ಯಂಜನ | ಅರ್ಧಮಾಗಧಿ ವ್ಯಂಜನ | ಉದಾಹರಣೆಗಳು |
|---|---|---|
| क् | ह् | फलक>**फलह** (ಫಳ); स्फटिक>**फलिह**. |
| क् | व् | स्तोक>**थोव** (ಸ್ವಲ್ಪ). |
| ग् | व् | युगल>**जुवल** |
| ठ् | ह् | कुठार>**कुहाड** (ಕೊಡ್ಲಿ); पिठर>**पिहड** (ಪಾತ್ರೆ). |
| त् | द् | उताहो>**उदाहु** (ಅಥವಾ) |
| त् | ह् | भारत>**भारह**; भरत>**भरह**. |
| ब् | म् | कबंध>**कमंध**. |
| ब् | व् | शिबिका>**सिविया** (ಪಲ್ಲಕಿ); शबर>**सवर**; अलाबु> **अलावु**. |
| व्, प् | म् | वैश्रवण>**वेसमण**; आपीड>**आमेल**. |
| व् | य् | दिवस>**दियह**; परिवार>**परियाल**. |

**ಅಂತ್ಯವ್ಯಂಜನಗಳ ವ್ಯತ್ಯಾಸ.**

ಅರ್ಧಮಾಗಧಿಯಲ್ಲಿ ಸಂಸ್ಕೃತದಂತೆ ವ್ಯಂಜನಾಂತ್ಯ ಶಬ್ದಗಳಿಲ್ಲ. ಸಂಸ್ಕೃತದ ವ್ಯಂಜನಾಂತ್ಯಗಳನ್ನು ಕೆಳಗಿನಂತೆ ಎರಡು ಬಗೆಯಿಂದ ಸ್ವರಾಂತ್ಯವಾಗಿ ಮಾಡಲಾಗುವದು.

(೧) ಅಂತ್ಯವ್ಯಂಜನ ಲೋಪ ಮಾಡುವದು. ಉದಾ— तावत्>**ताव**; यावत्>**जाव**; धनुस्>**घणु**; शिरस्>**सिर**; परिषद्>**परिसा.**

(೨) ಅಂತ್ಯವ್ಯಂಜನಕ್ಕೆ ಒಂದು ಸ್ವರ ಸೇರಿಸುವದು. ಮೂಲಶಬ್ದವು ಪುಲ್ಲಿಂಗವಾಗಿದ್ದರೆ **अ** ಮತ್ತು ಸ್ತ್ರೀಲಿಂಗವಿದ್ದರೆ **आ** ಅಥವಾ **ई** ಕೂಡಿಸುವರು. **ಉದಾ**— प्रावृष्>**पाउस**; शरद्>**सरय** (ಒಂದು ಋತು): मरुत्>**मरुय** (ಗಾಳಿ); सरित्>**सरिया**; दिक्>**दिसा**; अपद्>**आवई.**

* ವ್ಯಂಜನಾಂತವಾದ ಸಂಸ್ಕೃತ ಧಾತುಗಳಿಗೆ अ ಕೂಡಿಸುವದುಂಟು. ಉದಾ—हस्>**हस**; कथ्>**कह** ಮುಂ.

ಸಂಸ್ಕೃತದಲ್ಲಿ ಅಂತ್ಯವ್ಯಂಜನವು **न्** ಅಥವಾ **म्** ಇದ್ದರೆ ಅದು ಅನುಸ್ವಾರವಾಗುವದು. ಉದಾ— भगवन्>**भयवं**; इदानीम्>**इयाणिं** (ಈಗ) ಕೆಲವು ಅವ್ಯಯಗಳ ಅಂತ್ಯ ವ್ಯಂಜನವು **न्** ಅಥವಾ **म्** ಇರದಿದ್ದರೂ ಅನುಸ್ವಾರವು ಬರುವದುಂಟು. ಉದಾ—मनाक्>**मणं** (ಸ್ವಲ್ಪ); साक्षात्>**सक्खं**; प्रातस्>**पायं** (ಮುಂಜಾನೆ) ಮುಂ.

**ಉಚ್ಚಾರ ಸುಲಭವಾಗಲು ಮಾಡಿದ ವಿವಿಧ ರೀತಿಗಳು.**

ಮೇಲಿನ ವಿವೇಚನೆಯಿಂದ ಅಸಂಯುಕ್ತವ್ಯಂಜನವು ಹೇಗೆ ಮಾರ್ಪಡುವದೆಂಬದನ್ನು ನೋಡಲಾಯಿತು. ಈ ಎಲ್ಲ ರೀತಿಗಳು ಸಂಸ್ಕೃತದ ಶಬ್ದಗಳ ಉಚ್ಚಾರವನ್ನು ಸುಲಭಮಾಡುವದಕ್ಕಾಗಿ ಎಂದು ಹೇಳಬಹುದು. ಈ ದೃಷ್ಟಿಯಿಂದ ಇನ್ನೂ ಒಂದೆರಡು ರೀತಿಗಳು ಕಂಡು ಬರುವವು. ಅವುಗಳನ್ನು ಕೆಳಗೆ ಕೊಡಲಾಗಿದೆ.

(೧) **ಅಕ್ಷರಲೋಪ—** ಸಂಸ್ಕೃತ ಶಬ್ದದಲ್ಲಿಯ ಒಂದೊಂದು ಅಕ್ಷರವೇ ಲೋಪವಾಗುವದು. ಉದಾ— देवकुल>**देउल**; राजकुल>**राउल**; जीवित>**जीय**; ननु>**णं**; अवट>**अड** (ಬಾವಿ) ಮುಂ. ಅನೇಕ ಸಲ ಒಂದೇ ಪ್ರಕಾರದ ಎರಡು ವರ್ಣಗಳು ಬರುತ್ತಿದ್ದರೆ ಒಂದು ಲೋಪವಾಗುವದು

ಉದಾ— अपररात्र>अवरत्त; हृदय>हिय; एवम्+एए>एमेए; एवमेव>एमेव ವುಂ.

(೨) **ವರ್ಣ ವಿಪರ್ಯಯ—** ಅವಸರದ ಉಚ್ಚಾರದಲ್ಲಿ ಅಕ್ಷರಗಳ ಸ್ಥಾನವೂ ಬದಲಾಗಬಹುದು. ಉದಾ— वाराणसि>**वाणारसी** ಇಲ್ಲಿ र् ण् ಗಳ ಸ್ಥಾನ ಅದಲುಬದಲಾಗಿರುವದು.

ಬೇರೆ ಉದಾಹರಣೆಗಳು—उपानह्>**उवानह>वानह>वाहण**; दीर्घ> **दीहर**; महाराष्ट्र>**मरहट्ठ**.

## ಸಂಯುಕ್ತ ವ್ಯಂಜನಗಳು.

ಒಂದು ಸ್ವರ ಮತ್ತು ಒಂದು ವ್ಯಂಜನ ಕೂಡಿದ ಅಕ್ಷರವು ಅಸಂಯುಕ್ತ ವೆನಿಸುವದು. ಉದಾ— **ग्+अ=ग.** ಆದರೆ ಒಂದಕ್ಕಿಂತ ಹೆಚ್ಚು ವ್ಯಂಜನ ಗಳು ಒಂದು ಸ್ವರದೊಡನೆ ಕೂಡಿದ್ದಾದರೆ ಅದು ಸಂಯುಕ್ತವೆನಿಸುವದು. ಉದಾ— **क्+र्+अ=क्र; क्+त्+र्+अ=क्त्र;** ಸಂಯುಕ್ತ ಅಕ್ಷರವು ಉಚ್ಚಾರಕ್ಕೆ ಕಠಿಣವಾಗುವದು.

ಅರ್ಧಮಾಗಧಿಯಲ್ಲಿ ಅರ್ಥಾತ್ ಪ್ರಾಕೃತ ಭಾಷೆಯಲ್ಲಿ ಸಂಯುಕ್ತ ಅಕ್ಷರವನ್ನು ಆದಷ್ಟು ತಪ್ಪಿಸುವದರ ಕಡೆಗೆ ಪ್ರಯತ್ನವು ಕಂಡುಬರುವದು. ಉಚ್ಚಾರ ಸುಲಭತೆಯೆ ಅದಕ್ಕೆ ಕಾರಣವೆನ್ನಬಹುದು. ಈ ಪ್ರಯತ್ನದ ಒಂದು ರೀತಿಯಂದರೆ ಶಬ್ದದಲ್ಲಿಯ ಸ್ವರ ವ್ಯಂಜನಗಳ ಸಂಖ್ಯೆಯನ್ನು ಸರಿ ಪಡಿಸುವದು. ಎಂದರೆ ಸ್ವರರಹಿತವಾದ ವ್ಯಂಜನಕ್ಕೆ ಸ್ವರ ಕೂಡಿಸಿ ಬಿಡು ವದು. ಉದಾ—**भार्या** ಶಬ್ದದಲ್ಲಿಯ **र्या** ದಲ್ಲಿ र् य् ಎರಡು ವ್ಯಂಜನಗಳೂ **आ** ಒಂದೇ ಸ್ವರವು ಇರುವವು. ಆದ್ದರಿಂದ ನಡುವೆ **इ** ಕಾರ ಸೇರಿಸಿದರೆ ಸರಿಯಾಗಿ, ಉಚ್ಚಾರಕ್ಕೆ **भारिया** ಎಂದು ಸುಲಭವಾಗುವದು. ಆದರೆ ಇದೇ ರೀತಿಯನ್ನು ಎಲ್ಲ ಕಡಿಗೂ ಅನುಸರಿಸುವದಿಲ್ಲ. ಸಂಸ್ಕೃತದಲ್ಲಿ ಒಂದು ವ್ಯಂಜನವು ಬೇಕಾದ ಮತ್ತೊಂದು ವ್ಯಜನದೊಡನೆ ಕೂಡಿದ ಒತ್ತಕ್ಕರವಾಗ ಬಹುದು. ಆದರೆ ಅರ್ಧಮಾಗಧಿಯಲ್ಲಿ ಒಂದು ವ್ಯಂಜನವು ಅದೇ ವ್ಯಂಜನ ದೊಡನೆ ಅಥವಾ ಅದಕ್ಕೆ ಸದೃಶ (ಉಚ್ಚಾರ ಪ್ರಯತ್ನದ ದೃಷ್ಟಿಯಿಂದ) ವೆನಿ ಸುವ ವ್ಯಂಜನದೊಡನೆ ಕೂಡಬಹುದು. ಇದಕ್ಕೆ ಸಂಸ್ಕೃತದಲ್ಲಿರುವ ವಿಜಾ ತೀಯ ಸಂಯುಕ್ತಾಕ್ಷರವು ಅರ್ಧಮಾಗಧಿಯಲ್ಲಿಲ್ಲವೆಂದೂ, ಅರ್ಧಮಾಗಧಿ

ಯಲ್ಲಿ ಸಜಾತಿಯ ಸಂಯುಕ್ತಾಕ್ಷರವು ಬರಬಹುದೆಂದೂ ಹೇಳಬಹುದು. ಒತ್ತ ಕ್ಕರದ ಈ ನಿಯಮದಿಂದ ಸಂಸ್ಕೃತದ ಅಸಂಖ್ಯವಾದ ಒತ್ತಕ್ಕರಗಳ ರೀತಿಯೆ ಕಡಿಮೆಯಾಗಿದೆಯೆನ್ನಬಹುದು. ಸಂಸ್ಕೃತದಲ್ಲಿಯ ಅಸಂಯುಕ್ತ ವ್ಯಂಜನವು ಅರ್ಧಮಾಗಧಿಯಲ್ಲಿ ಹೇಗೆ ವ್ಯತ್ಯಾಸಹೊಂದುವದೆಂಬುವದನ್ನು ವಿಚಾರಿಸು ವಾಗ ಸ್ಪರ್ಶ ವ್ಯಂಜನಗಳಲ್ಲಿ ಗುಂಪುಗಳನ್ನು ಕಲ್ಪಿಸಲಾಗಿದೆಯಷ್ಟೆ.* ಆ ಗುಂಪುಗಳಲ್ಲಿಯ ವರ್ಣವು ಪರಸ್ಪರ ಸಂಯುಕ್ತವಾಗಬಹುದು ಅಥವಾ ಅದೇವರ್ಗದ ಅನುನಾಸಿಕದೊಡನೆ ಕೂಡಬಹುದು. ಹೀಗೆ ङ् ದೊಡನೆ ङ्क ङ्ख ङ्ग ಎಂಬ ಮೂರೇ ಒತ್ತಕ್ಷರಗಳಾಗಬಲ್ಲವು. ह ಕಾರದೊಡನೆ ಆಗುವ ल्ह, म्ह, न्ह, ण्ह ಇವು ಉಪಯೋಗದಲ್ಲಿರುವವು. ಮತ್ತು ಇವುಗಳು ವಿಜಾತೀಯ ಸಂಯುಕ್ತಾಕ್ಷರಗಳೆಂದು ತೋರಿದರೂ ಹಾಗೆ ತಿಳಿಯಲಾಗುವದಿಲ್ಲ. ಏಕೆಂದರೆ ह ಕಾರದೊಡನೆ ಕೂಡಿದ ಅಕ್ಷರವು ಸಂಯುಕ್ತಾಕ್ಷರವೆಂದು ತಿಳಿಯಲ್ಪಡುವದಿಲ್ಲ. ಮಹಾಪ್ರಾಣಾಕ್ಷರದಲ್ಲಿ (ख् घ् ಇತ್ಯಾದಿ) ह ಕಾರವು ಕೂಡಿದೆಯೆಂದೇ ತಿಳಿಯುತ್ತಿದ್ದರೂ ಅವು ಅಸಂಯುಕ್ತ ವ್ಯಂಜನಗಳೆಂದೇ ಉಪಯೋಗಿಸಲ್ಪಡುವವು. क्ह ವೇ ख ಎಂದು ತಿಳಿದು ಉಚ್ಚಾರ ದೃಷ್ಟಿಯಿಂದ ಸ್ವತಂತ್ರ ವರ್ಣವನ್ನು ಕಲ್ಪಿಸಲಾಗಿರುವದು. ल्ह, म्ह, न्ह, ण्ह ಮುಂತಾದವುಗಳಿಗೆ ಸ್ವತಂತ್ರ ಬೇರೆ ವರ್ಣವಿಲ್ಲವೆಂಬುದೇ ಅವುಗಳು ಸಂಯುಕ್ತವೆಂದು ತಿಳಿಯಲು ಅವಕಾಶವಾಗಿರುವದೆನ್ನಬಹುದು. ಆದ್ದರಿಂದ ಇವು ಸಂಯುಕ್ತ ವ್ಯಂಜನಗಳಂತೆ ತೋರುವವು. ಆದರೆ ನಿಜವಾಗಿ ಹಾಗೆ ಇರುವದಿಲ್ಲ.

ಅರ್ಧಮಾಗಧಿಯಲ್ಲಿ ಐವತ್ತು ಒತ್ತಕ್ಷರಗಳು ಮಾತ್ರ ಬರುವವು. ಅವುಗಳಲ್ಲಿ **निरनुनासिक** ಮತ್ತು **सानुनासिक** ವೆಂದು ಎರಡು ಪ್ರಕಾರಗಳನ್ನು ಮಾಡಿದೆ.

**निरनुनासिक ೨೪** — **क्क, क्ख, ग्ग, ग्घ, च्च, च्छ, ज्ज, ज्झ, ट्ट, ट्ठ, ड्ड, ड्ढ, त्त, त्थ, द्द, द्ध, प्प, प्फ, ब्ब, ब्भ, ल्ल, व्व, स्स, ल्ह.**

य्, र् ದ್ವಿತ್ವವಾಗುವದಿಲ್ಲ. य् ಕ್ಕೆ ज् ಆಗುವದು. ಮತ್ತು र् ಮೊದಲೇ ಉಚ್ಚಾರಕ್ಕೆ ಕಠಿಣವಾದುದರಿಂದ ಅದನ್ನು ಆದಷ್ಟು ತಪ್ಪಿಸುವದರ ಕಡೆಗೆಯೆ ಪ್ರಯತ್ನವು ಕಂಡು ಬರುವದು. ಉದಾ— करुण> **कलुण**; चरण> **चलण** ಮುಂ. ಮಹಾಪ್ರಾಣ ह ಕ್ಕೂ ದ್ವಿತ್ವವಿಲ್ಲ.

---

* ಪುಟ ೧೪ ನೋಡಬೇಕು.

**सानुनासिक २६ —** ङ्क, ङ्ख, ङ्ग, ङ्घ, ञ्च, ञ्छ, ञ्ज, ञ्झ, ण्ट, ण्ठ, ण्ड, ण्ढ, ण्ण, न्त, न्थ, न्द, न्ध, न्न, म्प, म्फ, म्ब, म्भ, म्म, ण्ह, न्ह, म्ह, ङ्, ञ् ಗಳ ಉಪಯೋಗವೇ ಹೆಚ್ಚಾಗಿಲ್ಲ. ಅವುಗಳ ದ್ವಿತ್ವವೂ ಬರುವದೇ ಇಲ್ಲ. ಮತ್ತು ಅವುಗಳೊಡನೆ ह ಕಾರವೂ ಕೂಡುವದಿಲ್ಲ. ಅದರಂತೆ ङ्ह, ञ्ह ಎಂಬ ಒತ್ತಕ್ಷರಗಳೂ ङ्, ञ् ಗಳ ದ್ವಿತ್ವಗಳೇ ಇಲ್ಲದ್ದರಿಂದ ಆಗುವದಿಲ್ಲ. ह्ह ಎಂಬ ಸಂಯುಕ್ತಾಕ್ಷರವೂ ಕಂಡುಬರುವದಿಲ್ಲ. ह ದೊಡನೆ ಸಂಯುಕ್ತಾಕ್ಷರವಾಗುವಾಗ ह ಕಾರವು ಕೊನೆಯಲ್ಲಿಯೆ ಕೂಡಿರುವದಾಗಿ ಕಂಡುಬರುವದು.

* ಸ್ಪರ್ಶ ವ್ಯಂಜನಗಳಲ್ಲಿ ಎರಡನೆಯ ಮೂರನೆಯ ಅಕ್ಷರಗಳು ದ್ವಿತ್ವವಾದರೆ ಅನುಕ್ರಮವಾಗಿ ಮೊದಲನೆಯ ಮತ್ತು ಮೂರನೆಯ ಅಕ್ಷರಗಳೊಡನೆ ಕೂಡುವವು. ಉದಾ— क्ख, ग्घ ಮುಂ. ಆದರೆ ख्ख ಎಂದು ಆದದ್ದು ಉಪಯೋಗದಲ್ಲಿಲ್ಲ. ಇದಕ್ಕೆ ಕಾರಣವೆಂದರೆ ಮಹಾಪ್ರಾಣದಲ್ಲಿಯ ह ಕಾರವು ದ್ವಿತ್ವವಾಗುವದಿಲ್ಲವಾದ್ದರಿಂದ ಅದರಲ್ಲಿ ಮೊದಲವರ್ಣವೇ ದ್ವಿತ್ವವಾಗಿರುವದೆಂದು ಹೇಳಬಹುದು. क् + (क् + ह्) = क् + ख् = क्ख.

**ಸಂಯುಕ್ತ ವ್ಯಂಜನಗಳನ್ನು ಸುಲಭಗೊಳಿಸುವದು.**

ಉಚ್ಚಾರ ಸೌಕರ್ಯವನ್ನುಂಟು ಮಾಡುವ ರೀತಿಗಳು ಎರಡು ಇರುವವು. (೧) ಸಂಯುಕ್ತಾಕ್ಷರವನ್ನು ಅಸಂಯುಕ್ತವಾಗಿ ಮಾಡುವದು. (೨) ವಿಜಾತೀಯ ಸಂಯುಕ್ತಾಕ್ಷವನ್ನು ಸಜಾತೀಯವಾಗಿ ಮಾಡುವದು. ಇವುಗಳನ್ನು ಬೇರೆ ಬೇರೆಯಾಗಿ ವಿಚಾರಿಸಲಾಗುವದು.

**ಆದ್ಯ ಸಂಯುಕ್ತ ವ್ಯಂಜನಗಳು.**

ಸಂಸ್ಕೃತದಲ್ಲಿ ಸಂಯುಕ್ತಾಕ್ಷರವು ಶಬ್ದದ ಮೊದಲು, ನಡುವೆ, ಕೊನೆಗೆ ಹೀಗೆ ಬೇಕಾದಲ್ಲಿ ಬರಬಹುದು. ಆದರೆ ಅರ್ಧಮಾಗಧಿಯಲ್ಲಿ ಶಬ್ದದ ಮೊದಲು ಸಂಯುಕ್ತಾಕ್ಷರವು ಬರುವದಿಲ್ಲ.*

ಆದ್ಯ ಸಂಯುಕ್ತಾಕ್ಷರವನ್ನು ಎರಡು ಪ್ರಕಾರವಾಗಿ ತಪ್ಪಿಸಬಹುದು.

* **ಅಪವಾದ**— ಸಂಯುಕ್ತ ವ್ಯಂಜನಗಳಂತೆ ಕಾಣುವ ण्ह, म्ह, ल्ह ಇವು ಶಬ್ದಾರಂಭದಲ್ಲಿ ಬರಬಹುದು. ಉದಾ— **ण्हाविय, म्हि, ल्हसूण** ಮುಂತಾದವು. ಆದರೆ ಈ ಅಕ್ಷರಗಳು ನಿಜವಾದ ಸಂಯುಕ್ತಗಳಲ್ಲವೆಂದು ಹಿಂದೆ ಹೇಳಿದೆ.

(೧) ಆದ್ಯ ಸಂಯುಕ್ತಾಕ್ಷರದಲ್ಲಿ ಒಂದು ವರ್ಣವನ್ನು ಲೋಪ ಮಾಡುವದು. ಉದಾ— प्रभा > **पभा**, क्षीण > **खीण**, स्कंद > **खंद** (ಹೆಗಲು), ध्यान > **झाण** ಮುಂ.

ಯಾವ ವರ್ಣವನ್ನು ಲೋಪಮಾಡಬೇಕೆಂಬ ಬಗ್ಗೆ ಕೆಲವು ನಿಯಮಗಳಿರುವವು. ಅವುಗಳನ್ನು ಅನಾದ್ಯ ಸಂಯುಕ್ತಾಕ್ಷರಗಳ ವ್ಯತ್ಯಾಸವನ್ನು ಲಕ್ಷಿಸುವಾಗ ವಿಚಾರಿಸಲಾಗುವದು. ಸಾಧಾರಣವಾಗಿ ಉಚ್ಚಾರ ಸೌಕರ್ಯದ ದೃಷ್ಟಿಯಿಂದ ಯಾವುದು ಉಳಿದರೆ ನೆಟ್ಟಗೆಂಬುದನ್ನು ಲಕ್ಷಿಸುವಂತೆ ತೋರುವದು.

**(೨) ಸ್ವರಾಗಮ** — ಸಂಯುಕ್ತಾಕ್ಷರದ ಮೊದಲು ಒಂದು ಸ್ವರವನ್ನು ಜೋಡಿಸುವರು. ಆಗ ಸಂಯುಕ್ತಾಕ್ಷರವು ಅನಾದಿಯಾಗುವದು. ಮುಂದೆ ಅನಾದ್ಯ ಸಂಯುಕ್ತಾಕ್ಷರದ ರೀತಿಯಂತೆ ಅದನ್ನು ಸಜಾತೀಯ ಸಂಯುಕ್ತಾಕ್ಷರವಾಗಿ ಮಾಡುವದು. ಹೀಗೆ ಹೆಚ್ಚಿಗೆ ಕೂಡಿಸುವ ರೀತಿಗೆ **ಭಾಷಾಶಾಸ್ತ್ರ**ದಲ್ಲಿ 'ವರ್ಣಾಗಮ'ವೆನ್ನುವರು. ಉದಾ— स्त्री > **इत्थि** (ಇಲ್ಲಿ **इ** ಕಾರವು ವರ್ಣಾಗಮವು). ಹೀಗೆ ವರ್ಣಾಗಮವಾದ ಮೇಲೆ ಅನಾದ್ಯ ಸಂಯುಕ್ತದ ನಿಯಮದಂತೆ ಬದಲಿಸಲಾಗುವದು.

ಸಮಾಸದಲ್ಲಿಯ ದ್ವಿತೀಯಪದದ ಮೊದಲಕ್ಷರವು ಸಂಯುಕ್ತವಾಗಿದ್ದರೆ ಅದಕ್ಕೆ ಆದ್ಯ ಮತ್ತು ಅನಾದ್ಯ ಸಂಯುಕ್ತಾಕ್ಷರಗಳ ನಿಯಮಗಳೆರಡೂ ಅನ್ವಯಿಸುವವು. ಉದಾ— अप्रमत्त > **अप्पमत्त** ಅಥವಾ **अपमत्त**, परिग्रह > **परिग्गह** ಅಥವಾ **परिगह**, देवस्तुति > **देवत्थुइ** ಅಥವಾ **देवथुइ**.

* ಅನಾದ್ಯ ಸಂಯುಕ್ತಾಕ್ಷರದ ನಿಯಮಗಳನ್ನು ಅನುಸರಿಸುವದು ವಿಶೇಷವಾಗಿರುವದು.

## ಅನಾದ್ಯ ಸಂಯುಕ್ತ ವ್ಯಂಜನಗಳು.

**ಸ್ವರಭಕ್ತಿ**— ಸಂಯುಕ್ತಾಕ್ಷರದ ಮಧ್ಯದಲ್ಲಿ ಸ್ವರ ಸೇರಿಸಿ ಸ್ವರಗಳ ಸಂಖ್ಯೆಯನ್ನು ಸಮ ಮಾಡಿದರೆ ಉಚ್ಚಾರವು ಸುಲಭವಾಗುವದು. ಈ ರೀತಿಯಾಗಿ ಮಾಡುವದಕ್ಕೆ '**ಸ್ವರಭಕ್ತಿ**' ಎಂದು **ಭಾಷಾಶಾಸ್ತ್ರ**ದಲ್ಲಿ ಹೇಳಿರುವರು. ಯಾವ ಸ್ವರವನ್ನು ಸೇರಿಸಿಯಾದರೂ ಸಂಯುಕ್ತತೆಯನ್ನು ಕಳೆಯ ಬಹುದು. ಆದರೆ ಸಾಮಾನ್ಯವಾಗಿ **इ**, **अ** ಅಥವಾ **उ** ಬರುವದೇ ಹೆಚ್ಚು. ಉದಾ—

इ भार्या>**भारिया**, चैत्य>**चेइय** (ಜಿನಮಂದಿರ), सूर्य>**सूरिय**, हर्ष>**हरिस**, श्री>**सिरी**, प्रश्न>**पसिण**, क्लेश>**किलेस**, दर्शन>**दरिसण**, आचार्य>**आयरिय** ಮುಂ.

अ अग्नि>**अगणि**, पृथ्वी>**पुढवी**, रत्न>**रयण.**

उ द्वार>**दुवार**, द्वे>**दुवे**, पद्म>**पउम**, स्मरति>**सुमरइ.**

* ಆದರೆ ಈ ರೀತಿಯನ್ನು ಎಲ್ಲ ಕಡೆಗೂ ಅನುಸರಿಸುವದಿಲ್ಲ. **ಸ್ವರ ಭಕ್ತಿಯು** ಸಾಮಾನ್ಯವಾಗಿ ಸಂಯುಕ್ತ ವ್ಯಂಜನದಲ್ಲಿಯ ಒಂದು ವರ್ಣವು ಅನುನಾಸಿಕ (ङ् ञ् ण् न् म्) ಇದ್ದರೆ ಅಥವಾ ಅಂತಸ್ಥವರ್ಣ (य् व् र् ल्) ಇದ್ದರೆ ಅಥವಾ ಮಹಾಪ್ರಾಣದ ಉಚ್ಚಾರ (ह) ಇದ್ದರೆ ಬರುವದು. ಉಳಿದ ಕಡೆಗೆ ಬರುವದಿಲ್ಲ. ಇದರಿಂದ ಅನೇಕ ಸಂಯುಕ್ತ ವ್ಯಂಜನಗಳನ್ನು ಸುಲಭ ವಾಗಿ ಮಾಡಲು ಬರುವದಿಲ್ಲ, ಆದ್ದರಿಂದ ಅದಕ್ಕೆ ಬೇರೆ ಉಪಾಯವೆಂದರೆ ವಿಜಾತೀಯ ಸಂಯುಕ್ತಾಕ್ಷರವನ್ನು ಸಜಾತೀಯ ಸಂಯುಕ್ತಾಕ್ಷರವಾಗಿ ಮಾಡುವದು.

**ಸಮಾನೀಕರಣ.**

ಒಂದು ವ್ಯಂಜನವನ್ನು ಲೋಪಮಾಡಿ ಉಳಿದ ವ್ಯಂಜನವನ್ನು ದ್ವಿತ್ವ ಮಾಡಿದರೆ ವಿಜಾತೀಯ ಸಂಯುಕ್ತಾಕ್ಷರವು ಸಜಾತೀಯವಾಗುವದು.

ಉದಾ— चक्र>**चक्क** ಇಲ್ಲಿ र् ಲೋಪಮಾಡಿ क् ದ್ವಿತ್ವ ಮಾಡ ಲಾಯಿತು. ಇದಕ್ಕೆ ಸಮಾನೀಕರಣವೆನ್ನುವರು.

**ದ್ವಿತ್ವವೇಕೆ ಮಾಡಬೇಕು?**

ವರ್ಣಗಳಿಗೆ ಉಚ್ಚಾರದ ಅವಕಾಶದ ವೇಳೆಯಿಂದ ಮಾತ್ರೆಗಳಿರುವವು. ಹ್ರಸ್ವಸ್ವರವು ಒಂದು ಮಾತ್ರೆಯುಳ್ಳದ್ದಿದ್ದು ಲಘುವೆನಿಸುವದು. ಹ್ರಸ್ವಸರ ಯುಕ್ತ ವ್ಯಂಜನವೂ ಹಾಗೆಯೆ. ದೀರ್ಘಸ್ವರ, ಸಂಯುಕ್ತಾಕ್ಷರದ ಮೊದಲಿನ ವರ್ಣ, ಅನುಸ್ವಾರ ವಿಸರ್ಗಗಳೊಡನೆ ಕೂಡಿದ ಅಕ್ಷರಗಳೂ ಎರಡು ಮಾತ್ರೆ ಗಳುಳ್ಳವಾಗಿ ಗುರುವೆನಿಸುವವು. ಶಬ್ದವು ಸಂಸ್ಕೃತದಿಂದ ಅರ್ಧಮಾಗಧಿಗೆ ಬಂದರೂ ಅದರ ಮಾತ್ರೆಗಳ ಸಂಖ್ಯೆಯಲ್ಲಿ ಹೆಚ್ಚುಕಡಿಮೆ ಯಾಗಬಾರದೆಂದು ತಿಳಿದದ್ದು ಕಂಡುಬರುವದು. ಆದರಿಂದ ಒಂದು ವ್ಯಂಜನ ಲೋಪವಾದರೆ ಮುಂದಿನ ವ್ಯಂಜನವನ್ನು ದ್ವಿತ್ವ ಮಾಡುವದು ಯುಕ್ತವೆನಿಸುವದು. ಇದ

ರಿಂದ चक्र ಶಬ್ದದಲ್ಲಿರುವ ಮಾತ್ರೆಗಳು चक्क ದಲ್ಲಿಯೂ ಉಳಿಯುವವು. चक्र ದಲ್ಲಿ ೩ ಮಾತ್ರೆಗಳಿರುವಂತೆ चक्क ದಲ್ಲಿಯೂ ೩ ಮಾತ್ರೆಗಳಿರುವವು.

ಕನ್ನಡದಲ್ಲಿ ತದ್ಭವಗಳನ್ನು ಮಾಡುವಾಗಲೂ ಈ ನಿಯಮವು ಅನುಸರಿಸಲ್ಪಡುವದು. ಮರಾಠೀ, ಹಿಂದೀ, ಮೊದಲಾದ ಭಾಷೆಗಳಲ್ಲಿ ದ್ವಿತ್ವವನ್ನು ಕಳೆದುಹಾಕಲು ಹಿಂದಣ ಸ್ವರವನ್ನು ದೀರ್ಘಮಾಡಿ ಮಾತ್ರೆಗಳನ್ನು ಮೊದಲಿನಷ್ಟೇ ಇಡುವರು.

| ಉದಾಹರಣ : — | ಸಂಸ್ಕೃತ | ಅರ್ಧಮಾಗಧಿ |
|---|---|---|
| | ೨ ೧ | ೨ ೧ |
| | – ᴗ | – ᴗ |
| | कर्ण | कण्ण |
| | पर्ण | पण्ण |
| | कर्म | कम्म |

ದ್ವಿತ್ವ ಮಾಡುವದು ಸಮಾನೀಕರಣದ ಮುಖ್ಯ ಅಂಗವಾಗಿರುವದು. ಯಾವ ವರ್ಣವನ್ನು ಲೋಪಮಾಡಬೇಕು ಮತ್ತು ಯಾವದನ್ನು ದ್ವಿತ್ವ ಮಾಡಬೇಕು ಎಂಬುದನ್ನು ವಿಚಾರಿಸುವದು ಅವಶ್ಯವು.

## ಯಾವ ವರ್ಣವು ದ್ವಿತ್ವವಾಗುವದು ?

ವರ್ಣವು ಲೋಪವಾಗಬೇಕಾದಾಗ ಅಥವಾ ಮತ್ತೊಂದು ವರ್ಣವು ದ್ವಿತ್ವವಾಗಬೇಕಾದಾಗ ಬಲಿಷ್ಠವಾದ ಅಕ್ಷರವು ದುರ್ಬಲವಾದ ಅಕ್ಷರವನ್ನು ನುಂಗುವದು ಅಥವಾ ತನ್ನದಾಗಿ ಮಾಡಿಕೊಳ್ಳುವದು ಎಂದು ಹೇಳಬಹುದು. ಉಚ್ಚಾರ ಪ್ರಯತ್ನದ ದೃಷ್ಟಿಯಿಂದ ವರ್ಣಗಳ ಬಲವನ್ನು ಹೇಳುವರು. ಕೆಳಗೆ ಕೊಟ್ಟ ಗುಂಪುಗಳಲ್ಲಿ ಮೇಲಿನವು ಕ್ರಮವಾಗಿ ಹೆಚ್ಚು ಬಲವುಳ್ಳವೆಂದು ತಿಳಿಯಬೇಕು.

(೧) ಸ್ಪರ್ಶ — क्, ख्, ग्, घ्, च्, छ्, ज्, झ्, ट्, ठ्, ड्,
ढ्, त्, थ्, द्, ध्, प्, फ्, ब्, भ्

ಎಲ್ಲ ಸ್ಪರ್ಶ ವ್ಯಂಜನಗಳು ಸಮಾನ ಬಲವುಳ್ಳವಾಗಿರುವವು.

(೨) ಅನುನಾಸಿಕ — ङ्, ञ्, ण्, न्, म्

(೩) ಊಷ್ಮವರ್ಣ — स्

(೪) ಅಂತಃಸ್ಥವರ್ಣ — ಯ್, ರ್,† ಲ್, ವ್

ಸಂಯುಕ್ತ ವ್ಯಂಜನದಲ್ಲಿ ಹೆಚ್ಚು ಬಲವುಳ್ಳದ್ದು ದ್ವಿತ್ವ ಹೊಂದುವದು. ಮತ್ತು ಕಡಿಮೆ ಬಲವುಳ್ಳದ್ದು ಲೋಪವಾಗುವದು. ಉದಾ.— अर्क>**अक्क** (ಸೂರ್ಯ), मूर्ख>**मुक्ख.** ಸಂಯುಕ್ತ ವ್ಯಂಜನದ ಎರಡೂ ವ್ಯಂಜನಗಳು ಸಮಾನ ಬಲವುಳ್ಳವಿದ್ದರೆ ಉಚ್ಚಾರದಿಂದ ಮುಂದಿನ ವ್ಯಂಜನವು ಹೆಚ್ಚು ಬಲವುಳ್ಳದ್ದಾಗುವದೆಂದು ತಿಳಿದು ಅದನ್ನು ದ್ವಿತ್ವ ಮಾಡಲಾಗುವದು. ಉದಾ.— भक्त>**भत्त;** शब्द>**सद्द;** खड्ग>**खग्ग;** दुग्ध>**दुद्ध;** रक्त>**रत्त.**

**ದ್ವಿತ್ವ ಮಾಡುವದರ ಬಗ್ಗೆ ಕೆಲವು ನಿಯಮಗಳು :—**

ಸಾಮಾನ್ಯವಾಗಿ ದ್ವಿತ್ವಮಾಡುವ ಕೆಲವು ನಿಯಮಗಳನ್ನು ಕೆಳಗೆ ಕೊಡಲಾಗಿದೆ. ಇವುಗಳಲ್ಲದೆ ಬೇರೆ ಅನೇಕ ನಿಯಮಗಳಿರುವವು. ಆದರೆ ಅವು ಅಷ್ಟೊಂದು ಮಹತ್ವವಾದವುಗಳಲ್ಲ. ಉದಾಹರಣೆಗಳಿಂದ ಅವೆಲ್ಲವುಗಳನ್ನು ಒಂದೆಡೆಗೆ ತೋರಿಸಲಾಗುವದು. ಆದ್ದರಿಂದ ಅವುಗಳನ್ನು ಇಲ್ಲಿ ಹೇಳಲಿಲ್ಲ.

(೧) ವಿಸರ್ಗವು ಲೋಪವಾಗಿ ಅದರ ಮುಂದಿನ ವ್ಯಂಜನವು ದ್ವಿತ್ವವಾಗುವದು. ಉದಾ :— दुःख>**दुक्ख;** अन्तःकरण>**अन्तक्करण** ಮುಂ.

(೨) ಎರಡೂ ಸ್ಪರ್ಶ ವ್ಯಂಜನಗಳಾಗಿದ್ದರೆ ಮೊದಲನೆಯದು ಲೋಪವಾಗಿ ಎರಡನೆಯದು ದ್ವಿತ್ವವಾಗುವದು. ಉದಾ :— भक्त>**भत्त;** आरक्त>**आरत्त** ಮುಂ.

(೩) ಸಂಯುಕ್ತ ವ್ಯಂಜನದಲ್ಲಿ ಎರಡನೆಯ ವ್ಯಂಜನವು ಅನುನಾಸಿಕವಿದ್ದು ಮೊದಲನೆಯದು ಸ್ಪರ್ಶ ವ್ಯಂಜನವಾಗಿದ್ದರೆ ಅನುನಾಸಿಕವು ಲೋಪವಾಗಿ ಸ್ಪರ್ಶ ವ್ಯಂಜನವು ದ್ವಿತ್ವವಾಗುವದು.

ಉದಾ — नग्न>**नग्ग,** प्रयत्न>**पयत्त,** रूप्य>**रूप्प** ( ಬೆಳ್ಳಿ ); ಮುಂ. ಅಪವಾದ — पद्म>**पोम्म.**

¶ ಆದರೆ ಮೊದಲು ಅನುನಾಸಿಕವಿದ್ದರೆ ಅನುನಾಸಿಕವಾಗಿ ಅಥವಾ ಅನುಸ್ವಾರವಾಗಿ ಬರೆಯಬಹುದು. ಆದರೆ ದ್ವಿತ್ವವಾಗುವದಿಲ್ಲ.

---

† ಎಲ್ಲ ವರ್ಣಗಳಲ್ಲಿ र् ಕಾರವು ಹೆಚ್ಚು ದುರ್ಬಲವು. ಆದ್ದರಿಂದ ಅದು ಬಹುತರ ಶಕ್ಯವಿದ್ದಲ್ಲೆಲ್ಲ ಲೋಪವಾಗುವದು. ಅಂತಃಸ್ಥವರ್ಣಗಳಲ್ಲಿಯ ಬಲವು ಕ್ರಮದಿಂದ ಕಡಿಮೆಯಾಗುವದು.

ಉದಾ — कण्ठ>कंठ; अन्त>अंत, अन्त; संध्या>संझा ಅಥವಾ सञ्झा.

(೪) ಸ್ಪರ್ಶ ವ್ಯಂಜನವು ಮೊದಲಿದ್ದು ಉಷ್ಮವರ್ಣದೊಡನೆ ಕೂಡಿದ್ದರೆ ಎರಡಕ್ಕೂ ಕೂಡಿ च्छ् ಆಗುವದು. ಸಾಮಾನ್ಯವಾಗಿ त्स्, प्स् ಎರಡೇ स् ದ ಹೆಚ್ಚು ಉಪಯೋಗದಲ್ಲಿರುವ ಸಂಯುಕ್ತಾಕ್ಷರಗಳಿರುವವು. ಇವುಗಳಿಗೆ च्छ ಆಗುವದು. ಉದಾ — संवत्सर>संवच्छर, वत्स>वच्छ, अप्सरा>अच्छरा, जुगुप्सा>दुगुंच्छा ಮುಂ.

¶ क्+ष्=क्ष् ಇದಕ್ಕೆ ಬದಲಾಗಿ छ्, च्छ्, ख्, क्ख्, झ् ಮತ್ತು च् ಹೀಗೆ ವ್ಯಂಜನಗಳು ಬರುವದುಂಟು.

ಉದಾ— क्ष्>छ् — क्षण>छण, क्षुधा>छुहा.

क्ष्>ख् — क्षत्रिय>खत्तिय; क्षीर>खीर.

ಮೇಲಿನ ಉದಾಹರಣೆಗಳಲ್ಲಿ क्ष ಇದು ಆದ್ಯಕ್ಷರವಾಗಿರುವದು. ಆದರೆ ಅನಾದ್ಯವಾಗಿರಲು च्छ्, क्ख ಹೀಗೆ ಸಂಯುಕ್ತಾಕ್ಷರಗಳೇ ಬರುವವು.

ಉದಾ — राक्षस>रक्खस; वृक्ष>वच्छ. ಮುಂ.

क्ष्>झ् — क्षीयते>झिज्जइ

क्ष्>च् — क्षुल्ल>चुल्ल; क्षुल्लपिता>चुल्लापिया.

**ಅಪವಾದ**:— उत्सर्ग>उस्सग्ग; उत्सुक>उज्जुय; उत्सव>उस्सव; ಮುಂ.

ಮೊದಲು ಊಷ್ಮವರ್ಣವಿದ್ದು ಮುಂದೆ ಸ್ಪರ್ಶವ್ಯಂಜನವಿದ್ದರೆ ಊಷ್ಮವರ್ಣವು ಲೋಪವಾಗಿ ಸ್ಪರ್ಶವ್ಯಂಜನವು ದ್ವಿತ್ವವಾಗುವದು. ಉದಾ— पश्चिम>पच्छिम; निश्चय<तिच्छय; दुष्ट>दुट्ठ; दृष्टि>दिट्ठि; विस्तार>वित्थर; गृहस्थ>गिहत्थ; तपश्चरण>तवच्चरण; दुष्कर>दुक्कर; नमस्कार>नमोक्कार; परस्पर>परोप्पर ಮುಂ.

(೫) ಎರಡು ಅನುನಾಸಿಕಗಳ ಸಂಯೋಗವಿದ್ದರೆ ಮೊದಲನೆಯದು ಅನುಸ್ವಾರವಾಗುವದು.

**ಅಪವಾದ**:— न् म् ಗಳು ಕೂಡಿದ್ದರೆ ಎರಡನೆಯದು ಯಾವುದಾಗಿರುವದೋ ಅದು ದ್ವಿತ್ವವಾಗುವದು.

ಉದಾ. — उन्मूल > उम्मूल; मन्मथ > वम्मह; प्रद्युम्न > पज्जुन्न; निम्न; > निन्न.†

(೬) ಸಂಯುಕ್ತ ವ್ಯಂಜನಗಳಲ್ಲಿ य्, व्, र्, ल् ಇವುಗಳಲ್ಲಿ ಒಂದು ಇದ್ದರೆ ಅವು ಲೋಪವಾಗಿ ಉಳಿಯುವ ವ್ಯಂಜನವು ದ್ವಿತ್ವ ವಾಗುವದು.

ಉದಾ. — शक्य > सक्क; शक्र > सक्क; सौख्य > सोक्ख; पक्व > पक्क; सत्वर > सत्तर; पुत्र > पुत्त; उग्र > उग्ग; शुक्ल > सुक्क; म्लेच्छ > मेच्छ. ಸಂಯುಕ್ತ ವ್ಯಂಜನಗಳಲ್ಲಿ त्, थ्, द्, ध् ಇವುಗಳಲ್ಲೊಂದು ಮೊದಲನೆಯದಾಗಿದ್ದು, य् ಇದ್ದರೆ ಮೊದಲಿನ ವ್ಯಂಜನಕ್ಕೆ ಕ್ರಮವಾಗಿ च्, छ्, ज्, झ् ಆದೇಶವಾಗಿ ಆಮೇಲೆ ದ್ವಿತ್ವವಾಗುವದು. ಉದಾ. — सत्य > सच्च; रथ्या > रच्छा; अद्य > अज्ज; मध्य > मज्झ ಮುಂ. ಅದೆಪ್ರಕಾರ र् ಇದ್ದರೆ त् ವರ್ಗದ ಬದಲು ट् ವರ್ಗದ ವ್ಯಂಜನಗಳು ಬರುವವು. ಉದಾ. — वार्ता > वट्टा; अर्थ > अट्ठ; अनर्थ > अणट्ठ; अर्ध > अड्ढ; ಆದರೆ ಈ ನಿಯಮವು ಅಷ್ಟೊಂದು ಬಲವತ್ತರವಾದುದಲ್ಲ. ಯಾಕಂದರೆ वत्ता, अणत्थ, अत्थ, अद्ध ಮೊದಲಾದ ರೂಪಗಳು ಕಂಡು ಬರುವವು.

(೭) ಸಂಯುಕ್ತವ್ಯಂಜನದ ಎರಡೂ ವ್ಯಂಜನಗಳು य्, व्, र्, ल् ಗಳೇ ಆಗಿದ್ದರೆ ल्, व्, य्, र् ಈ ಕ್ರಮದಿಂದ ಅವುಗಳ ಬಲವನ್ನು ಗೊತ್ತು ಮಾಡಿ ಸಬಲವಾದದ್ದನ್ನು ದ್ವಿತ್ವಮಾಡಲಾಗುವದು. ಉದಾ — मूल्य > मोल्ल ಅಥವಾ मुल्ल; दुर्लभ > दुल्लह; कल्य > कल्ल (ಕಲ್ಯಾಣ); पल्वल > पल्लल; काव्य > कव्व; सर्व > सव्व ಮುಂ.

× ದ್ವಿತ್ವವಾದಾಗ य् ಕ್ಕೆ ज् ಆಗುವದರಿಂದ र्य > ज्ज ಆಗುವದು. सूर्य > सुज्ज; शय्या > सेज्जा; कार्य > कज्ज.

(೮) श्, ष्, स् ಗಳಿಗೆ ಮುಂದೆ ಅನುನಾಸಿಕವು ಕೂಡಿದ್ದರೆ ಮೊದಲು ಆ ವರ್ಣಗಳ ಅದಲುಬದಲು ಆಗಿ (ವರ್ಣವಿಪರ್ಯಯ) श्, ष्, स् ಗಳಿಗೆ

† न् ಮತ್ತು ण् ಇವುಗಳದು ಬಹಳ ಗೊಂದಲವಾಗುವಂತೆ ಅನಿಸುವದು. ಹಾಗೇನೂ ಆಗುವದಿಲ್ಲ. ಸಂಯುಕ್ತ ವ್ಯಂಜನದಲ್ಲಿ ಒಂದು न् ಇದ್ದರೆ न्न् ಎಂದಾಗುವದು. ण् ಇದ್ದರೆ ण्ण् ಎಂದಾಗುವದು. ಉದಾ— अन्ध > अन्न; मान्य > मन्न; जीर्ण > जुण्ण; पूर्ण > पुण्ण ಮುಂ.

ಹ್ ಆಗುವದು. ಉದಾ. — कृष्ण > किण्ह ಅಥವಾ कण्ह; प्रश्न > पण्ह; स्नान > ण्हाण; ग्रीष्म > गिम्ह ಮುಂ.

(೯) ಊಷ್ಮವರ್ಣಗಳ ದ್ವಿತ್ವಕ್ಕೆಲ್ಲ ಸ್ ದ ದ್ವಿತ್ವವೇ ಆಗುವದು.

ಉದಾ. — निश्शरण > **निस्सरण**; दुःशासन > **दुस्सासण**; दुःशील > **दुस्सील** ಮುಂತಾದವು.

(೧೦) ಮೊದಲ ವ್ಯಂಜನವು ಹ್ ಇದ್ದು ಎರಡನೆಯದು ಅನುನಾಸಿಕ ಅಥವಾ ಲ್ ಇದ್ದರೆ ವರ್ಣವಿಪರ್ಯಯವಾಗುವದು. ಉದಾ. — चिह्न > **चिन्ह**; अपराह्ण > **अवरण्ह**; ब्राह्मण > **बम्हण**; आह्लाद > **आल्हाद** ಮುಂ.

## ದ್ವಿತ್ವವನ್ನುಳಿದು ಇತರ ಪ್ರಕಾರಗಳು.

### (೧) ಪೂರ್ವಸ್ವರವನ್ನು ದೀರ್ಘ ಮಾಡುವದು :-

ಒಂದು ವರ್ಣವನ್ನು ಲೋಪಮಾಡಿದಮೇಲೆ ಮುಂದಿನ ವರ್ಣವನ್ನು ದ್ವಿತ್ವ ಮಾಡುವದರ ಬದಲು ಹಿಂದಿನ ಸ್ವರವು ಹ್ರಸ್ವವಿದ್ದರೆ ದೀರ್ಘ ಮಾಡಲಾಗುವದು. ಅದರಿಂದ ಮಾತ್ರೆಗಳ ಸಂಖ್ಯೆಯು ಮೊದಲಿನಷ್ಟೆ ಉಳಿಯುವದು. ಉದಾ. — पश्य > **पास**, वर्ष > **वास**, शिष्य > **सीस**, कर्तव्य > **कायव्व**, दक्षिण > **दाहिण**, उत्सव > **ऊसव**.

ಈ ರೀತಿಯು ವಿಶೇಷವಾಗಿ ಸಂಯುಕ್ತ ವ್ಯಂಜನದಲ್ಲಿ ಒಂದು ಊಷ್ಮ ಅಥವಾ ಅಂತಸ್ಥವಾಗಿದ್ದರೆ ಅನುಸರಿಸಲ್ಪಟ್ಟಿರುವಂತೆ ತೋರುವದು.

### (೨) ಮೊದಲಿನ ಸ್ವರಕ್ಕೆ ಅನುಸ್ವಾರವನ್ನು ಕೂಡಿಸುವದು :-

ಒಂದು ವರ್ಣವನ್ನು ಲೋಪಮಾಡಿದ ಮೇಲೆ ಮಾತ್ರೆಗಳ ಸಂಖ್ಯೆಯು ಕಡಿಮೆಯಾಗಬಾರದೆಂದು ಉಳಿದ ವರ್ಣವನ್ನು ದ್ವಿತ್ವ ಮಾಡಲಾಗುತ್ತದೆಯಷ್ಟೆ. ಆದರೆ ಕೆಲವು ಶಬ್ದಗಳಲ್ಲಿ ದ್ವಿತ್ವ ಮಾಡದೆ ಹಿಂದಿನ ಸ್ವರಕ್ಕೆ ಅನುಸ್ವಾರ ಕೂಡಿಸಿ ಮಾತ್ರೆಗಳ ಸಂಖ್ಯೆಯನ್ನು ಪೂರ್ಣಮಾಡುವದುಂಟು.

ಉದಾ. — दर्शन > **दंसण**; अश्रु > **अंसु**; वयस्य > **वयंस** (ಗೆಳೆಯ); पक्ष > **पंख**; स्पर्श > **फंस** ಮುಂ.

### (೩) ಮೂರು ವ್ಯಂಜನಗಳ ಸಂಯುಕ್ತಾಕ್ಷರ.

ಸಂಯುಕ್ತಾಕ್ಷರದಲ್ಲಿ ಮೂರು ವ್ಯಂಜನಗಳಿದ್ದರೆ ಒಂದನ್ನು (ಸಾಮಾನ್ಯವಾಗಿ ಕೊನೆಯದನ್ನು) ಲೋಪಮಾಡಿ ಎರಡು ವರ್ಣಗಳ ಸಂಯುಕ್ತಾ

ಕ್ಷರದ ಸಿ ...ುಗಳನ್ನು ಅನ್ವಯಿಸಲಾಗುವದು. ಉದಾ. — **मत्स्य**> (त् + स् + य् + अ) ಇಲ್ಲಿ **य्** ಲೋಪವಾಗಿ ಮೊದಲು **मत्स** ಆಗುವದು. ಅದಕ್ಕೆ **मच्छ** ಎಂದಾಗು ದು. ಇದೇ ಪ್ರಕಾರ अर्घ्य>**अर्घ**>**अग्घ**; सम्यक्त्व >**सम्मक्त** **सम्मत्त**; शास्त्र>**सस्त**>**सत्थ** ಇವುಗಳಲ್ಲಿ ನೋಡಬಹುದು.

¶ **क्ष्म** ವ ...ು ಮೂರು ವ್ಯಂಜನಗಳ ಸಂಯುಕ್ತವೆಂದು ಕೊನೆಯ **म्** ಲೋ... ...ಡು ..ದುಂಟು. ಉದಾ. — लक्ष्मण>**लक्खण**, पक्ष्म>**पंख**.

**ಇತರ ಕೆಲವು ವರ್ಣವಿಕಾರಗಳು.**

**(೧) ಸಂಪ್ರಸಾರಣ.**

ಸಂಸ್ಕೃತದಲ್ಲಿ **य्**, **व्**, **र्**, **ल्** ಗಳಿಗೆ **इ**, **उ**, **ऋ**, **ऌ** ಅನುಕ್ರಮವಾಗಿ ಆಗುವದಕ್ಕೆ ಸಂಪ್ರಸಾರಣವೆನ್ನುವರು. ಅರ್ಧಮಾಗಧಿಯಲ್ಲಿ **ऋ ऌ** ಇಲ್ಲವಾದ್ದರಿಂದ **य्**, **व्** ಗಳಿಗೆ ಮಾತ್ರಸಂಪ್ರಸಾರಣ (**इ**, **उ**) ವಾಗುವದು ಮತ್ತು **अय्**, **अव्** ಗಳಿಗೆ ಕ್ರಮವಾಗಿ **ए**, **ओ** ಆಗುವದುಂಟು.

ಉದಾ. — त्वरित>**तुरिय**, व्यतिक्रांत>**विइक्कन्त**, स्वप्न>**सुविण**, नयति>**नेइ**, लवण>**लोण**, भवति>**भोइ**, **होइ** ಮುಂತಾದವು.

**(೨) ವರ್ಣಾಗಮ** — ಅನೇಕ ಸಲ ಮೂಲ ಶಬ್ದವು ಸ್ವರದಿಂದ ಸುರುವಾಗುತ್ತಿದ್ದರೂ (ಅಸಂಯುಕ್ತ ಆದ್ಯಕ್ಷರವಿದ್ದರೂ ಸ್ವರಾಗಮಕ್ಕೆ ಬದಲು) ಅದಕ್ಕೆ ಒಂದು ವ್ಯಂಜನವನ್ನು ಕೂಡಿಸಲಾಗಿದೆ.

ಉದಾ. — एव>**जेव**, इव>**विय**, उक्त>**वुत्त** ಮುಂತಾದವು.

**(೩) ಅನಾಘಾತ ವರ್ಣಲೋಪ.**

ಶಬ್ದವನ್ನು ಉಚ್ಚರಿಸುವಾಗ ಒಂದು ಅಥವಾ ಹಲವು ವರ್ಣಗಳ ಉಚ್ಚಾರವು ಹೆಚ್ಚು ಜೋರು ಇಲ್ಲದೆ ಉಚ್ಚರಿಸುವದುಂಟು. ಜೋರಾಗಿ ಉಚ್ಚರಿಸಲ್ಪಡುವದು ಆಘಾತ (accent) ವುಳ್ಳದ್ದಾಗುವದು. ಅನಾಘಾತ (ಆಘಾತವಿಲ್ಲದ) ವರ್ಣವು ಲೋಪವಾಗುವದುಂಟು.

ಉದಾ. — उपवसथ>**पोसह** (ಉಪವಾಸ), उदक>**दग**, अलाबु> **लाउ**, अपि>**पि**, इति>**ति** ಅಥವಾ **त्ति**, इव>**व** ಅಥವಾ **व्व**, सुरभि> **सुब्भि**, उपरि>**उप्पि**.

### (೪) ದ್ವಿತ್ವ.

ಸಂಸ್ಕೃತ ಶಬ್ದದಲ್ಲಿಯ ಕೆಲವು ವ್ಯಂಜನಗಳು ಅಸಂಯುಕ್ತವಾಗಿದ್ದರೂ ಅರ್ಧಮಾಗಧಿಯ ದ್ವಿತ್ವವನ್ನು ಹೊಂದುವವು.

ಉದಾ. — प्रेमन्>**पेम्म**, तैल>**तेल्ल**, यौवन>**जोव्वण**, सेवा>**सेव्वा**, गौण>**गोण्ण** ಮುಂತಾದವು.

**ಸಂಯುಕ್ತಾಕ್ಷರಗಳ ವ್ಯತ್ಯಾಸವನ್ನು ತೋರಿಸುವ ಪಟ್ಟಿ :—**

ಸಂಸ್ಕೃತದಲ್ಲಿ ಬೇಕಾದ ವ್ಯಂಜನವು ಬೇಕಾದ ವ್ಯಂಜನೊಡನೆ ಕೂಡ ಬಹುದಾದ್ದರಿಂದ ಸಂಯುಕ್ತ ವ್ಯಂಜನಗಳು ಹೇರಳವಾಗಿರುವವು. ಆದರೆ ಅರ್ಧಮಾಗಧಿಯಲ್ಲಿ ಕೇವಲ ಸಜಾತೀಯ ಸಂಯುಕ್ತಾಕ್ಷರಗಳಿರುವದರಿಂದ ಒತ್ತಕ್ಷರಗಳ ಸಂಖ್ಯೆ ಕಡಿಮೆಯೆನ್ನಬಹುದು. ಸಂಸ್ಕೃತದ ಒತ್ತಾಕ್ಷರಗಳು ಅರ್ಧಮಾಗಧಿಯಲ್ಲಿ ಹೇಗೆ ವ್ಯತ್ಯಾಸ ಹೊಂದುವದೆಂಬದನ್ನು ಕೆಳಗಿನ ಪಟ್ಟಿಯಿಂದ ತಿಳಿಯಬಹುದು. §

| ಅ.ಮಾ. | ಸಂ. | ಉದಾಹರಣೆ |
|---|---|---|
| **क्क** | क्त | मुक्त>**मुक्क** |
| | क्य | वाक्य>**वक्क** |
| | क्र | चक्र>**चक्क** |
| | त्क | सत्कार>**सक्कार** |
| | र्क | तर्क>**तक्क** |
| | क्ल | शुक्ल>**सुक्क** |
| | क्व | पक्व>**पिक्क** |
| | ष्क | शुष्क>**सुक्क** |
| **क्ख** | क्ष | चक्षुष्>**चक्खु** |
| | क्ष्य | लक्ष्य>**लक्ख** |
| | ख्य | आख्याति>**आइक्खइ** |
| | च्छ | म्लेंच्छ>**मिलक्खु** |
| | ष्क | पुष्कर>**पोक्खर** |
| | स्क | अपस्कंद>**अवक्खंद** |
| | स्ख | प्रस्खलित>**पक्खलिय** |
| **ग्ग** | ग्न | नग्न>**नग्ग** |
| | ग्य | आरोग्य>**आरोग्ग** |
| | ग्र | कचग्रह>**कयग्गह** |
| | ड्ग | खड्ग>**खग्ग** |
| | द्ग | मुद्गल>**मोग्गर** |

§ ಮೇಲಿನ ಪಟ್ಟಿಯನ್ನು ಡಾ. ಪ. ಲ. ವೈದ್ಯ ಇವರ '*A Manual of Ardhamagadhi grammar*' ವೆಂಬ ಪುಸ್ತಕದ ಮೂರನೆಯ ಆವೃತ್ತಿಯ ಪುಟ **೩೩, ೩೪, ೩೫, ೩೬, ೩೭ ಮತ್ತು ೩೮ ರಿಂದ ತೆಗೆದುಕೊಂಡಿದೆ.**

| ಅ.ಮಾ. | ಸಂ. | ಉದಾಹರಣೆ |
|---|---|---|
| | र्ग | विसर्ग>विसग्ग |
| | ल्ग | वल्गु>वग्गु |
| ग्घ | घ्न | विघ्न>विग्घ |
| | घ्र | शीघ्र>सिग्घ |
| | र्घ | अर्घ>अग्घ |
| च्च | च्य | अच्युत>अच्चुय |
| | त्य | नित्य>निच्च |
| | थ्य | तथ्य>तच्च |
| | र्च | अर्चयति>अच्चेइ |
| च्छ | क्ष | अक्षि>अच्छि |
| | र्छ | मूर्च्छा>ः |
| | छ्र | |
| | त्स | वत्स>वच्छ |
| | त्स्य | मत्स्य>मच्छ |
| | थ्य | रथ्या>रच्छा |
| | श्च | पश्चात्>पच्छा |
| | श्र | श्रेयस्>छे (सेयं) |
| ज्ज | ब्ज | कुब्जा>कुज्जा |
| | ज्र | वज्र>वज्ज |
| | र्ज | विसर्जयति>विसज्जइ |
| | ज्व | प्रज्वलित>पज्जलिय |
| | द्य | अद्य>अज्ज |
| | य्य | शय्या>सेज्जा |

| ಅ.ಮಾ. | ಸಂ. | ಉದಾಹರಣೆ |
|---|---|---|
| | र्य | कार्य>कज्ज |
| | ध्द | बुध्द्वा>बुज्झा |
| | ध्य | अध्ययन>अज्झयण |
| ज्झ | ह्य | गुह्य>गुज्झ |
| ट्ट | र्त | आर्त>अट्ट |
| | त्त | पत्तन>पट्टण |
| | र्थ | अर्थ>अट्ट |
| ट्ठ | ष्ट | यष्टि>लट्ठि |
| | ष्ठ | गोष्ठि>गोट्ठी |
| | स्थ | अस्थि>अट्ठि |
| ड्ड | र्त | गर्त>गड्ड |
| ड्ढ | ग्ध | विदग्ध>वियड्ढ |
| | ढ्य | आढ्य>अड्ढ |
| | द्ध | जातश्रद्ध>जायसड्ढ |
| | र्ध | अर्ध>अड्ढ |
| ण्ट | न्त | तालवृन्त>तालवण्ट |
| ण्ड | न्द | भिन्दिपाल>भिण्डिवाल |
| ण्ण | ण्य | पुण्य>पुण्ण |

| ಅ.ಮಾ. | ಸಂ. | ಉದಾಹರಣೆ |
|---|---|---|
| | ण्व | किण्व > किण्ण |
| | र्ण | महार्णव > महण्णव |
| ण्ह | क्ष्ण | तीक्ष्ण > तिण्ह |
| | श्न | प्रश्न > पण्ह |
| | ष्ण | उष्ण > उण्ह |
| | स्न | स्नान > ण्हाण |
| | ह्न | वह्नि > वण्हि |
| | ह्न | मध्याह्न > मज्झण्ह |
| त्त | क्त | रक्त > रत्त |
| | त्न | यत्न > जत्त |
| | त्र | पात्र > पत्त |
| | त्त्व | तत्त्व > तत्त |
| | प्त | प्राप्त > पत्त |
| | र्त | मुहूर्त > |
| त्थ | क्थ | सिक्थ > सित्थ |
| | त्र | अत्र > एत्थ |
| | र्थ | अर्थ > अत्थ |
| | स्त | अस्तमित > अत्थमिय |
| | स्थ | प्रस्थ > पत्थ |
| . . . | | |
| | द्र | उपद्रव > उवद्दव |
| | द्व | द्वंद्व > दन्द |
| | ब्द | शब्द > सद्द |
| | र्द | अर्दित > अद्दिय |

| ಅ:ಮಾ. | ಸಂ. | ಉದಾಹರಣೆ |
|---|---|---|
| द्ध | ग्ध | दुग्ध > दुद्ध |
| | ध्व | विध्वंस > विद्धंस |
| | ब्ध | लब्धि > लद्धि |
| | र्ध | अर्धरात्र > अद्धरत्त |
| न्ह | ह्न | चिह्न > चिन्ह |
| न्न | ज्ञ | सर्वज्ञ > सव्वन्नु |
| | न्य | अन्य > अन्न |
| | न्व | अन्वीयमान > अन्निज्जमाण |
| | म्न | निम्न > निन्न |
| | र्ण | निर्णय > निन्नय |
| प्प | क्म | रुक्मिणी > रुप्पिणी |
| | त्प | तत्पर > तप्पर |
| | त्म | माहात्म्य > माहप्प |
| | प्य | रूप्य > रुप्प |
| | प्र | विप्र > विप्प |
| | र्प | अर्पयति > अप्पेइ |
| | ल्प | अल्प > अप्प |
| | प्ल | विप्लव > विप्पव |
| प्फ | स्फ | स्फटिक > फलिह |
| | ष्प | पुष्प > पुप्फ |
| | स्प | स्पर्श > फास |

| ಅ.ಮಾ. | ಸಂ. | ಉದಾಹರಣೆ |
|---|---|---|
| ब्ब | द्ब | बुद्बुद>बुब्बुड |
| | ब्र | अब्रवीत्>अब्बवी |
| ब्भ | द्भ | उद्भव>उब्भव |
| | भ्य | अभ्यास>अब्भास |
| | भ्र | अभ्रागम>अब्भागम |
| | र्भ | दर्भतृण>दब्भतिण |
| | ह्व | जिह्वा>जिब्भा |
| म्ब | म्र | आम्र>अम्ब |
| म्भ | ह्म | ब्राह्मण>बम्भण |
| म्म | न्म | जन्मन्>जम्म |
| | म्य | रम्य>रम्म |
| | र्म | धर्म>धम्म |
| | ल्म | गुल्म>गुम्म |
| म्ह | श्म | काश्मीर>काम्हार |
| | ष्म | उष्मन्>उम्हा |
| | स्म | विस्मित>विम्हिय |
| | ह्म | जिह्म>जिम्ह |
| ल्ल | ल्य | माल्य>मल्ल |
| | ल्व | बिल्व>बिल्ल |
| | र्य | सौकुमार्य>सोगुमल्ल |
| | र्द्र | आर्द्र>अल्ल |
| ल्ह | ह्ल | आह्लाद>अल्हाय |
| | र्य | पर्यस्त>पल्हत्थ |
| | द्व | उद्विग्न>उव्विग्ग |
| व्व | र्व | सर्व>सव्व |
| | व्य | हव्य>हव्व |
| | व्र | तीव्र>तिव्व |
| स्स | श्म | रश्मि>रस्सि |
| | श्य | विनश्यति>विणस्सइ |
| | ष्य | मनुष्य>मणुस्स |
| | श्र | मिश्र>मिस्स |
| | र्श | विमर्श>विमस्स (वीमंस) |
| | श्व | विश्वसति>विस्ससइ (वीससइ) |
| | ष्व | विष्वक्>विस्सुं (वीसुं) |
| | स्र | सहस्र>सहस्स |
| | स्व | स्वजन>सयण |

## ಸಂಯುಕ್ತ ವ್ಯಂಜನಗಳನ್ನು ಸುಲಭ ಮಾಡುವ ಉಪಾಯಗಳು.

- **ಸ್ವರಭಕ್ತಿ**
  - **ಸ್ವರಾಗಮ**
    (ಆದಿ ಅಕ್ಷರವು ಸಂಯುಕ್ತವ್ಯಂಜನವಾಗಿದ್ದರೆ ಸ್ವರ ಮೊದಲು ಕೂಡಿಸುವದು) ಉದಾ—
    स्त्री > **इस्थि**
  - **ಸ್ವರಭಕ್ತಿ**
    ಸಂಯುಕ್ತ ವ್ಯಂಜನದಲ್ಲಿಯ ಸ್ವರ ವ್ಯಂಜನಗಳನ್ನು ಸಮ ಮಾಡುವದು ಉದಾ—
    भार्या > **भारिया**
    सूर्य > **सूरिय**
- **ವರ್ಣಲೋಪ**
  (ಮಾತ್ರಾಹಾನಿ ತುಂಬಿಕೊಳ್ಳಲು)
  - **ದ್ವಿತ್ವ**
    ಸ್ಪರ್ಶ
    **ಅನುನಾಸಿಕ**
    ಊಷ್ಮ ಮತ್ತು ಅಂತಸ್ಥ
    **ಈ** ಇಳಿಕೆಯ ಕ್ರಮದಿಂದ ವರ್ಣಬಲವನ್ನು ತಿಳಿದು ಬಲಿಷ್ಠ ವರ್ಣವನ್ನು ದ್ವಿತ್ವ ಮಾಡುವದು. ಉದಾ—
    कार्य > **कज्ज**
    कन्या > **कन्ना**
    दुःख > **दुक्ख**
  - ಹಿಂದಿನ ಸ್ವರಕ್ಕೆ **ಅನುಸ್ವಾರ** ಕೂಡಿಸುವದು
    ಉದಾ—
    अश्रु > **अंसु**
    पक्ष > **पख** ಮುಂ.
  - ಹಿಂದಿನ **ಸ್ವರದೀರ್ಘ** ಮಾಡುವದು.
    ಉದಾ—
    अश्व > **आस**
    पश्य > **पास**
    ಮುಂ.

ಅಭ್ಯಾಸ :—

(೧) ಕೆಳಗಿನ ಶಬ್ದಗಳಿಗೆ ಪ್ರತಿಯಾಗಿ ಅರ್ಧಮಾಗಧಿ ಶಬ್ದಗಳನ್ನು ಹೇಳಿರಿ.

**आदर्श** (ಕನ್ನಡಿ), **स्मरण; सूक्ष्म; वैडूर्य; पुच्छ** (ಬಾಲ); **सपत्नी; अक्षि** (ಕಣ್ಣು); **काष्ठ; ग्रीष्म; सत्वरम्; सुवर्ण; सरस्वति; विह्वल; सम्यक्त्व; स्तव** (ಸ್ತುತಿ); **अस्थिर; पर्व** (ಭಾಗ); **लक्ष्मी; दुष्कर; शिल्प; दुर्योधन; संसर्ग; आरंभ; अन्वेषण; शोक** (ದುಃಖ); **यथाख्यात** (ಹೇಳಿದಂತೆ); **नगरी** (ನಗರ); **विदूषक; सेवक; मनस्** (ಮನ); **आधार; शिखरिन्** (ಪರ್ವತ); **आचार; मेखला; अंतर** (ಒಳಗೆ); **प्रभु; निकष; यद्;** (ಯಾಕಂದರೆ); **ज्ञान; अनगार** (ಸಾಧು); **दिनकर** (ಸೂರ್ಯ); **सुजन; मयूर; मृत; कृपा; वैतरिणी** (ನರಕದಲ್ಲಿಯ ನದಿ); **सौध** (ಅರಮನೆ); **ऐश्वर्य; गौतम** (ಒಂದು ಹೆಸರು); **परीक्षा; नामतः** (ಹೆಸರಿನಿಂದ); **स्पृश्** (ಮುಟ್ಟು); **प्रेक्ष्** (ನೋಡು); **पुस्तक; कौतुक; मृत्तिका** (ಮಣ್ಣು); **आम्र; गौरी** (ಹೆಸರು); **पृथ्वी.**

(೨) ಕೆಳಗಿನ ಅರ್ಧಮಾಗಧಿ ಶಬ್ದಗಳಿಗೆ ಸಂಸ್ಕೃತ ಶಬ್ದಗಳನ್ನು ಹೇಳಿರಿ.

**वज्ज; सस्स** (ಧಾನ್ಯ); **वीयण** (ಬೀಸಣಿಕೆ); **सिविया** (ಪಲ್ಲಕ್ಕಿ); **पहा** (ಬೆಳಕು); **खंद; वरिस; पउम** (ಕಮಲ); **अवरण्ह; पसिण; किण्ह; दुगुंछा** (ತಿರಸ್ಕಾರ); **सिणाण** (ಸ್ನಾನ); **अत्त; सुत्त** (ಮಲಗಿದ); **दुत्थर; निन्नगा** (ನದೀ); **कन्ना; परिचत्त; पज्जुन्न; अरहन्त; कन्ति** (ಕಾಂತಿ); **माया** (ತಾಯಿ); **नई; वित्ति** (ಜೀವನ); **माउसिया** (ಅಬಚಿ); **मच्चु** (ಮರಣ); **ओल्ल** (ಒದ್ದೆ); **भेसज्ज** (ಔಷಧ); **मेत्त** (ಮಾತ್ರ); **अमय; अदिट्ठ** (ನೋಡದ); **साहेज्ज** (ಸಹಾಯ); **जोव्वण** (ತಾರುಣ್ಯ); **वुड्ढि** (ಬೆಳುವಣಿಗೆ); **केकई** (ಒಂದು ಹೆಸರು); **पहु; साहा** (ಟೊಂಗೆ); **निउण** (ಕುಶಲ); **लायण्ण** (ಸೌಂದರ್ಯ); **आउ; सरिया; हरिय** (ಹಸರು); **अणल** (ಅಗ್ನಿ); **मढ** (ಆಶ್ರಮ); **नड; पायाल; संजम; सुद्ध** (ಶುದ್ಧ); **जाव.**

# ಸಂಧಿ ವಿಚಾರ.

ಸಂಧಿಪ್ರಕರಣವು ಸಂಸ್ಕೃತದಲ್ಲಿ ಬಹಳ ಮಹತ್ವದ್ದಾಗಿದೆ. ವಾಕ್ಯದಲ್ಲಿಯ ಪದಗಳಲ್ಲಿಮಾತ್ರ ವಿಕಲ್ಪವಾಗಿದ್ದು ಉಳಿದಕಡೆಗಳಲ್ಲೆಲ್ಲ ನಿತ್ಯವಾಗಿರುವದು. ಆದರೆ ಅರ್ಧಮಾಗಧಿಯಲ್ಲಿ ಸಂಧಿಯ ಬಿಗುವು ಅಷ್ಟೊಂದಿರುವದಿಲ್ಲ. ಸಂಸ್ಕೃತದಲ್ಲಿ ಸ್ವರಕ್ಕೆ ಸ್ವರವು ಪರವಾದರೆ ಸಂಧಿಯಾಗಲೆಬೇಕೆಂಬ ನಿಯಮವು ತಪ್ಪದೆ ಅನುಸರಿಸಲ್ಪಡುವದು. ಆದರೆ ಪ್ರಾಕೃತಗಳಲ್ಲಿ ಸ್ವರಗಳ ಮುಂದೆ ಸ್ವರಗಳನ್ನು ಸಂಧಿಯಿಲ್ಲದೆ ಬರೆಯುವದೇ ವಿಶೇಷವಾಗಿರುವದು. ಶಬ್ದಗಳ ಮಧ್ಯದಲ್ಲಿ, ಪ್ರತ್ಯಯಗಳನ್ನು ಹಚ್ಚುವಾಗ, ಸಮಾಸಗಳಲ್ಲಿಯೂ ಈ ರೀತಿಯನ್ನು ಕಾಣಬಹುದು.

ಸಂಧಿಯು ಎರಡು ಪ್ರಕಾರವಾಗಿದೆ. (೧) **ಸ್ವರಸಂಧಿ** ಮತ್ತು (೨) **ವ್ಯಂಜನಸಂಧಿ.** ಆದರೆ ಅರ್ಧಮಾಗಧಿಯಲ್ಲಿ ವ್ಯಂಜನಾಂತ ಶಬ್ದಗಳಿಲ್ಲದ್ದರಿಂದ ಅದು ತೀರ ಕಡಿಮೆಯೆನ್ನಬಹುದು. ಸಂಸ್ಕೃತದಿಂದ ನೇರವಾಗಿ ಬಂದ ಸಾಮಾಸಿಕ ಪದಗಳಲ್ಲಿಯೂ, ಉಚ್ಚಾರಸೌಲಭ್ಯಕ್ಕಾಗಿ ಕಲ್ಪಿಸಿದ ಕೆಲವು ಪ್ರಕಾರಗಳಲ್ಲಿಯೂ ವ್ಯಂಜನ ಸಂಧಿಯ ರೀತಿಯು ಕಂಡುಬರುವದು. ವಿಸರ್ಗ ಸಂಧಿಯಂತು ಇಲ್ಲವೇ ಇಲ್ಲ.

### ಸ್ವರಸಂಧಿ.

(೧) ಯಾವುದೊಂದು ಹ್ರಸ್ವ ಅಥವಾ ದೀರ್ಘ ಸ್ವರಕ್ಕೆ ಅದೇ ಹ್ರಸ್ವ ಅಥವಾ ದೀರ್ಘವು ಪರವಾಗಲು ಎರಡೂ ಕೂಡಿ ದೀರ್ಘವಾಗುವದು. (ಸವರ್ಣದೀರ್ಘ ಸಂಧಿ) ಉದಾ...

**अ + अ = आ.** धम्म + अधम्म = धमाधम्म; य + अवि = यावि; जीव + अजीव = जीवाजीव.

**अ + आ = आ.** गीय + आई = गीयाई जिण + आलयं = जिणालय; रयण + आगरो = रयणागरो.

**आ + अ = आ.** तहा + अवि = तहावि; धम्मकहा + अवसाण = धम्मकहावसाण; महा + अवयार = महावयार.

**आ + आ = आ.** कला + आयरिय = कलायरिअ, महा + आगरो = महागरो; धम्मकहा + आगार = धम्मकहागार.

इ + इ = ई मुणि + इण = मुणीण; भूवइ + इसु = भूवईसु.
इ + ई = ई. कवि + ईसर = कवीसर; मुणि + ईसर = मुणीसर.
ई + इ = ई. तरुणी + इण = तरुणीण; इत्थी + इयरो = इत्थीयरो.
ई + ई = ई. पुहवी + ईसर = पुहवीसर पुहवी + ईस = पुहवीस.
उ + उ = ऊ. बहु + उदग = बहूदग साउ + उयय = साऊयय.
उ + ऊ = ऊ. साहु + ऊसव = साहूसव संभु + ऊसव = संभूसव.
ऊ + उ = ऊ. वहू + उवयार = वहूवयार; वहू + उवागह = वहूवाणह.
ऊ + ऊ = ऊ. वहू + ऊरु = वहूरु; कणेरू + ऊसिय = कणेरूसिय.
ए + ए = ए. इमे + एयारुवे = इमेयारुवे, से + एवं = सेवं.
ओ + ओ = ओ. देवो + ओसहि = देवोसहि.

¶ ಆದರೆ ಮುಂದಿನ ಸ್ವರದ ಮುಂದೆ ಒತ್ತಕ್ಷರವಿದ್ದರೆ ದೀರ್ಘವಾಗದೆ ಹ್ರಸ್ವವಾಗುವದು. ಉದಾ. — मरण + अन्त = मरणन्त; मुणि + इन्द = मुणिन्द; साहु + उत्त = साहुत्त; महा + अण्णव = महाण्णव ಮುಂ.

(೨) अ, आ ಗಳಿಗೆ ಅವುಗಳನ್ನುಳಿದ ಬೇರೆ ವಿಜಾತೀಯ ಹ್ರಸ್ವ ಸ್ವರಗಳು ಪರವಾದರೂ ಸಂಧಿಯಾಗುವದು. ಉದಾ.—

अ + इ = ए राय + इसि = राएसि न + इच्छइ = नेच्छइ.
आ + इ = ए महा + इसि = महेसि.

¶ ಆದರೆ ಮುಂದೆ ಒತ್ತಕ್ಷರವಿದ್ದರೆ इ ಕಾರವೆ ಆಗುವದು. ಉದಾ. — नर + इन्द = नरिन्द; गय + इन्द = गइन्द.

अ + उ = ओ. सह + उयर = सहोयर; समण + उवासग = समणोवासग.
आ + उ = ओ. जहा + उइयं = जहोइयं; महा + उवयार = महोवयार.

¶ ಆದರೆ ಮುಂದೆ ಒತ್ತಕ್ಷರವಿದ್ದರೆ उ ಕಾರವೆ ಆಗುವದು. ಉದಾ. — पुरिस + उत्तम = पुरिसुत्तम; रयण + उज्जल = रयणुज्जल.

अ, आ ಕಾರಗಳಿಗೆ ए, ओ ಪರವಾದರೆ ಎರಡಕ್ಕೂ ಕೂಡಿ ए, ओ ಕಾರಗಳೇ ಆಗುವವು. ಉದಾ. —

अ + ए = ए. कमेण + एव = कमेणेव; न + एव = नेव.
आ + ए = ए. जहा + एव = जहेव; तहा + एव = तहेव.
अ + ओ = ओ. जल + ओह = जलोह; भक्ख + ओयण = भक्खोयण.

आ + ओ = ओ.  मह + ओसहि = महोसहि.

**ಸಂಸ್ಕೃತದಿಂದ ಬಂದ ಸಂಧಿಗಳು.**

अति + अन्त = अत्यन्त > अच्चन्त; अधि + उपपन्न = अध्युपपन्न > अज्झोववन्न;
अपि + एके = अप्येके > अप्पेगे. इति + आदि = इत्यादि इच्चाइ ಮುಂ.

**ವ್ಯಂಜನ ಸಂಧಿ.**

ವ್ಯಂಜನಾಂತ ಶಬ್ದಗಳೆ ಇಲ್ಲಸ್ಪರಿಂದ ವ್ಯಂಜನ ಸಂಧಿಯೇ ಇಲ್ಲವೆನ್ನಬಹುದು. ಕೆಲವು ರೂಪಗಳು ಸಂಸ್ಕೃತದಿಂದ ಬಂದಿರುವವು. ಉದಾ. – पुनरुक्त पुणरुत्त; पुनरपि पुणरवि, निरानन्द > निराणंद; निरुपम > निरुवम; दुरतिक्रम दुरइक्कम ಮುಂ.

ಅನೇಕಸಲ ಎರಡು ಶಬ್ದಗಳ ನಡುವೆ म् ವ್ಯಂಜನ ಸೇರಿಸಿ ಆಗಬೇಕಾದ ಸಂಧಿಯುನ್ನು ತಪ್ಪಿಸುವರು. ಉದಾ. – अन्न + अन्न = अन्नमन्न; एग + एग = एगमेग; अंग + अंग = अंगमंग. ಒಮ್ಮೊಮ್ಮೆ य् ಅಥವಾ र् ಸೇರಿಸುವರು. ಉದಾ. — दु + अंगुल = दुयंगुल; सु + अक्खाए = सुयक्खाए; धि + अत्थु = धिरत्थु; सिही + इव = सिहिरिव.

ಸಾಮಾಸಿಕ ಪದಗಳಲ್ಲಿ ನಡುವೆ ಅನುಸ್ವಾರವನ್ನು ಸೇರಿಸುವದುಂಟು. ಉದಾ. – निरय + गामी = निरयंगामी; उड्ढ + गारव = उड्ढंगारव; दीह + गारव = दीहंगारव.

**ಕೆಲವು ಅನಿಯಮಿತ ಪ್ರಕಾರಗಳು.**

अ + अ = ಒಮ್ಮೊಮ್ಮೆ ಒಂದು अ ಲೋಪವಾಗುವದು. केण + अवि = केण वि, तहा + अवि = तहा वि; तं + अपि = तं पि.

अ + ई = ए.  नर + ईसर = नरेसर.

आ + ई = ए.  महा + ईस = महेस.

अ + ऊ = ओ.  एग + ऊरु = एगोरु.

आ + ऊ = ओ.  महा + ऊसव = महोसव.

¶ ಮುಂದಿನ ಪದದ ಆದಿ ವ್ಯಂಜನವು ದ್ವಿತ್ವ ಹೊಂದುವದು. ಉದಾ. – जाव + जीव = जावज्जीव; त + पभिइं = तप्पभिइं; त + निवारण = तन्निवारण; स + जण = सज्जण, स + धम्म = सद्धम्म.

ಸಂಸ್ಕೃತ ಶಬ್ದಗಳಲ್ಲಿ ಮೊದಲನೆಯದು ವ್ಯಂಜನಾಂತವಾಗಿರುವದರಿಂದ ಸಂಸ್ಕೃತ ಸಂಧಿಯಲ್ಲಿ ವಿಜಾತೀಯ ಸಂಯುಕ್ತಾಕ್ಷರವು ಬರುತ್ತಿತ್ತು. ಆದರೆ ಅರ್ಧಮಾಗಧಿಯಲ್ಲಿ ಮುಂದಿನ ವ್ಯಂಜನವನ್ನು ದ್ವಿತ್ವಮಾಡಿ ಸಜಾತೀಯ ಸಂಯುಕ್ತ ವ್ಯಂಜನವನ್ನು ಮಾಡುತ್ತಾರೆ.

**ಕೆಳಗೆ ತೋರಿಸಿದ ಪ್ರಕಾರಗಳಲ್ಲಿ ಸಂಧಿಯಾಗುವದಿಲ್ಲ.**

(೧) **अ, आ** ಗಳ ಹೊರತು ಇತರ ಸ್ವರಗಳಿಗೆ ವಿಜಾತೀಯ ಸ್ವರಗಳು ಪರವಾದರೆ ಸಂಧಿಯಾಗುವದಿಲ್ಲ.

(೨) **यश्रुति** ಯ ನಿಯಮದಂತೆ ಯಾವುದಾದರೊಂದು ವ್ಯಂಜನವು ಲೋಪವಾಗಿ ಉಳಿದ ಸ್ವರವು ಹಿಂದಿನ ಸ್ವರದೊಡನೆ ಸಂಧಿಯಾಗುವದಿಲ್ಲ. ಉದಾ. — **जइ उत** ಮುಂತಾದವುಗಳ ಮುಂದೆ ಸಜಾತೀಯ ಅಥವಾ ವಿಜಾತೀಯವಾದ ಯಾವದೇ ಸ್ವರವಿದ್ದರೂ ಸಂಧಿಯಾಗುವದಿಲ್ಲ.

(೩) ಪ್ರತ್ಯಯಗಳಲ್ಲಿಯ ವ್ಯಂಜನವು ಲೋಪವಾಗಿ ಉಳಿದ ಸ್ವರದೊಡನೆ ಸಂಧಿಯಾಗುವದಿಲ್ಲ. ಉದಾ. — **इच्छइ, गाउं, पासउ** ಮುಂತಾದವುಗಳ ಮುಂದೆ ಯಾವ ಸ್ವರ ಬಂದರೂ ಸಂಧಿಯಾಗುವದಿಲ್ಲ.

(೪) ಒಂದೆ ಶಬ್ದದಲ್ಲಿ ಅಥವಾ ಪದದಲ್ಲಿ ಸ್ವರದ ಮುಂದೆ ಸ್ವರವಿದ್ದರೂ ಸಂಧಿಯಾಗುವದಿಲ್ಲ. ಉದಾ. — **देवीए, पाओ** ಮುಂತಾದವು;

**ಅಭ್ಯಾಸ.**

(೧) ಸಂಧಿಮಾಡಿ ಬರೆಯಿರಿ.

**जम्म + अन्तर; महा + इड्ढि; उव + अजिय; अविगीए + इति; भिक्खा + अट्ठा; एत्थ + अन्तरम्मि; फासुअ + एसणिअ, जहा + उइय; महा + ऊसव; साहस + एक्करस; अन्न + अन्न; एक्क + एक्क रत्त + अच्छ, सु + अहिज्जिय; वाम + इयर.**

(೨) ಸಂಧಿ ಬಿಡಿಸಿರಿ.

**बाहिरुज्जाग; सुरासुर; महाडवी; देहोवचय; दवग्गि; वरोरु; वासेणोल्ल; पुरिसुत्तम; दाहिणड्ढ; महेसि; जोवणमुदए; खिप्पामेव; महोवयार; सीओदर; नत्थि.**

೩

# ಶಬ್ದವಿಚಾರ

**ಶಬ್ದವಿಚಾರ.**

ಶಬ್ದಗಳು ಅರ್ಧಮಾಗಧಿಯಲ್ಲಿ ಸಂಸ್ಕೃತದಿಂದ ಹೇಗೆ ಬರುತ್ತವೆಂಬದನ್ನು ನೋಡಿದ್ದಾಯಿತು. ಆದರೆ ಶಬ್ದಗಳ ಮೂಲರೂಪಗಳನ್ನು ವಾಕ್ಯದಲ್ಲಿ ಉಪಯೋಗಿಸಲು ಬರುವದಿಲ್ಲ. ಅವುಗಳಿಗೆ ಪ್ರತ್ಯಯಗಳನ್ನು ಹಚ್ಚಿ ಪದಗಳನ್ನು ಸಿದ್ಧಪಡಿಸಬೇಕಾಗುವದು. ಈ ವಿಭಾಗವು ವ್ಯಾಕರಣದಲ್ಲಿ ಮುಖ್ಯ ಅಂಗವಾಗಿರುವದು. ಅರ್ಧಮಾಗಧಿ ಮೊದಲಾದ ಪ್ರಾಕೃತಗಳು ಸಂಸ್ಕೃತದ ರಚನಾರೀತಿಯನ್ನು ಅನುಸರಿಸಿದ್ದರೂ ಭಾಷೆಯು ಬಳಿಕೆಗೆ ಸುಲಭವಾಗುವಂತೆ ಮಾಡಲು ಅನೇಕ ಮಾರ್ಪಾಟುಗಳನ್ನು ಮಾಡಿಕೊಂಡಿವೆ.

ಶಬ್ದಗಳನ್ನೆಲ್ಲ ಅವ್ಯಯ ಮತ್ತು ಅವ್ಯಯೇತರವೆಂದು ಎರಡು ಭಾಗ ಮಾಡುವದುಂಟು. ಎರಡನೆಯ ಪ್ರಕಾರದ ಶಬ್ದಗಳೇ ಭಾಷೆಯಲ್ಲಿ ಹೆಚ್ಚು. ಮತ್ತು ಅವುಗಳೇ ಪ್ರತ್ಯಯ ಹೊಂದಿ 'ಪದ' ಗಳಾಗುವವು. ಎರಡೂ ಪ್ರಕಾರದ ಶಬ್ದಗಳಲ್ಲಿ ನಾಲ್ಕು ನಾಲ್ಕು ಉಪಭೇದಗಳನ್ನು ಹೇಳುವರು. ಸಂಸ್ಕೃತದಂತೆ ಅರ್ಧಮಾಗಧಿಯಲ್ಲಿ ವ್ಯಂಜನಾಂತ ಶಬ್ದಗಳೂ ದ್ವಿವಚನವೂ ಇಲ್ಲ. ಶಬ್ದಗಳ ಲಿಂಗವು ಸಾಧಾರಣ ಸಂಸ್ಕೃತವನ್ನು ಅನುಸರಿಸುವದು. ಕ್ರಿಯಾಪದವು ಸಂಸ್ಕೃತದಂತೆ ಲಿಂಗರಹಿತವಾಗಿರುವದು. ಪ್ರಚಲಿತ ( ಕನ್ನಡ, ಮರಾಠಿ ಮುಂ. ) ಭಾಷೆಗಳಂತೆ ಸ್ಥಿತ್ಯಂತರವನ್ನು ಹೊಂದುವದಿಲ್ಲ. ಆದುದರಿಂದ '**गच्छइ**' ಎಂಬ ರೂಪವೇ ಅವನು, ಅವಳು ಅದು ಎಂಬ ಎಲ್ಲ ಕರ್ತೃಪದಗಳೊಡನೆಯೂ ಬರುವದು. ಹೋಗುತ್ತಾನೆ, ಹೋಗುತ್ತಾಳೆ, ಹೋಗುತ್ತದೆ; ಹೀಗೆ ಬೇರೆ ಬೇರೆಯಾಗುವದಿಲ್ಲ.

ಎಲ್ಲ ಸ್ವರಾಂತ ನಾಮಗಳನ್ನು ಅರ್ಧಮಾಗಧಿಯಲ್ಲಿ ಕೆಳಗಿನಂತೆ ವಿಂಗಡಿಸಬಹುದು. ಅದರಿಂದ ಹನ್ನೊಂದು ಪ್ರಕಾರದ ನಾಮಗಳಾಗುವವು. ಸಂಸ್ಕೃತದಿಂದ ಬಂದ ಅನಿಯಮಿತವಾಗಿ ನಡೆಯುವ ಕೆಲವು ವ್ಯಂಜನಾಂತ ನಾಮಗಳೂ, 'ಋ' ಕಾರಾಂತ ನಾಮದ ಪ್ರಕಾರಗಳೂ ಮೊದಲಾದ ನಾಲ್ಕೈದು ಶಬ್ದಗಳನ್ನು ಬಿಟ್ಟರೆ ಉಳಿದೆಲ್ಲ ನಾಮಗಳೂ ಕೆಳಗಿನ ಹನ್ನೊಂದು ಪ್ರಕಾರಗಳಲ್ಲಿಯೆ ಬರುವವು.

| ಪುಲ್ಲಿಂಗ | ನಪುಸಕಲಿಂಗ | ಸ್ತ್ರೀಲಿಂಗ |
|---|---|---|
| **ಅ ಇ, ಉ** ಕಾರಾಂತ | **ಅ, ಇ, ಉ** ಕಾರಾಂತ | **ಆ, ಇ ಈ, ಉ, ಊ** ಕಾರಾಂತ |

ಈ ಪ್ರಕಾರ ಹನ್ನೊಂದು ಬಗೆಯ ನಾಮಪದಗಳಿದ್ದಿದೆ ಸರ್ವನಾಮಗಳೂ, ವಿಶೇಷಣಗಳೂ ಇರುವವು. ಅವು ಸಾಧಾರಣ ನಾಮಪದಗಳಂತೆಯೆ ನಡೆಯುವವು. ಅವುಗಳಲ್ಲಿಯ ವಿಶೇಷಣಗಳನ್ನು ಮುಂದೆ ಕೊಡಲಾಗುವದು. ಅರ್ಧಮಾಗಧಿಯಲ್ಲಿ ದ್ವಿವಚನವಿಲ್ಲದ್ದನ್ನು ಈ ಮೊದಲು ಹೇಳಿದೆ. ಇದಲ್ಲದೆ ಚತುರ್ಥಿವಿಭಕ್ತಿಗೆ ಬೇರೆ ಪ್ರತ್ಯಯಗಳೂ ಇಲ್ಲ. ಷಷ್ಠಿ ರೂಪಗಳನ್ನೇ ಚತುರ್ಥಿಗಾಗಿ ಉಪಯೋಗಿಸುವರು. ಪ್ರತ್ಯಯಗಳೆಲ್ಲ ಸಂಸ್ಕೃತದಿಂದಲೇ ಬಂದಿದ್ದರೂ ಸಾಮಾನ್ಯವಾಗಿ ಎಲ್ಲ ಬಗೆಯ ನಾಮ ಪದಗಳಿಗೆ (ಲಿಂಗಾನುಸಾರವಾದ ಕೆಲವು ಭೇದಗಳನ್ನು ಬಿಟ್ಟರೆ) ಒಂದೇ ವಿಧವಾಗಿರುವದರಿಂದಲೂ, ಸಂಧಿಯ ನಿರ್ಬಂಧ ಅಷ್ಟು ಇಲ್ಲದ್ದರಿಂದಲೂ, ರೂಪ ಸಿದ್ಧಿಯು ಬಹಳ ಸುಲಭವಾಗಿರುವದು.

ಇನ್ನು ಕ್ರಿಯಾಪದಗಳ ವಿಚಾರವು ಅರ್ಧಮಾಗಧಿಯಲ್ಲಿ ಬಹಳ ಸುಲಭವಾಗಿರುವದು. ಧಾತುಗಳಲ್ಲಿ ಪರಸ್ಮೈಪದದ, ಆತ್ಮನೇಪದದ, ಉಭಪದವೆಂಬ ವಿಭಾಗವಿಲ್ಲ. ಎಲ್ಲ ಧಾತುಗಳೂ ಪರಸ್ಮೈಪದದ ಒಂದೇ ವಿಧವಾದ ಪ್ರತ್ಯಯಗಳನ್ನು ತೆಗೆದುಕೊಳ್ಳುವವು ಕೆಲವು ನೇರವಾಗಿ ಸಂಸ್ಕೃತದಿಂದ ಬಂದ ಆತ್ಮನೇಪದದ ರೂಪಗಳಿರುವವು. ಅವು ಸ್ವಲ್ಪಮಾತ್ರ. ಗಣವಿಭಾಗವಾಗಲಿ, ಅದಕ್ಕನುಗುಣವಾಗಿ ವಿಕರಣಗಳಾಗಲಿ ಅರ್ಧಮಾಗಧಿಯಲ್ಲಿಲ್ಲ. ಒಂದೆರಡು ಅಪವಾದಗಳನ್ನು ಬಿಟ್ಟರೆ ಧಾತುಗಳಿಗೆ ಆಖ್ಯಾತ ಪ್ರತ್ಯಯಗಳು ಹತ್ತುವಾಗ ಯಾವ ವಿಕಾರಗಳೂ ಆಗುವದಿಲ್ಲ.

ಅಂತ್ಯಸ್ವರದ ವಿಚಾರದಿಂದ ಧಾತುಗಳಲ್ಲಿ ಮೂರು ವರ್ಗಗಳನ್ನು ಮಾಡಬಹುದು.

(೧) **ಅ** ಕಾರಾಂತ (೨) (**ಅ**) **ಏ** ಕಾರಾಂತ; **ಅ** ಕಾರಾಂತವಿದ್ದು ಪ್ರತ್ಯಯಗಳ ಪೂರ್ವದಲ್ಲಿ '**ಏ**' ಕಾರಾಂತವಾಗುವ ಧಾತುಗಳು. (೩) **ಉಳಿದವುಗಳು – ಆ, ಈ, ಏ, ಓ** ಕಾರಾಂತಗಳು. ಎಲ್ಲ ಧಾತುಗಳು ಮೂರೂ ಕಾಲಗಳಲ್ಲಿ ನಡೆಯುವವು. ಆದರೆ ಭೂತಕಾಲದ ಉಪಯೋಗವು ಹೆಚ್ಚಾಗಿಲ್ಲ. ಸಂಸ್ಕೃತದಂತೆ ಭೂತಕಾಲವು ಮೂರು ವಿಧವಾಗಿಲ್ಲ. ಭವಿಷ್ಯತ್ಕಾಲಕ್ಕೆ ಎರಡು

ಬಗೆಯ ಪ್ರತ್ಯಯಗಳಿದ್ದರೂ, ಸಂಸ್ಕೃತದಂತೆ ಎರಡು ರೀತಿಯ ಭವಿಷ್ಯತ್ಕಾಲವಿಲ್ಲ. ಸಂಸ್ಕೃತದ ಆಜ್ಞಾರ್ಥ, ವಿಧ್ಯರ್ಥ, ಮತ್ತು ಸಂಕೇತಾರ್ಥಗಳು ಅರ್ಧಮಾಗಧಿಯಲ್ಲಿದ್ದು ಮೊದಲಿನವೆರಡು ಬಹಳ ಉಪಯೋಗದಲ್ಲಿ ಹೆಚ್ಚಾಗಿರುವವು. ಮತ್ತು ಕೊನೆಯದಕ್ಕೆ ಸ್ವತಂತ್ರ ಪ್ರತ್ಯಯ ಇಲ್ಲ.

ಸಂಸ್ಕೃತದಂತೆ ಅರ್ಧಮಾಗಧಿಯಲ್ಲಿಯೂ ಧಾತುಸಾಧಿತಗಳ ಉಪಯೋಗವು ಹೆಚ್ಚಾಗಿರುವದು. ಅವುಗಳಲ್ಲಿ ಮೂರು ವಿಶೇಷಣಗಳಂತೆ ಉಪಯೋಗವಾಗುವವು ಮತ್ತು ವಾಕ್ಯದಲ್ಲಿ ಕ್ರಿಯಾಪದದ ಕೆಲಸವನ್ನು ಮಾಡುವವು. ಇವು ವಿಭಕ್ತಿ ಪ್ರತ್ಯಯಗಳನ್ನು ಹೊಂದುವದರಿಂದ ವಿಕಾರಿಯೆನಿಸುವವು. ಎರಡು ಅವ್ಯಯಗಳಾಗಿದ್ದು ಅವಿಕಾರಿಯೆನಿಸುವವು. ಅವು ಕೆಳಗಿನಂತಿರುವವು.

(೧) ವರ್ತಮಾನಕಾಲವಾಚಕ ಧಾತು ಸಾಧಿತ ವಿಶೇಷಣ ಅಥವಾ ವರ್ತಮಾನಕೃದಂತ ವಿಶೇಷಣ (ಕರ್ತರಿ – ಕರ್ಮಣಿ).

(೨) ಭೂತಕಾಲವಾಚಕ ಧಾತು ಸಾಧಿತ (ಭೂತಕೃದಂತ) ವಿಶೇಷಣ (ಕರ್ತರಿ – ಕರ್ಮಣಿ).

(೩) ವಿಧ್ಯರ್ಥ ಕರ್ಮಣಿ (ಕೃದಂತ) ಧಾತು ಸಾಧಿತ ವಿಶೇಷಣ.

(೪) ಭೂತಕೃದಂತ ಅವ್ಯಯ (**ल्यबन्त**) ಅಥವಾ ಭೂತನ್ಯೂನ.

(೫) ಹೇತ್ವರ್ಥಕ ಅವ್ಯಯ (**तुमन्त**)

ಮೇಲಿನ ಮೂರು ನಾಮಪದದ ಲಿಂಗದಂತೆ ಬದಲಾಗುವವು. ಆಗ ಆಯಾ ಅಂತ್ಯ ಸ್ವರದಂತೆ ನಡೆಯುವವು.

ಅವ್ಯಯಗಳನ್ನು ಸಾಮಾನ್ಯವಾಗಿ ನಾಲ್ಕು ಪ್ರಕಾರ ವಿಭಾಗಿಸುವರು.

(೧) **ಕ್ರಿಯಾವಿಶೇಷಣಾವ್ಯಯ**, (೨) **ಶಬ್ದಯೋಗೀ ಅವ್ಯಯ** (ಉಪಸರ್ಗ ಸಹಿತ) (೩) **ಉಭಯಾನ್ವಯಿ ಅವ್ಯಯ** (೪) **ಕೇವಲ ಪ್ರಯೋಗೀ ಅವ್ಯಯ** (ಉದ್ಗಾರ ಮುಂ.) ಮೊದಲಿನ ಮೂರರ ಉಪಯೋಗವೇ ಹೆಚ್ಚು. ಅದರಲ್ಲಿಯೂ ಮೊದಲಿನದು ಆಮೇಲೆ ಎರಡನೇಯದು ಹೀಗೆ ಇಳಿಕೆಯ ಕ್ರಮದಲ್ಲಿ ಅವುಗಳ ಉಪಯೋಗದ ಪ್ರಮಾಣವೆಂದು ತಿಳಿಯಬಹುದು.

# ಶಬ್ದಗಳ ಕೋಷ್ಟಕ.*

- ವಿಕಾರಿ-(ಅವ್ಯಯಗಳಲ್ಲದ)
  - ೧ ನಾಮ ೨ ಸರ್ವನಾಮ ೩ ವಿಶೇಷಣ
    - ವಿಭಕ್ತಿ ಪ್ರತ್ಯಯ (ನಾಮಪದಗಳಂತೆ)
    - (i) ವಚನಗಳು ಎರಡು
    - (ii) ಚತುರ್ಥಿಯನ್ನು ಬಿಟ್ಟು ಇತರ ೭ (ಸಂಬೋಧನಸಹಿತ) ವಿಭಕ್ತಿಗಳು
    - (iii) ಮೂರು ಲಿಂಗಗಳು
    - (iv) ಸ್ವರಾಂತವಾಗಿ ಹನ್ನೊಂದು ಪ್ರಕಾರಗಳು

| ಪು. | ನ. | ಸ್ತ್ರೀ. |
|---|---|---|
| ಅ, ಇ, | ಅ ಇ, | ಆ ಇ, ಈ, |
| ಉ | ಉ | ಉ, ಊ |

  - ೪ ಧಾತುಗಳು (ಆಖ್ಯಾತ ಪ್ರತ್ಯಯ ಕ್ರಿಯಾಪದಗಳು)
    - (i) ಎರಡು ವಚನಗಳು
    - (ii) ಎಲ್ಲ ಪರಸ್ಮೈಪದ
    - (iii) ಗಣ ಮತ್ತು ವಿಕರಣ ಇಲ್ಲ
    - (iv) ಕರ್ತೃವಿನ ಲಿಂಗದಂತೆ ರೂಪಭೇದವಿಲ್ಲ.
    - (v) ಮೂರು ಕಾಲಗಳು ಮತ್ತು ಮೂರು ಅರ್ಥಗಳು
    - (vi) ಸ್ವರಾಂತವಾಗಿ ೩ ಭೇದಗಳು
      - ಅ ಕಾರಾಂತ
      - ಅ(ಏ) ಕಾರಾಂತ
      - ಆ, ಏ, ಓ ಕಾರಾಂತ
- ಅವಿಕಾರಿ-(ಅವ್ಯಯಗಳು
  - ೫ ಕ್ರಿಯಾ ವಿಶೇಷಣ,
  - ೬ ಶಬ್ದ ಯೋಗೀ,
  - ೭ ಉಭಯಾನ್ವಯೀ,
  - ೮ ಕೇವಲ ಪ್ರಯೋಗೀ

*ವ್ಯಂಜನಾಂತ ಸಂಸ್ಕೃತ ಶಬ್ದಗಳಲ್ಲಿ ಎಲ್ಲ ಶಬ್ದಗಳೂ ಅರ್ಧಮಾಗಧಿಯಲ್ಲಿ ಸ್ವರಾಂತವಾಗಿರುವವು.




# ಪಾಠ ೧

## ವರ್ತಮಾನಕಾಲ

ಅರ್ಧಮಾಗಧಿಯಲ್ಲಿ ಆಖ್ಯಾತಪ್ರತ್ಯಯಗಳು ಸಂಸ್ಕೃತದ ಪರಸ್ಮೈಪದದ ಪ್ರತ್ಯಯಗಳಿಂದ ಬಂದಿವೆ.* ವರ್ಣವಿಕಾರದ ರೀತಿಯನ್ನನುಲಕ್ಷಿಸಿ ಎಷ್ಟು ಬದಲಾಗಬೇಕೊ ಅಷ್ಟು ಮಾತ್ರ ಬದಲಾಗುವವು. ಉದಾ— ತೃತೀಯ ಪುರುಷ ಏಕವಚನದ ति ಪ್ರತ್ಯಯವು इ ಎಂದಾಗುವದು.× ಅರ್ಧಮಾಗಧಿಯಲ್ಲಿ ದ್ವಿವಚನವಿಲ್ಲ.

**ವರ್ತಮಾನಕಾಲದ ಪ್ರತ್ಯಯಗಳು.**

| ಪುರುಷ | ಏಕವಚನ | | ಬಹುವಚನ. | |
|---|---|---|---|---|
| | ಸಂಸ್ಕೃತ | ಅರ್ಧಮಾಗಧೀ | ಸಂಸ್ಕೃತ | ಅರ್ಧಮಾಗಧೀ |
| ಉತ್ತಮ | मि | **मि** | मस् | **मो** |
| ಮಧ್ಯಮ | सि | **सि** | थ | **ह** |
| ತೃತೀಯ | ति | **इ** | अन्ति | **अन्ति** |

ಅರ್ಧಮಾಗಧಿಯಲ್ಲಿ ಧಾತುಗಳ ಅಂತ್ಯ ಸ್ವರದಿಂದ ಮೂರು ಗುಂಪುಗಳನ್ನು ಮಾಡಬಹುದು. ಸಂಸ್ಕೃತದಂತೆ ಹತ್ತು ಗಣಗಳಿಲ್ಲ. ಪ್ರತಿಯೊಂದು ಗುಂಪನ್ನೂ ಬೇರೆಬೇರೆಯಾಗಿ ವಿಚಾರಿಸುವಾ.

### ೧ ನೆಯ ಗುಂಪು. अ ಕಾರಾಂತ ಧಾತುಗಳು.

ಉತ್ತಮ ಪುರುಷದ ಪ್ರತ್ಯಯಗಳನ್ನು ಹಚ್ಚುವಾಗ ಅಂತ್ಯಸ್ವರವು ದೀರ್ಘವಾಗುವದು. ಉದಾ— **भण + मि = भणामि; भण + मो = भणामो;**

---

* ಕೆಲವು ಆತ್ಮನೇ ಪದದ ರೂಪಗಳೂ ಅ. ಮಾ. ಯಲ್ಲಿ ದೊರಕುವವು. ಉದಾ— **वट्टे वट्टसे, वट्टए, वट्टन्ते, जाणे, लहे, मन्ते, रमे, वन्दे, पभाससे, लहे, लहए, अवबुज्झसे रीयन्ते, चिट्ठन्ते, उवलभन्ते तीरए, जुज्जए, भुंजए, मुच्चए** ಮುಂ.

× **ति** ಪ್ರತ್ಯಯದಲ್ಲಿ **त्** ಕಾರವು ಅನಾದ್ಯ ಮತ್ತು ದ್ವಿಸ್ವರಾಂತರ್ಗತವಾಗುವದರಿಂದ ಅದು ಲೋಪವಾಗುವದು. **गच्छति** > **गच्छइ** ಎಂದು ರೂಪವು ಸಿದ್ಧವಾಗುವದು.

ದ್ವಿತೀಯ ಮತ್ತು ತೃತೀಯ ಪುರುಷದ ಪ್ರತ್ಯಯಗಳನ್ನು ಹಚ್ಚುವಾಗ ಯಾವ ಬದಲಾವಣೆಯೂ ಆಗುವದಿಲ್ಲ. ಉದಾ – **भण + सि = भणसि; भण + इ = भणइ;** ತೃತೀಯ ಪುರುಷ ಬಹುವಚನದ ಪ್ರತ್ಯಯವಾದ **अन्ति** ಇದನ್ನು ಸಂಧಿ ನಿಯಮದಂತೆ ಹಚ್ಚಲಾಗುವದು. **= भण + अन्ति = भणन्ति** ಎಂಬ ರೂಪವಾಗುವದು. ಎಲ್ಲ **अ** ಕಾರಾಂತ ಧಾತುಗಳು ಕೆಳಗ ತೋರಿಸಿ ದಂತೆ ನಡೆಯುತ್ತವೆ.

| **अ ಕಾರಾಂತ ಧಾತು** | सुण (ಕೇಳು) | |
|---|---|---|
| ಉತ್ತಮ ಪುರುಷ. | सुणामि | सुणामो |
| ದ್ವಿತೀಯ ಪುರುಷ. | सुणसि | सुणह |
| ತೃತೀಯ ಪುರುಷ. | सुणइ | सुणन्ति |

**अस** ಧಾತುವು ಕೆಳಗೆ ತೋರಿಸಿದಂತೆ ಅನಿಯಮಿತವಾಗಿರುವದು.

| | | |
|---|---|---|
| ಉತ್ತಮ ಪುರುಷ. | अंसि, मि | मो |
| ದ್ವಿತೀಯ ಪುರುಷ. | असि, सि | त्थ |
| ತೃತೀಯ ಪುರುಷ. | अत्थि * | सन्ति |

## ೨ ನೆಯ ಗುಂಪು. ए ಕಾರಾಂತ ಧಾತುಗಳು. §

ಸಂಸ್ಕೃತದಲ್ಲಿಯ ೧೦ ನೆಯ ಗಣದ ಧಾತುಗಳು, ನಾಮಧಾತುಗಳು. ಪ್ರಯೋಜಕ ಧಾತುಗಳು, **ए** ಕರಾಂತ ಧಾತುಗಳ ಗುಂಪಿನಲ್ಲಿ ಬರುತ್ತವೆ, ಈ ಎಲ್ಲ ಧಾತುಗಳೂ **अ** ಕಾರಾಂತಗಳಂತೆಯೆ ನಡೆಯುತ್ತವೆ. ಆದರೆ ತೃತೀಯ ಪುರುಷದ ಬಹುಚನದ **अन्ति** ಪ್ರತ್ಯಯವನ್ನು ಹಚ್ಚುವಾಗ ಮಾತ್ರ **अ** ಕಾರವು ಲೋಪವಾಗುವದು. ಉತ್ತಮ ಪುರುಷದ ಪ್ರತ್ಯಯಗಳನ್ನು ಹಚ್ಚುವಾಗ ಹಿಂದಿನ ಸ್ವರವು ದೀರ್ಘವಾಗುವ ನಿಯಮವು ಇಲ್ಲಿ ಅನ್ವಯಿ ಸುವದಿಲ್ಲ. ಎರಡನೆಯ ಗುಂಪಿನ ಎಲ್ಲ **ए** ಕಾರಾಂತ ಧಾತುಗಳೂ ಕೆಳಗೆ ತೋರಿಸಿದಂತೆ ನಡೆಯುತ್ತವೆ.

* **अत्थि** ಇದೊಂದೇ ರೂಪವನ್ನೇ ಎಲ್ಲ ಪುರುಷ ವಚನಗಳಲ್ಲಿಯೂ ಉಪ ಯೋಗಿಸುವದುಂಟು.

§ ಈ ಗುಂಪಿನ ಎಲ್ಲ ಧಾತುಗಳೂ ಮೊದಲು **अ** ಕಾರಾಂತವಾಗಿಯೇ ಇರು ವವು. ಮತ್ತು ೧ ನೆಯ ಗುಂಪಿನ ಧಾತುಗಳಂತೆಯೂ ನಡೆಸಬಹುದು. ನಿಜವಾಗಿ ಇವು ಬೇರೆಯ ಗುಂಪು ಆಗಲಾರವು. **अ** ಕಾರಾಂತವಾದ ಈ ಧಾತುಗಳಲ್ಲಿ ಅಂತ್ಯ **अ** ಕಾರವು ಪ್ರತ್ಯಯಗಳ ಪೂರ್ವದಲ್ಲಿ **ए** ಕಾರಾಂತವಾಗುವದರಿಂದ ಅವುಗಳನ್ನು ತಿಳಿ ಯಲು ಸುಲಭಮಾಡಲು ಬೇರೆ ಗುಂಪು ಮಾಡಲಾಗಿದೆ.

ಏ ಕಾರಾಂತ ಧಾತು करे (ಮಾಡು)

| | | |
|---|---|---|
| ಉತ್ತಮ ಪುರುಷ. | करेमि | करेमो |
| ಮಧ್ಯಮ ಪುರುಷ. | करेसि | करेह |
| ತೃತೀಯ ಪುರುಷ. | करेइ | करेन्ति |

(೧) ಸಂಸ್ಕೃತದಲ್ಲಿಯ ೧೦ ನೆಯ ಗಣದ ಕೆಲವು ಧಾತುಗಳು.

ताडे — ಹೊಡೆ. भक्खे — ತಿನ್ನು तड्डे — ಹಾರು, ಜಿಗಿ.
चोरे — ಕದ್ದುಗುವಮಾಡು. चिन्ते — ವಿಚಾರಮಾಡು दण्डे — ಶಿಕ್ಷಿಸು.
अच्चे — ಪೂಜಿಸು. वण्णे — ವರ್ಣಿಸು पूरे — ಪೂರ್ಣಗೊಳಿಸು.

(೨) ಪ್ರಯೋಜಕ (ಪ್ರೇರಣಾರ್ಥಕ) ಧಾತುಗಳು. +

दण्डावे — ಶಿಕ್ಷೆಮಾಡಿಸು गावे — ಹಾಡಿಸು
लाहे — ದೊರಕಿಸಿಕೊಂಡು जाणावे — ತಿಳಿಸು
पाडे — ಬೀಳಿಸು मारे — ಸಾಯಿಸು (ಕೊಲ್ಲು)
नेयावे — ಒಯ್ಯಿಸು जीवावे — ಬದುಕಿಸು
दावे — ತೋರಿಸು नासे — ನಾಶಗೊಳಿಸು
ठावे — ಇಡಿಸು कारे — ಮಾಡಿಸು

(೩) ನಾಮ (ಸಾಧಿತ) ಧಾತುಗಳು

विवाहे — ಮದುವೆಯಾಗು ण्हाणे — ಸ್ನಾನಮಾಡು
सद्दावे — ಕರೆ निवेदे — ನಿವೇದಿಸು
पण्णावे — ಉಪದೇಶಿಸು निमन्त्रे — ಆಮಂತ್ರಿಸು
आहारे — ತಿನ್ನು कामे — ಇಚ್ಛಿಸು

ಈ ರೀತಿಯ ಧಾತುಗಳ ವಿಚಾರವು ತಿಳಿಯಲೆಂದು ಕೆಲವನ್ನು ಮೇಲೆ ಕೊಡಲಾಗಿದೆ. ಆದರೆ ಈ ತರದ ಧಾತುಗಳು ವಿಶೇಷವಾಗಿದ್ದು ಅವುಗಳನ್ನೆಲ್ಲ ಇಲ್ಲಿ ಕೊಡುವದು ಸಾಧ್ಯವಿಲ್ಲ.

---

+ ಪ್ರಯೋಜಕ ಮತ್ತು ನಾಮ ಧಾತುಗಳು ಸಿದ್ಧವಾಗುವ ರೀತಿಯನ್ನು ಬೇರೆ ಕಡೆಗೆ ಸ್ವತಂತ್ರವಾಗಿ ಹೇಳಿದೆ.

ಮೇಲೆ ಕೊಟ್ಟ ಧಾತುಗಳನ್ನು ಡಾ. ಘಾಟಗೆಯವರ Introduction to Ardhamagadhi; ಎಂಬ ಗ್ರಂಥದ ೨ ನೆಯ ಆವೃತ್ತಿಯ ೯೮ ನೆಯ ಪುಟದಿಂದ ತೆಗೆದುಕೊಂಡಿದೆ.

**೩ ನೆಯ ಗುಂಪಿನ ಧಾತುಗಳು :—**

**अ** ಕಾರಾಂತವಲ್ಲದ ಧಾತುಗಳಲ್ಲಿ (೧) **आ** ಕಾರಾಂತ (೨) **ए** ಕಾರಾಂತ (೩) **ओ** ಕಾರಾಂತ ಧಾತುಗಳು—ಎಂದು ಮೂರು ವರ್ಗ ಮಾಡಬಹುದು. **ओ** ಕಾರಾಂತದಲ್ಲಿ ಸಂಸ್ಕೃತದ **भू**—ದಿಂದ **हू** ಆಗಿ ನಡೆಯುವಾಗ **हो** ಎಂದಾಗುವ ಧಾತುವೇ ಮುಖ್ಯವಾಗಿರುವದು. ಈ ಎಲ್ಲ ಧಾತುಗಳಿಗೆ ಪ್ರತ್ಯಯಗಳನ್ನು ಹಚ್ಚುವಾಗ ಯಾವ ಬದಲಾವಣೆಗಳೂ ಆಗುವದಿಲ್ಲ. **आ** ಕಾರಾಂತ ಧಾತುಗಳಿಗೆ **अन्ति** ಪ್ರತ್ಯಯ ಹಚ್ಚುವಾಗ ಅದು **यन्ति** ಎಂದಾಗುವದು.

(೧) **आ** ಕಾರಾಂತ ಧಾತು **झिया**— ಧ್ಯಾನಮಾಡು -

**ವರ್ತಮಾನಕಾಲ**

| | ಏಕವಚನ | ಬಹುವಚನ |
|---|---|---|
| ಉತ್ತಮ ಪುರುಷ. | **झियामि** | **झियामो** |
| ಮಧ್ಯಮ ಪುರುಷ. | **झियासि** | **झियाह** |
| ತೃತೀಯ ಪುರುಷ. | **झियाइ** | **झियायन्ति (झियान्ति)** |

**उवट्ठा** ಈ ಧಾತುವಿನ ತೃತೀಯ ಪುರುಷ ಬಹುವಚನವು **उवट्ठन्ति** ಎಂದಾಗುವದು. **अन्ति** ಯಲ್ಲಿಯ **अ** ಕ್ಕೆ ಲೋಪವಾಗುವದು. **आ** ಕಾರಾಂತವಾದ ಎಲ್ಲ ಧಾತುಗಳೂ ಮೇಲಿನಂತೆ ನಡೆಯುವವು.

(೨) **ए** ಕಾರಾಂತ ಧಾತು—**दे**—ಕೊಡು.

**ವರ್ತಮಾನಕಾಲ**

| | ಏ. | ಬ. |
|---|---|---|
| ಉ. ಪು. | **देमि** | **देमो** |
| ಮ. ಪು. | **देसि** | **देह** |
| ತೃ. ಪು. | **देइ** | **देन्ति** |

(೩) **ओ** ಕಾರಾಂತ ಧಾತು—**हो**—ಇರು, ಆಗು.

**ವರ್ತಮಾನಕಾಲ**

| | ಏ. | ಬ. |
|---|---|---|
| ಉ. ಪು. | **होमि** | **होमो** |
| ಮ. ಪು. | **होसि** | **होह** |
| ತೃ. ಪು. | **होइ** | **होन्ति** |

* भू ಧಾತುವಿಗೆ भव>हव ಎಂದೂ ರೂಪವಾಗುವದು. ಇದು अ ಕಾರಾಂತ ಧಾತುಗಳಂತೆ ನಡೆಯುವದು.

### ಶಬ್ದಸಂಗ್ರಹ

| | | | |
|---|---|---|---|
| अच्छ | ಇರು | जुज्झ | ಯುದ್ಧಮಾಡು |
| आण | ತರು | झिया | ಧ್ಯಾನಮಾಡು |
| इच्छ | ಇಚ್ಛಿಸು | ठा | ಎದ್ದು ನಿಲ್ಲು |
| उड्ड | ಹಾರು | डह | ಸುಡು |
| उदे | ಮೂಡು | तुरिय | ಓಡು |
| उवास | ಸೇವಿಸು | दे | ಕೊಡು |
| ए | ಬರು | धर | ಹಿಡಿ |
| कर करे | ಮಾಡು | नस्स | ನಾಶವಾಗು |
| कह | ಹೇಳು | निमज्ज | ಮುಳುಗು |
| का | ಮಾಡು | निसुण | ಕೇಳು |
| कील | ಆಡು | नी | ಒಯ್ಯು |
| कुण | ಮಾಡು | पक्खाल | ತೊಳೆದುಕೊಳ್ಳು |
| खम | ಕ್ಷಮಿಸು | पडिक्कम | ತಿರುಗಿಬರು |
| खाय | ತಿನ್ನು | पविस | ಪ್ರವೇಶಿಸು |
| गण | ಎಣಿಸು | पा | ಕುಡಿ |
| गम(गच्छ) | ಹೋಗು | पाउब्भव | ಹುಟ್ಟು, ಮೂಡು |
| गरिह | ನಿಂದಿಸು | पाले | ಪಾಲಿಸು |
| गा | ಹಾಡು | पाव | ಹೊಂದು |
| गेण्ह | ತೆಗೆದುಕೊಳ್ಳು | पास | ನೋಡು |
| चय | ಬಿಡು | पुच्छ | ವಿಚಾರಿಸು, ಕೇಳು |
| चिन्त | ಚಿಂತಿಸು | पूय | ಪೂಜಿಸು |
| छिन्द | ಹರಿ | पेक्ख | ನೋಡು |
| जय | ಯಜ್ಞಮಾಡು | फुस | ಮುಟ್ಟು, ಸ್ಪರ್ಶಿಸು |
| जुंज | ಹೂಡು | बंध | ಕಟ್ಟು, |

| | | | |
|---|---|---|---|
| बे | ಅನ್ನು | | ವಂದಿಸು |
| भक्ख | ತಿನ್ನು | वय | ಮಾತಾಡು |
| भण | ಅನ್ನು | वरिस | ಮಳೆಯಾಗು |
| भास | ಮಾತಾಡು | वस | ಇರು |
| मन्न | ತಿಳಿ, ವಿಚಾರಿಸು | वह | (ಭಾರ) ಹೊರು |
| मुंच | ಬಿಡು, ಒಗೆ | वा | ಬೀಸು, ಬಾರಿಸು |
| रक्ख | ರಕ್ಷಿಸು | साह | ಹೇಳು |
| रोह | ಏರು, ಬೆಳೆ | सिंच | ಸಿಂಪಡಿಸು |
| लज्ज | ನಾಚಿಕೆಪಡು | सुण | ಕೇಳು |
| लह | ಸಿಗು, ದೊರಕಿಸು | सोह | ಶೋಭಿಸು |
| लिंप | ಲೇಪಿಸು | हण | ಕೊಲ್ಲು |
| लुण | ಹರಿ | | ತಿರುಗು |
| लोव | ಲೋಪವಾಗು | | |

**ಅಭ್ಯಾಸ.**

(೧) ರೂಪಗಳನ್ನು ಗುರುತಿಸಿರಿ:—

हिंडइ, रोहसि, लुणामि, इच्छन्ति, आणामो, झियायइ, पविसामि, पालेह, बेसि, भक्खइ.

(೨) ರೂಪಗಳನ್ನು ಕೊಡಿರಿ. (ವರ್ತಮಾನಕಾಲ)

ಉತ್ತಮ ಪುರುಷ ಏಕವಚನ — अस, खाय, ए.

ದ್ವಿತೀಯ ಪುರುಷ ಏಕವಚನ दे, हो, गेण्ह.

ತೃತೀಯ ಪುರುಷ ಬಹುವಚನ पा, ने, डह, उड्ड.

**ಭಾಷಾಂತರ.**

(೧) ಕನ್ನಡದಲ್ಲಿ ಭಾಷಾಂತರಿಸಿರಿ:—

(१) कुणामि (२) पविसन्ति (३) पालेइ (४) भणह (५) भक्खसि (६) गायन्ति (७) कहइ (८) फुससि (९) बंधामि (१०) देह (११) एइ (१२) उवट्ठामो (१३) कीलन्ति (१४) अच्छामि (१५) छिन्दइ (१६) पावसि (१७) मुंचन्ति (१८) भासामो (१९) पाउब्भवन्ति (२०) पूयामो.

(೨) ಅರ್ಧಮಾಗಧಿಯಲ್ಲಿ ಭಾಷಾಂತರಿಸಿರಿ. :—

(೧) [ನಾನು] ಓದುತ್ತೇನೆ. (೨) [ಅವನು] ಆಡುತ್ತಾನೆ. (೩) [ನೀನು] ಹೋಗುತ್ತೀ. (೪) [ಅವಳು] ಎಣಿಸುತ್ತಾಳೆ. (೫) [ನಾನು] ತೆಗೆದುಕೊಳ್ಳುತ್ತೇನೆ. (೬) [ನೀವು] ಕೇಳುತ್ತೀರಿ. (೭) [ನಾವು] ವಿಹಾರಮಾಡುತ್ತೇವೆ. (೮) [ನೀನು] ಯುದ್ಧಮಾಡುತ್ತೀ. (೯) [ಅವನು] ನಿಂದಿಸುತ್ತಾನೆ. (೧೦) [ಅವಳು] ನಾಚುತ್ತಾಳೆ. (೧೧) [ನೀನು] ಹೇಳುತ್ತೀ. (೧೨) [ನಾವು] ತೆಗೆದುಕೊಳ್ಳುತ್ತೇವೆ. (೧೩) [ಅವರು] ಕ್ಷಮಿಸುತ್ತಾರೆ. (೧೪) [ನೀವು] ರಕ್ಷಿಸುತ್ತೀರಿ. (೧೫) [ಅವರು] ಇಚ್ಛಿಸುತ್ತಾರೆ. (೧೬) [ನಾವು] ಬಿಡುತ್ತೇವೆ. (೧೭) [ನೀನು] ಮುಟ್ಟುತ್ತೀ. (೧೮) [ನಾನು] ನಮಸ್ಕರಿಸುತ್ತೇನೆ. (೧೯) [ಅವರು] ಆಡುತ್ತಾರೆ. (೨೦) [ನೀವು] ಮಾತಾಡುತ್ತೀರಿ. (೨೧) [ನಾನು] ತಿರುಗುತ್ತೇನೆ.

## ಪಾಠ ೨

### ಅ ಕಾರಾಂತ ನಾಮಗಳು.

ಅ ಕಾರಾಂತ ನಾಮಗಳು ಪುಲ್ಲಿಂಗ ಮತ್ತು ನಪುಂಸಕಲಿಂಗಗಳಲ್ಲಿ ಮಾತ್ರ ಇರುವವು. ಎಲ್ಲ ಲಿಂಗಗಳಲ್ಲಿಯೂ ಕೆಲವು ವಿಭಕ್ತಿ ಪ್ರತ್ಯಯಗಳು ಸಾಧಾರಣವಾಗಿ ಒಂದೇಯಾಗಿರುವವು. ಪುಲ್ಲಿಂಗ ನಪುಂಸಕ ಲಿಂಗಗಳಲ್ಲಿ ತೃತೀಯೆಯಿಂದ ಮುಂದಿನ ಎಲ್ಲ ಪ್ರತ್ಯಯಗಳು ಒಂದೇಯಾಗಿರುವವು. ಎಲ್ಲ ಪ್ರತ್ಯಯಗಳೂ ಸಂಸ್ಕೃತದಿಂದಲೇ ಬಂದವುಗಳು. ಅವು ಹೇಗೆ ಮಾರ್ಪಾಟು ಹೊಂದಿದವು ಎಂಬುದನ್ನು ವಿಚಾರಿಸುವ ಅವಶ್ಯಕತೆಯಿಲ್ಲ.

**ವಿಭಕ್ತಿ ಪ್ರತ್ಯಯಗಳು.**

ಸಾಮಾನ್ಯವಾಗಿ ವಿಭಕ್ತಿ ಪ್ರತ್ಯಯಗಳು ಯಾವವೆಂಬುದನ್ನು ಕೆಳಗೆ ಕೊಟ್ಟಿದೆ. ಅವುಗಳನ್ನು ಹಚ್ಚುವಾಗ ಆಗುವ ವ್ಯತ್ಯಾಸಗಳನ್ನು ಮುಂದೆ ನೋಡಬಹುದು.

| | ಪುಲ್ಲಿಂಗ | | ನಪುಂಸಕಲಿಂಗ | |
|---|---|---|---|---|
| | ಏಕವಚನ | ಬಹುವಚನ | ಏಕವಚನ | ಬಹುವಚನ |
| ಪ್ರಥಮಾ | ओ. ए | आ | ं (म्) | आइं. आणि |
| ದ್ವಿತೀಯಾ | ं (म्) | ए. आ | ं (म्) | ,, ,, |
| ತೃತೀಯಾ | ण-णं | हि-हिं | ण -णं | हि-हिं |
| ಪಂಚಮೀ | ओ, आ | हिंतो | आ, ओ | हिंतो |
| ಷಷ್ಠೀ | स्स | ण-णं | स्स | ण-णं |
| ಸಪ್ತಮೀ | ए सि, म्मि | सु-सुं | ए, अंसि, म्मि | सु सुं |
| ಸಂಬೋಧನ | ०, ओ | आ | ं म् | आइं, आणि |

ಪ್ರಥಮಾದಲ್ಲಿ ए,ओ ಪ್ರತ್ಯಯಗಳು ಹತ್ತುವಾಗ ಪರರೂಪಸಂಧಿಯಾಗುವದು. (ಹಿಂದಿನ अ ಲೋಪವಾಗುವದು) नर + ए = नरे; नर + ओ = नरो. ದ್ವಿತೀಯಾ ಬಹುವಚನದ ಮತ್ತು ಸಪ್ತಮಿ ಏಕವಚನದ ए ಮತ್ತು ಸಂಬೋಧನ ಏಕವಚನ *ओ ಇದೇ ರೀತಿಯಾಗಿ ಹತ್ತುವವು

ತೃತೀಯಾ ಎರಡೂ ವಚನಗಳ, ಷಷ್ಠೀ ಮತ್ತು ಸಪ್ತಮೀ ಬಹುವಚನಗಳ ಪ್ರತ್ಯಯಗಳ ಮೇಲೆ ವಿಕಲ್ಪದಿಂದ ಅನುಸ್ವಾರವು ಬರುವದು. ತೃತೀಯಾವಿಭಕ್ತಿ ಎರಡೂ ವಚನಗಳಲ್ಲಿ ಮತ್ತು ಪಂಚಮೀ ಸಪ್ತಮೀ ಬಹುವಚನಗಳಲ್ಲಿ ए ಕಾರಾಂತವೂ ಷಷ್ಠೀ ಬಹುವಚನದಲ್ಲಿ आ ಕಾರಾಂತವೂ ಆಗುವದು. ಸಂಸ್ಕೃತ ರೂಪದಲ್ಲಿಯ ವಿಭಕ್ತಿ ಪ್ರತ್ಯಯವನ್ನು ತೆಗೆದು ಹಾಕಲು ಉಳಿಯುವ ರೂಪಕ್ಕೆಯೆ ಅರ್ಧಮಾಗಧೀ ವಿಭಕ್ತಿಪ್ರತ್ಯಯವನ್ನು ಜೋಡಿಸಿದಂತಾಗುವದು.

ಉದಾ—देवेन> देवे+ण> देवेग (ತ. ಏ.)

देवानाम्> देवा + ण> देवाण (ಷ. ಬ.)

ನಪುಂಸಕಲಿಂಗದಲ್ಲಿಯೂ ಪ್ರತ್ಯಯಗಳನ್ನು ಹಚ್ಚುವಾಗ ಇದೇ ರೀತಿಯನ್ನನುಸರಿಸಲಾಗುವದು.

* ಡಾ. ಘಾಟಗೆಯವರು ಈ ಪ್ರತ್ಯಯ ಹೇಳಿಲ್ಲ. ಡಾ. ಪ. ಲ. ವೈದ್ಯರು ಹೇಳಿರುವರು.

(೧) अ ಕಾರಾಂತ ಪುಲ್ಲಿಂಗ **नर** [ಮನುಷ್ಯ) *

| | ಏ. | ಬ. |
|---|---|---|
| ಪ್ರ. | **नरो, नरे** | **नरा** |
| ದ್ವಿ. | **नरं** | **नरे, नरा** |
| ತೃ. | **नरेण, नरेणं** | **नरेहि,–नरेहिं** |
| ಪಂ. | **नराओ, नरा** | **नरेहिन्तो** |
| ಷ. | **नरस्स** | **नराण–नराणं** |
| ಸ. | **नरे, नरंसि, नरम्मि** | **नरेसु–नरेसुं** |
| ಸಂ. | **नर, नरो** | **नरा** |

(೨) अ ಕಾರಾಂತ ನಪುಸಕಲಿಂಗ **कम्म** [ಕರ್ಮ]

| | | |
|---|---|---|
| ಪ್ರ. | **कम्मं** | **कम्माइं, कम्माणि** |
| ದ್ವಿ. | **कम्मं** | **कम्माइं, कम्माणि** |
| ತೃ. | **कम्मेण, कम्मेणं** | **कम्मेहि, कम्मेहिं** |
| ಪಂ. | **कम्माओ, कम्मा** | **कम्मेहिंतो** |
| ಷ. | **कमस्स** | **कम्माण, कम्माणं** |
| ಸ. | **कम्मे, कम्मंसि, कम्मम्मि** | **कम्मेसु- कम्मेसुं** |
| ಸಂ. | **कम्मं** | **कम्माइं–कम्माणि** |

* ಮೂಲ ಶಬ್ದದಲ್ಲಿ ಒಂದು ವ್ಯಂಜನವು ಲೋಪವಾಗಿ **यश्रुति** ಯ ನಿಯಮವು ಹತ್ತಿದ್ದರೆ ಅದರ ರೂಪಗಳು ಸ್ವಲ್ಪ ಬೇರೆಯಾಗುವವು. ಯಾಕಂದರೆ **य, या** ಗಳ ಹೊರತಾಗಿ ಉಳಿದವುಗಳು (**यि, यी** ಮೊದಲಾದವು) ಬರುವದೇ ಇಲ್ಲ. ಅವುಗಳಿಗೆ ಬದಲಾಗಿ **इ, ई** ಮೊದಲಾದವು ಬರುವವು. **य** ದ ಬಳ್ಳಿಯೆಂದು ಹಿಂದೆ ಇವುಗಳನ್ನು ಹೇಳಿದೆ. ಅದ್ದರಿಂದ लोक>**लोय** ಶಬ್ದವನ್ನು ನಡೆಸುವಾಗ ಯಾವ ರೀತಿಯಾಗುವ ದೆಂಬದನ್ನು ನೋಡಬಹುದು.

**लोय (पु)**

| | | |
|---|---|---|
| ಪ್ರ. | **लोओ, लोए** | **लोया** |
| ದ್ವಿ. | **लोयं** | **लोए, लोया** |
| ತೃ. | **लोएण, लोएणं** | **लोएहि–लोएहिं** |
| ಪಂ. | **लोयाओ–लोया** | **लोएहिन्तो** |
| ಷ. | **लोयस्स** | **लोयाण–लोयणं** |
| ಸ. | **लोए, लोयंसि, लोयमि** | **लोएसु–लोएसु** |
| ಸಂ. | **लोय, लोओ** | **लोया.** |

ಕರ್ತರಿ ಪ್ರಯೋಗದಲ್ಲಿ ಕರ್ತೃವು ಪಥಮಾವಿಭಕ್ತಿಯಲ್ಲಿದ್ದು ಕ್ರಿಯಾ ಪದವು ಕರ್ತೃವನ್ನನುಸರಿಸುವದು. ಕರ್ತೃವಿನ ಲಿಂಗಭೇದದಂತೆ ಕ್ರಿಯಾಪದ ರೂಪವು ಬದಲಾಗುವದಿಲ್ಲವೆಂಬದನ್ನು ಹಿಂದೆ ಹೇಳಿದೆ. ಸಕರ್ಮಕ ಕ್ರಿಯಾ ಪದವಿದ್ದರೆ ಕರ್ಮವು ದ್ವಿತೀಯಾ ವಿಭಕ್ತಿಯಲ್ಲಿರುವದು.

ಉದಾ :— ಹುಡುಗನು ಹೋಗುತ್ತಾನೆ. पुत्ते गच्छइ ।
ನೀರು ಬೀಳುತ್ತದೆ. जलं वरिसइ ।
ಸೇವಕನು ಭಾರವನ್ನು ಒಯ್ಯುತ್ತಾನೆ. चेडो भारं आणाइ ।
ಸಾಧುವು ಹಣ್ಣುಗಳನ್ನು ತಿನ್ನುತ್ತಾನೆ. समणो फलाइं भक्खइ ।

**ಶಬ್ದಸಂಗ್ರಹ**

**अणगार** (ಪು.) ಮನೆಯಿಲ್ಲದ ಸಾಧು
**अभिसेय** (ಪು.) ಅಭಿಷೇಕ
**अवराह** (ಪು.) ಅಪರಾಧ
**असच्च** (ನ.) ಸುಳ್ಳು
**आइच्च** (ಪು.) ಸೂರ್ಯ
**आयरिय** (ಪು.) ಆಚಾರ್ಯ, ಶಿಕ್ಷಕ
**आलस्स** (ನ.) ಆಲಸ್ಯ
**उज्जाण** (ನ.) ಉದ್ಯಾನ, ತೋಟ
**कमल** (ನ.) ಕಮಲ
**कुमार** (ಪು.) ಹುಡುಗ
**कोह** (ಪು.) ಕ್ರೋಧ, ಸಿಟ್ಟು
**गाम** (ನ.) ಗ್ರಾಮ, ಹಳ್ಳಿ
**गुण** (ಪು.) ಗುಣ
**च, य** (ಅ.) ಮತ್ತು
**चेड** (ಪು.) ಸೇವಕ
**जल** (ನ.) ನೀರು
**झय** (ಪು.) ಧ್ವಜ
**तलाय** (ನ.) ಕೆರೆ
**देवउल** (ನ.) ದೇವಾಲಯ
**धण** (ನ.) ಧನ
**धम्म** (ಪು.) ಧರ್ಮ
**न** (ಅ.) ಇಲ್ಲ
**नयर** (ನ.) ನಗರ
**नर** (ಪು.) ಮನುಷ್ಯ
**नरिन्द** (ಪು.) ರಾಜ
**निव** (ಪು.) ನೃಪ, ರಾಜ
**पाय** (ಪು.) ಪಾದ
**पावयण** (ಪು.) ಪ್ರವಚನ
**पुत्त** (ಪು.) ಪುತ್ರ, ಮಗ
**पुप्फ** (ನ.) ಪುಷ್ಪ, ಹೂ
**फल** (ನ.) ಫಲ, ಹಣ್ಣು
**बल** (ನ.) ಬಲ, ಶಕ್ತಿ
**भय** (ನ.) ಅಂಜಿಕೆ
**भार** (ಪು.) ಭಾರ, ಹೊರೆ
**भूसण** (ನ.) ಭೂಷಣ, ಅಲಂಕಾರ
**मित्त** (ಪು. ನ.) ಮಿತ್ರ, ಸೂರ್ಯ
**मुह** (ನ.) ಮುಖ
**मेह** (ಪು.) ಮೇಘ, ಮೋಡ

रह (ಪು.) ರಥ
रज्ज (ನ.) ರಾಜ್ಯ
लोग (ಪು.) ಲೋಕ
लोह (ಪು.) ಲೋಭ
वग्घ (ಪು.) ವ್ಯಾಘ್ರ, ಹುಲಿ
वण (ನ.) ವನ, ಅರಣ್ಯ
वराह (ಪು.) ಹಂದಿ
समण (ಪು.) ಶ್ರಮಣ, ಸಾಧು
सच्च (ನ.) ಸತ್ಯ
सियाल (ಪು.) ಶೃಗಾಲ, ನರಿ
सील (ನ.) ಶೀಲ
सीस (ಪು.) ಶಿಷ್ಯ
सुवण्ण (ನ.) ಸುವರ್ಣ, ಬಂಗಾರ
हत्थ (ಪು.) ಹಸ್ತ, ಕೈ
हास (ನ.) ಹಾಸ್ಯ.

ಅಭ್ಯಾಸ:—

(೧) ರೂಪಗಳನ್ನು ಗುರುತಿಸಿರಿ :—

अत्थि, वाणराणं, आयरिय, अच्छन्ति, झया, नयराणि, हणह, फलाइं, नरिन्दस्स, मेहेहिन्तो, लोयंसि, इच्छामो, अभिसेयं, हत्थेहि, सि, वरिससि सियालेण, वयइ, समणाओ, लोहेण.

(೨) ರೂಪಗಳನ್ನು ಕೊಡಿರಿ.

(i) ತೃತೀಯಾ ಏಕವಚನ— आइच्च, हत्थ, बल, आयरिय.
(ii) ಸಪ್ತಮೀ ಏಕವಚನ— वाणर, कमल, नरिन्द, रज्ज.
(iii) ಷಷ್ಠೀ ಬಹುವಚನ— वग्घ, देवउल, मुह, अवराह.
(iv) ದ್ವಿತೀಯಾ ಬಹುವಚನ— वराह, सियाल, निव, सुवण्ण.
(v) ವ. ಕಾ. ಉ. ಪು. ಬಹು. चिन्त, गेण्ह, अच्छ, अस, जय.

ಕನ್ನಡಕ್ಕೆ ಪರಿವರ್ತಿಸಿರಿ :—

(१) सीलं नरस्स भूसणं अत्थि। (२) जिणो धम्मं भासइ। (३) आयारिया अवराहा गरिहन्ति। (४) आयरियस्स पावयणं सुणामि। (५) नरिन्दो गामं पविसइ। (६) कुमारा उज्जाणाओ फलाणि आणन्ति, खायन्ति य। (७) सीसो आइच्चं वन्दइ। (८) चेडो जलं आणेइ। (९) समणो लोगं मुंचइ। (१०) कुमारो झयं डहइ। (११) नरा गामंसि वसन्ति। (१२) वग्घो सियालं हणइ। (१३) मेहा जलं वरिसन्ति। (१४) निवा अभिसेयं इच्छन्ति। (१५) समणा कोहं डहन्ति। (१६) अवराहं खमह। (१७) निवस्स पुत्तो उज्जाणं गच्छइ। (१८) वराहा गामे अच्छन्ति। (१९) हत्थे य पाए य पक्खालेमो। (२०) अणगारो कोहेण, हासेण, लोहेण, भएण, असच्चं न वयइ।

**ಅರ್ಧಮಾಗಧಿಗೆ ಪರಿವರ್ತಿಸಿರಿ.**

(೧) ಹುಡುಗನು ಗುರುವಿಗೆ ಧರ್ಮವನ್ನು ವಿಚಾರಿಸುತ್ತಾನೆ. (೨) ಸನ್ಯಾಸಿಗಳು ದೇವಾಲಯಕ್ಕೆ ಹೋಗುತ್ತಾರೆ ಮತ್ತು ದೇವರಿಗೆ ನಮಸ್ಕರಿಸುತ್ತಾರೆ. (೩) ಸೂರ್ಯನು ಆಲಸ್ಯ ಮಾಡುವದಿಲ್ಲ. (೪) ಜನರು ಅಪರಾಧ ಮಾಡುತ್ತಾರೆ. (೫) ಆಚಾರ್ಯರು ಧರ್ಮವನ್ನು ಹೇಳುತ್ತಾರೆ. (೬) ಹುಡುಗರು ತೋಟದಿಂದ ಹೂ ಮತ್ತು ಹಣ್ಣುಗಳನ್ನು ತರುತ್ತಾರೆ. (೭) ಸೇವಕರು ನೀರನ್ನು ತರುತ್ತಾರೆ. [ಇಹ] (೮) ಸಾಧುಗಳು ಸತ್ಯಮಾತಾಡುತ್ತಾರೆ. (೯) ರಾಜನು ಬಂಗಾರವನ್ನು ತರುತ್ತಾನೆ. (೧೦) ದೇವಾಲಯದ ಮೇಲೆ ಧ್ವಜವು ಅದೆ. (೧೧) ನಾನು ಊರಿಗೆ ಹೋಗುತ್ತೇನೆ. (೧೨) ಗಿಡಕ್ಕೆ ಹೂ ಮತ್ತು ಹಣ್ಣುಗಳು ಇರುತ್ತವೆ. (೧೩) ಕಮಲವು ಕೆರೆಯಲ್ಲಿ ಹುಟ್ಟುತ್ತದೆ. (೧೪) ಅರಸನ ಮಗನು ಪಟ್ಟಣವನ್ನು ಪ್ರವೇಶಿಸುತ್ತಾನೆ. (೧೫) ಸಾಧುಗಳು ನಿಂದೆ ಮಾಡುವದಿಲ್ಲ. (೧೬) ಮಿತ್ರನು ಸುಳ್ಳಾಡುತ್ತಾನೆ. (೧೭) ಜನರು ಪ್ರವಚನವನ್ನು ಕೇಳುತ್ತಾರೆ. (೧೮) ಅರಸನು ಇಚ್ಛಿಸುತ್ತಾನೆ. (೧೯) ಸಾಧುಗಳು ಸಿಟ್ಟನ್ನು ಮತ್ತು ಲೋಭವನ್ನು ಗೆಲ್ಲುತಾರೆ. (೨೦) ಜನರು ಸಂಸಾರವನ್ನು ಬಿಡುವದಿಲ್ಲ; ಸಾಧುಗಳು ಬಿಡುತ್ತಾರೆ.

# ಪಾಠ. ೩

## ಆ ಕಾರಾಂತ ನಾಮಗಳು

**ಆ** ಕಾರಾಂತ ನಾಮಗಳು ಸಾಮಾನ್ಯವಾಗಿ ಸ್ತ್ರೀಲಿಂಗದವಿರುವವು. ಸ್ತ್ರೀಲಿಂಗದ ಪ್ರತ್ಯಯಗಳು ಸ್ವಲ್ಪ ಬೇರೆಯಾಗಿರುವವು. ಏಕವಚನದಲ್ಲಿ ತೃತೀಯಾ, ಪಂಚಮೀ, ಷಷ್ಠೀ, ಸಪ್ತಮಿ ಪ್ರತ್ಯಯಗಳು ಒಂದೇ ಯಾಗಿರುವವು. ಬಹುವಚನದಲ್ಲಿ ತೃತೀಯೆಯಿಂದು ಸಪ್ತಮಿ ವರೆಗೆ ಎಲ್ಲ ಪ್ರತ್ಯಯಗಳೂ ಪುಲ್ಲಿಂಗದಂತೆಯೆ ಇರುವವು. ಪ್ರಥಮಾ, ದ್ವಿತೀಯಾ, ಸಂಬೋಧನ ಪ್ರತ್ಯಯಗಳು ಬೇರೆಯಾಗಿರುವವು. ಪುಲ್ಲಿಂಗ ನಪುಂಸಕಲಿಂಗ ನಾಮಗಳಂತೆ ಸ್ತ್ರೀಲಿಂಗನಾಮಗಳಿಗೆ ಪ್ರತ್ಯಯಗಳನ್ನು ಹಚ್ಚುವಾಗ ಅವುಗಳ ಮೂಲ ರೂಪದಲ್ಲಿ ಬದಲಾಗುವದಿಲ್ಲ.

## ಸ್ತ್ರೀಲಿಂಗ-ವಿಭಕ್ತಿ ಪ್ರತ್ಯಯಗಳು.

| | ಏಕವಚನ | ಬಹುವಚನ |
|---|---|---|
| ಪ್ರ. | ० | ०, ओ |
| ದ್ವಿ. | ं (म्) | ०, ओ |
| ತೃ. | ए | हि, हिं |
| ಪಂ. | ए, ओ | हिन्तो |
| ಷ. | ए | ण-णं |
| ಸ. | ए | सु सुं |
| ಸಂ. | ०, ए | ०, ओ |

आ ಕಾರಾಂತವಾದ ಎಲ್ಲ ಸ್ತ್ರೀಲಿಂಗ ಶಬ್ದಗಳು ಕೆಳಗಿನಂತೆ ನಡೆಯುವವು.

ಆ ಕಾರಾಂತ ಸ್ತ್ರೀಲಿಂಗ देवया (ದೇವತಾ)

| | ಏಕವಚನ | ಬಹುವಚನ |
|---|---|---|
| ಪ್ರ. | देवया | देवया, देवयाओ |
| ದ್ವಿ. | देवयं | देवया, देवयाओ |
| ತೃ. | देवयाए | देवयाहि -देवयाहिं |
| ಪಂ. | देवयाए, देवयाओ | देवयाहिन्तो |
| ಷ. | देवयाए | देवयाण-देवयाणं |
| ಸ. | देवयाए | देवयासु-देवयासु |
| ಸಂ. | देवया, देवयाए | देवया, देवयाओ |

### ಶಬ್ದಸಂಗ್ರಹ

अज्झावय (ಪು.) ಅಧ್ಯಾಪಕ, ಶಿಕ್ಷಕ

अमय (ನ.) ಅಮೃತ

अलंकार (ಪು.) ಭೂಷಣ, ಅಲಂಕಾರ

इव (ಅ.) ಅಂತೆ, ಹಾಗೆ

कन्ना (ಸ್ತ್ರೀ.) ಕನ್ಯೆ, ಹುಡಿಗೆ

कलह (ಪು.) ಜಗಳ

कुसुम (ನ.) ಹೂ

गंगा (ಸ್ತ್ರೀ.) ಗಂಗೆ (ನದಿಯ ಹೆಸರು)

गोव (ಪು.) ಗೋಪಾಲಕ, ದನಗಾಹಿ

चन्द (ಪು.) ಚಂದ್ರ

चरिय (ನ.) ಚಾರಿತ್ರ್ಯ, ನಡತೆ

चिया (ಸ್ತ್ರೀ.) ಚಿತೆ, ಅಗ್ನಿ

चेइय (ನ.) ಜಿನಮಂದಿರ

छत्त (ನ.) ಛತ್ರಿ, ಕೊಡೆ

छाया (ಸ್ತ್ರೀ.) ನೆರಳು

जण (ಪು.) ಜನ

**जिण** (ಪು.) ತೀರ್ಥಂಕರ
**जउणा** (ಸ್ತ್ರೀ.) ಯಮುನೆ.
**जणय** (ಪು.) ತಂದೆ, ಜನಕರಾ
**तीर** (ಪು.) ದಂಡೆ
**थल** (ನ.) ಸ್ಥಲ, ಭೂಮಿ
**दया** (ಸ್ತ್ರೀ.) ದಯೆ
**दानव** (ಪು.) ರಾಕ್ಷಸ
**दीव** (ಪು.) ದೀಪ
**देवया** (ಸ್ತ್ರೀ.) ದೇವತೆ
**नह** (ನ.) ಆಕಾಶ
**नावा** (ಸ್ತ್ರೀ.) ನಾವೆ, ಹಡಗ
**निसा** (ಸ್ತ್ರೀ) ರಾತ್ರಿ
**पउम, पोम** (ಪು.) ಕಮಲ, ರಾಮ ಚಂದ್ರನ ಹೆಸರು
**पइव्वया** (ಸ್ತ್ರೀ.) ಪತಿವ್ರತೆ
**पण्णा** (ಸ್ತ್ರೀ.) ಪ್ರಜ್ಞೆ, ಬುದ್ಧಿ
**पया** (ಸ್ತ್ರೀ.) ಪ್ರಜೆ
**पुण्ण** (ನ.) ಪುಣ್ಯ
**पुव्विं** (ಅ.) ಮೊದಲು
**पुरोहिय** (ಪು.) ಪುರೋಹಿತ
**बाहिं** (ಅ.) ಹೊರಗೆ
**मिय** (ಪು.) ಮೃಗ, ಜಿಗರೆ
**मूल** (ನ.) ಮೂಲ, ಬೇರು
**रह** (ಪು.) ರಥ
**रुक्ख** (ಪು.) ಗಿಡ
**रूव** (ನ.) ರೂಪ, ಸೌಂದರ್ಯ
**रेहा** (ಸ್ತ್ರೀ.) ರೇಖೆ, ಗೆರೆ
**लया** (ಸ್ತ್ರೀ.) ಲತೆ, ಬಳ್ಳಿ
**ललणा** (ಸ್ತ್ರೀ) ಹೆಂಗಸು
**लायण्ण** (ನ.) ಲಾವಣ್ಯ, ಸೌಂದರ್ಯ
**वर** (ಪು.) ವರ, ಮದುಮಗ, ಗಂಡ
**वाया** (ಸ್ತ್ರೀ.) ಮಾತು
**विज्जा** (ಸ್ತ್ರೀ.) ವಿದ್ಯೆ
**विहग** (ಪು.) ಪಕ್ಷಿ
**वीर** (ಪು.) ವೀರ, ಸೈನಿಕ
**सउण** (ಪು.) ಹಕ್ಕಿ
**सरिया** (ಸ್ತ್ರೀ.) ನದಿ
**साला** (ಸ್ತ್ರೀ.) ಶಾಲೆ, ಮನೆ
**साहा** (ಸ್ತ್ರೀ.) ಶಾಖೆ, ಟೊಂಗೆ
**सीया** (ಸ್ತ್ರೀ.) ಸೀತೆ
**सेणा** (ಸ್ತ್ರೀ.) ಸೇನೆ
**हिंसा** (ಸ್ತ್ರೀ.) ಹಿಂಸೆ

**ಅಭ್ಯಾಸ.**

(೧) ಕೆಳಗಿನ ರೂಪಗಳನ್ನು ಗುರುತಿಸಿರಿ :—

**रेहाओ, करेन्ति, निसासु, पइव्वयाए, जुज्झइ, रुक्खाणं, लयाहिन्तो, सरियाहिं, उज्जाणेसु, पालेइ, गंगं, विहगा, करेसि, कन्नाओ, कीलइ, चेइयं, वहामि, अज्झावयस्स, वायाए, पेक्खन्ति.**

(೨) ರೂಪಗಳನ್ನು ಕೊಡಿರಿ :—

ಪಂಚಮೀ ಏಕವಚನ— **ललणा, रूव, विज्जा, चन्द.**

ದ್ವಿತೀಯಾ ಬಹುಚನ— सेणा, लया, मूल, भार·
ತೃತೀಯಾ ಬಹುವಚನ— गोवा, जउणा, चिया, छाया·
ವರ್ತಮಾನಕಾಲ ದ್ವಿ. ಪು. ಬ. ವ. जुज्झ, मन्न, पेक्ख, वय·
,, ತೃತೀಯಾ ಪುರುಷ ಏ. ವ. निसुण, पाले; गण, करे·

**ಕನ್ನಡಕ್ಕೆ ಭಾಷಾಂತರಿಸಿರಿ:—**

(१) गंगाए तीरेसु लयाओ रोहन्ति। (२) निवो पयं पालेइ। (३) कुमारा अज्झावयस्स पावयणं निसुणेन्ति। (४) नरिन्दस्स बाला सरियं गच्छइ फुप्फाणि आणेइ य। (५) मिया रुक्खस्स छायाए वसन्ति। (६) ललणा गगांए जलंसि ण्हाणेन्ति। (७) जिणो पण्णाए धम्मं पेक्खइ, वायाए भासइ। (८) लयासु कुसुमाणि न सन्ति। (९) गोवा जउणाए तीरेसु कीलन्ति। (१०) कन्नाओ पुप्फेहिं देवयं पूयन्ति। (११) चेडा निसासु भरं वहन्ति (१२) विज्जा विणएण सोहइ। (१३) कुमारा कलहं न करेन्नि। (१४) कन्ना लयाए पुप्फाइं गेण्हन्ति, चेइयं गच्छान्ति देवयं पूयन्ति य। (१५) निवो उज्जाणे गच्छइ, लयाओ पासइ। (१६) पइव्वया ललणा वरं देवं इव मन्नन्ति। (१७) दया धम्मस्स मूलं अत्थि। (१८) पउमो जणयस्स कन्नाए रूवं, चरियं य, पासइ। (१९) निसाए चन्दो पाउब्भवइ। (२०) वीरा सेणाए मुहे जुज्झन्ति।

**ಅರ್ಧಮಾಗಧಿಗೆ ಭಾಷಾಂತರಿಸಿರಿ:—**

(೧) ಹಕ್ಕಿಗಳು ಗಿಡಗಳ ಟೊಂಗೆಗಳ ಮೇಲೆ ವಾಸಿಸುತ್ತವೆ. (೨) ರಾಜಕನ್ಯೆಯರು ತೋಟದೊಳಗೆ ಹೋಗುತ್ತಾರೆ ಮತ್ತು ಹೂಗಳನ್ನು ತರುತ್ತಾರೆ. (೩) ದೇವತೆಗಳು ಅಮೃತವನ್ನು ತರುತ್ತಾರೆ. (೪) ಮನುಷ್ಯನು ಹಿಂಸೆಯನ್ನು ಮಾಡುತ್ತಾನೆ. (೫) ವೀರನು ಛತ್ರ ಹಿಡಿಯುತ್ತಾನೆ. (೬) ಸೀತೆಯು ತೋಟದಲ್ಲಿ ಇರುತ್ತಾಳೆ. (೭) ದೇವರ ಪೂಜೆಯಿಂದ ಪುಣ್ಯವು ದೊರಕುತ್ತದೆ. (೮) ಚಿತೆಯು ಶರೀರವನ್ನು ಸುಡುತ್ತದೆ. (೯) ರಾಜನು ಪ್ರಜೆಗಳನ್ನು ರಕ್ಷಿಸುತ್ತಾನೆ. (೧೦) ದೇವತೆಗಳೂ ರಾಕ್ಷಸರೂ ಯುದ್ಧ ಮಾಡುತ್ತಾರೆ. (೧೧) ಬಾಲಿಕೆಯರು ಶಾಲೆಗೆ ಹೋಗುತ್ತಾರೆ ಮತ್ತು ಆಡುತ್ತಾರೆ. (೧೨) ರಥದ ಮೇಲೆ ಧ್ವಜವು ಇರುತ್ತದೆ. (೧೩) ಪುರೋಹಿತರು ಪ್ರವಚನ ಹೇಳುತ್ತಾರೆ. (೧೪) ಹಕ್ಕಿಗಳು ಆಕಾಶದಲ್ಲಿ ಹಾರುತ್ತವೆ. (೧೫) ಸೇವಕನು ಗಿಡದ ನೆರಳಲ್ಲಿ ಕೂಡ್ರುತ್ತಾನೆ. (೧೬) ಗಿಡದಿಂದ ಹಣ್ಣು ಬೀಳುತ್ತದೆ.

(೧೭) ಸಾಧ್ವಿಯರು ದೇವಾಲಯದಲ್ಲಿ ಹೋಗುತ್ತಾರೆ ಮತ್ತು ಪೂಜೆ ಮಾಡುತ್ತಾರೆ. (೧೮) ರಾಜನ ರಥದ ಮೇಲೆ ಛತ್ರವದೆ. (೧೯) ವಿದ್ಯಾರ್ಥಿಗಳು ಗುರುಗಳ ಮಾತನ್ನು ಕೇಳುತ್ತಾರೆ ಮತ್ತು ಜಗಳಾಡುವದಿಲ್ಲ. (೨೦) ಪುರೋಹಿತನ ಕನ್ಯೆಯರು ನದಿಯ ದಂಡೆಯ ಮೇಲೆ ಹುಲಿಯನ್ನು ನೋಡುತ್ತಾರೆ ಮತ್ತು ಓಡಿ ಹೋಗುತ್ತಾರೆ.

---

# ಪಾಠ ೪

## ಇ ಕಾರಾಂತ ಮತ್ತು ಈ ಕಾರಾಂತ ನಾಮಗಳು

ಅರ್ಧಮಾಗಧಿಯಲ್ಲಿ ಹ್ರಸ್ವ ಇ ಕಾರಾಂತ ಮತ್ತು ಹ್ರಸ್ವ ಉ ಕಾರಾಂತ ನಾಮಗಳು ಪುಲ್ಲಿಂಗ ಮತ್ತು ನಪುಂಸಕ ಲಿಂಗಗಳಲ್ಲಿಯೂ ಇರುವವು. ದೀರ್ಘ ಈ ಕಾರಾಂತ ಅಥವಾ ದೀರ್ಘ ಊ ಕಾರಾಂತ ನಾಮಗಳು ಸ್ತ್ರೀಲಿಂಗದಲ್ಲಿ ಮಾತ್ರ ಇರುವವು. ಈ ಎಲ್ಲ ನಾಮಗಳೂ ಸಾಮಾನ್ಯವಾಗಿ ಅ ಕಾರಾಂತ ನಾಮಗಳಂತೆಯೆ ನಡೆಯುವವು. ಪ್ರತ್ಯಯಗಳೂ ಸಾಧಾರಣವಾಗಿ ಅವೇ ಇರುವವು. ಪ್ರಥಮಾ, ದ್ವಿತೀಯಾ ಮತ್ತು ಸಂಬೋಧನ ಇವುಗಳ ಬಹುವಚನಗಳಲ್ಲಿಯೂ, ತೃತೀಯಾ ಮತ್ತು ಪಂಚಮೀ ಇವುಗಳ ಏಕವಚನದಲ್ಲಿಯೂ ಸ್ವಲ್ಪ ಅಂತರವಾಗುವದು. ಮೂಲ ನಾಮವು ಹ್ರಸ್ವಾಂತವಿದ್ದರೂ ಪ್ರಥಮಾ ಏಕವಚನವು ದೀರ್ಘಾಂತವಾಗಿರುವದು.

ಈ ನಾಮಗಳನ್ನು ನಡೆಸುವಾಗ ಹ್ರಸ್ವ ದೀರ್ಘಗಳ ಬಗ್ಗೆ ಗೊಂದಲವಾಗಬಹುದು. ಆದರೆ ನೆನಪಿಡಲು ಒಂದು ಸುಲಭವಾದ ಮಾರ್ಗವಿರುವದು. ಅದನ್ನು ನಿಯಮವೆಂದು ಹೇಳಲಾಗದು. ಬಹುವಚನದಲ್ಲಿ ಣ ಕಾರದಿಂದ ಕೂಡಿದ ಪ್ರತ್ಯಯಗಳನ್ನು ಬಿಟ್ಟು ಉಳಿದ ಎಲ್ಲ ಪ್ರತ್ಯಯಗಳ ಪೂರ್ವದಲ್ಲಿಯೂ ಹ್ರಸ್ವಾಂತ ಶಬ್ದವು ದೀರ್ಘಾಂತವಾಗುವದು. ಮತ್ತು ಷಷ್ಠೀ ಬಹುವಚನವನ್ನುಳಿದು ಣ ಕಾರಾದಿಂದ ಕೂಡಿದ ಇತರ ಯಾವದೇ ಪ್ರತ್ಯಯವನ್ನು ಹಚ್ಚುವಾಗ ಮೂಲ ಹ್ರಸ್ವಾಂತವಾದ ಶಬ್ದವು ಹಾಗೆಯೆ ಉಳಿಯುವದು. *

---

* ಣ ಕಾರದಿಂದ ಕೂಡಿದ ಪ್ರತ್ಯಯಗಳ ಬಗ್ಗೆ ಹೇಳಿದ ಈ ನಿಯಮವು ನಪುಂಸಕಲಿಂಗದಲ್ಲಿ ಹ್ರಸ್ವ ಇ ಕಾರಾಂತ ನಾಮಗಳ ಪ್ರಥಮಾ, ದ್ವಿತೀಯಾ ಮತ್ತು ಸಂಬೋಧನ ಇವುಗಳ ಬಹುವಚನಗಳಿಗೆ ಅನ್ವಯಿಸುವದಿಲ್ಲ.

(೪) ಇ ಕಾರಾಂತ ಪುಲ್ಲಿಂಗ **निहि**–(ನಿಧಿ)

| | | |
|---|---|---|
| ಪ್ರ. | **निही** | **निही, निहिणो, निहीओ** |
| ದ್ವಿ. | **निहिं** | **निही, निहिणो, निहीओ** |
| ತೃ. | **निहिणा** | **निहीहि–निहीहिं** |
| ಪಂ. | **निहिणो, निहीओ** | **निहीहिन्तो** |
| ಷ. | **निहिणो, निहिस्स** | **निहीण–निहीणं** |
| ಸ. | **निहिंसि, निहिम्मि** | **निहीसु–निहीसुं** |
| ಸಂ.* | **निहि** | **निहिणो, निहीओ** |

(೫) ಇ ಕಾರಾಂತ ನಪುಂಸಕಲಿಂಗ–**वारि** (ನೀರು)

| | | |
|---|---|---|
| ಪ್ರ. | **वारिं** | **वारीइं, वारीणि** |
| ದ್ವಿ. | **वारिं** | **वारीइं, वारीणि** |
| ತೃ. | **वारिणा** | **वारीहि–वारीहिं** |
| ಪಂ. | **वारिणो, वारीओ** | **वारीहिन्तो** |
| ಷ. | **वारिणो, वारिस्स** | **वारीण–वारीणं** |
| ಸ. | **वारिंसि, वारिम्मि** | **वारीसु–वारीसुं** |
| ಸಂ.* | **वारि** | **वारीइं, वारीणि** |

---

* ನಪುಂಸಕ ಲಿಂಗದ ನಾಮಗಳ ಸಂಬೋಧನದ ಬಗ್ಗೆ ಸ್ವಲ್ಪ ಮತ ಭೇದ ವಿರುವಂತೆ ಕಾಣುತ್ತದೆ. ಡಾ. ಪ. ಲ. ವೈದ್ಯ ಇವರು ಪ್ರಥಮೆ ಮತ್ತು ದ್ವಿತೀಯೆಯ ರೂಪಗಳನ್ನು ಕೊಟ್ಟು "ಉಳಿದವೆಲ್ಲ ಪುಲ್ಲಿಂಗದಂತೆ" ಎಂದಿರುವರು. ಇದರಿಂದ ಸಂಬೋಧನದ ರೂಪಗಳು ಪುಲ್ಲಿಂಗ ನಾಮದಂತೆ ಎಂದು ತಿಳಿದರೆ **कम्मं, वारिं,** ಮತ್ತು **घणुं** ಎಂದು ರೂಪಗಳಾಗದೆ **कम्मो, वारि ,** ಮತ್ತು **घणु** ಎಂದು ರೂಪಗಳಾಗ ಬೇಕು. ಆದರೆ ಡಾ. ಘಾಟಗೆ ಇವರು ಹಾಗೆ ಹೇಳದೆ **कम्मं, वारिं, घणुं** ಎಂದೇ ಹೇಳಿದ್ದಾರೆ. ಅದುವೇ ಸರಿಯೆನಿಸುವದು. ಯಾಕಂದರೆ ಪ್ರಥಮೆಯ ರೂಪಗಳೇ ಅನೇಕ ವೇಳೆ ಸಂಬೋಧನದ ರೂಪಗಳಾಗಿರುವದು ಕಂಡು ಬರುತ್ತದೆ. ಅದ್ದರಿಂದ ಡಾ. ಪ. ಲ. ವೈದ್ಯರು 'ಉಳಿದೆಲ್ಲ ವಿಭಕ್ತಿಗಳಲ್ಲಿ' ಎಂದು ಹೇಳುವಾಗ ಸಂಬೋಧನವನ್ನು ಹಿಡಿದಿರಲಿಕ್ಕಿಲ್ಲ; ಮತ್ತು ಸಂಬೋಧನವನ್ನು ಪ್ರಥಮೆಯಂತೆಯೆ ತಿಳಿಯಬೇಕು ಎಂದು ಅಭಿಪ್ರಾಯವಿರಬಹುದು. ಆದರಿಂದ ಮೇಲೆ ಹೇಳಿದ ಸಂಬೋಧನದ ರೂಪಗಳೇ ಯೋಗ್ಯವೆನಿಸುವವು. ಶ್ರೀ. ಕೇ.ಶ. ಕೇಳಕರರು ತಮ್ಮ ಅರ್ಧಮಾಗಧೀ ವ್ಯಾಕರಣದಲ್ಲಿ ಸಂಬೋಧನದ ಬಹುವಚನದ ರೂಪಗಳನ್ನು ಪ್ರಥಮೆಯಂತೆ ಕೊಟ್ಟು ಏಕ ವಚನದಲ್ಲಿ ಮಾತ್ರ ಮೇಲಿನ ಅನುಸ್ವಾರವನ್ನು ಬಿಟ್ಟುಬಿಟ್ಟಿದ್ದಾರೆ. ಆದರೆ ಅದಕ್ಕೆ ಕಾರಣವನ್ನು ಮಾತ್ರ ಹೇಳಿಲ್ಲ. ಕೇವಲ ಏಕವಚನದಲ್ಲಿ ಡಾ. ಪ. ಲ. ವೈದ್ಯರ ಮತ್ತು ಬಹುವಚನದಲ್ಲಿ ಡಾ. ಘಾಟಕೆಯವರ ಅನುಕರಣ ಮಾಡಿದಂತೆ ಕಂಡುಬರುವದು.

ಆ ಕಾರಾಂತ ಸ್ತ್ರೀಲಿಂಗ ನಾಮಗಳಿಗೆ ಹತ್ತುವ ಪ್ರತ್ಯಯಗಳೇ ಸಾಮಾನ್ಯವಾಗಿ ಇ, ಈ, ಕಾರಾಂತ ಸ್ತ್ರೀಲಿಂಗ ನಾಮಗಳಿಗೆ ಹತ್ತುವವು. ಹ್ರಸ್ವ ಇ ಕಾರಾಂತ ಮತ್ತು ದೀರ್ಘ ಈ ಕಾರಾಂತ ಶಬ್ದಗಳು **ಸಪ್ತಮಿ ಏಕವಚನ** ವನ್ನುಳಿದು ಉಳಿದೆಲ್ಲ ಕಡೆಗೆ ಒಂದೇ ವಿಧವಾಗಿರುವವು. ಹ್ರಸ್ವ ಇ ಕಾರಾಂತ ಸ್ತ್ರೀಲಿಂಗ ಶಬ್ದಗಳಿಗೆ ಸಪ್ತಮೀ ಏಕವಚದಲ್ಲಿ **सि** ಎಂಬ ಪ್ರತ್ಯಯುವೂ ಬರುವದು. ಸಂಬೋಧನ ಮತ್ತು ದ್ವಿತೀಯಾ ಏಕವಚನಗಳನ್ನು ಬಿಟ್ಟು ಉಳಿದ ಎಲ್ಲ ಪ್ರತ್ಯಯಗಳ ಪೂರ್ವದಲ್ಲಿ ಹ್ರಸ್ವಾಂತ ಶಬ್ದವು ದೀರ್ಘಾಂತವಾಗುವದು.

(೬) 'ಇ' ಕಾರಾಂತ ಸ್ತ್ರೀಲಿಂಗ **भूमि**– (ನೆಲ)

| | ಏ. | ಬ. |
|---|---|---|
| ಪ್ರ. | **भूमी** | **भूमी, भूमीओ** |
| ದ್ವಿ. | **भूमिं** | **भूमी, भूमीओ** |
| ತೃ. | **भूमीए** | **भूमीहि–भूमीहिं** |
| ಪಂ. | **भूमीए (भूमीओ)** | **भूमीहिन्तो** |
| ಷ. | **भूमीए** | **भूमीण–भूमीणं** |
| ಸ. | **भूमीए, भूमिंसि** | **भूमीसु–भूमीसुं** |
| ಸಂ. | **भूमि** | **भूमी, भूमीओ** |

(೭) ಈ ಕಾರಾಂತ ಸ್ತ್ರೀಲಿಂಗ **पुहवी**– (ಪೃಥ್ವಿ) *

| | | |
|---|---|---|
| ಪ್ರ. | **पुहवी** | **पुहवी, पुहवीओ** |
| ದ್ವಿ. | **पुहविं** | **पुहवी, पुहवीओ** |
| ತೃ. | **पुहवीए** | **पुहवीहि, पुहवीहिं** |
| ಪ.ಂ | **पुहवीए, पुहवीओ** | **पुहवीहिन्तो** |

* ಪಂಚಮೀ ಏಕವಚನದಲ್ಲಿ ಡಾ. ವೈದ್ಯರು ಎರಡು ರೂಪಗಳನ್ನು ಹೇಳಿರುವರು. ಆದರೆ ಡಾ. ಘಾಟಗೆಯುವರು **इ, उ** ಕಾರಾಂತಗಳಲ್ಲಿ **ओ** ಎಂಬ ಪ್ರತ್ಯಯುವನ್ನೂ, **ई, ऊ** ಕಾರಾಂತಗಳಲ್ಲಿ **ए** ಎಂಬ ಪ್ರತ್ಯಯುವನ್ನೂ ಮಾತ್ರ ಹೇಳುವರು. ಸಂಬೋಧನವನ್ನು ಪ್ರಥಮೆಯುಂತೆಯೆ ಎಂದು ದೀರ್ಘಾಂತವಾಗಿ ವೈದ್ಯರು ಹೇಳಿರುವರು. ಆದರೆ ಘಾಟಗೆಯುವರು ಬೇರೆಯಾಗಿಯೆ ಹೇಳಿರುವದಲ್ಲದೆ ಏಕವಚನದಲ್ಲಿ ಹ್ರಸ್ವಾಂತ ರೂಪವನ್ನು ಕೊಟ್ಟಿರುವರು,

| | | |
|---|---|---|
| ಷ. | | पुहवीण–पुहवीणं |
| ಸ. | पुहवीए | पुहवीसु, पुहवीसुं |
| ಸಂ. | पुहवि | |

## ಶಬ್ದಸಂಗ್ರಹ

अइहि (ಪು.) ಅತಿಥಿ
अच्छि (ಪು. ಸ್ತ್ರೀ. ನ.) ಕಣ್ಣು
असि (ಪು.) ಖಡ್ಗ
अहियं (ಅ.) ಅಧಿಕ
आसम (ಪು.) ಆಶ್ರಮ
करि (ಪು.) ಆನೆ
कलस (ಪು.) ಕಲಶ, ಕೊಡ. ಕಳಸ
काल (ಪು.) ಕಾಲ, ವೇಳೆ
किसिवल (ಪು.) ಒಕ್ಕಲಿಗ
कोमुइ (ಸ್ತ್ರೀ) ಬೆಳುದಿಂಗಳು
खेत्त (ನ.) ಹೊಲ
गिह (ನ.) ಮನೆ
गिहत्थ (ಪು.) ಗೃಹಸ್ಥ
गिहिधम्म (ಪು.) ಗೃಹಸ್ಥಾಶ್ರಮ
गीय (ನ.) ಗೀತ, ಗಾನ
चंपा (ಸ್ತ್ರೀ.)ಒಂದು ಪಟ್ಟಣದ ಹೆಸರು
जन्तु (ನ.) ಹುಳ, ಕೀಡೆ
जन्न (ಪು.) ಯಜ್ಞ
जूयट्ठाण (ನ.) ಜೂಜುಮನೆ
जोह (ಪು.) ಯೋಧ, ಸೈನಿಕ
झाण (ನ.) ಧ್ಯಾನ
तेगिच्छि (ಪು.) ವೈದ್ಯ
तेय (ನ.) ತೇಜಸ್ಸು
दिक्खा (ಸ್ತ್ರೀ.) ದೀಕ್ಷೆ
दुम (ಪು.) ಗಿಡ
दुव्वा (ಸ್ತ್ರೀ.) ಕರಿಕೆ
नट्ट (ನ.) ನೃತ್ಯ, ಕುಣಿತ
नरवइ (ಪು.) ರಾಜ
नासिया (ಸ್ತ್ರೀ) ಮೂಗು
नेड्ड (ನ.) ಹಕ್ಕಿಗೂಡು
पड (ನ.) ಪಟ, ವಸ್ತ್ರ
परइत्थी (ಸ್ತ್ರೀ.) ಪರಸ್ತ್ರೀ
पसाय (ಪು.) ಪ್ರಸಾದ, ಕೃಪೆ
पसुबंध (ಪು.) ಪಶುಹತ್ಯೆ
पाणागार (ಪು.) ಮದ್ಯದ ಅಂಗಡಿ, ಗಡಂಗ
पिच्छ (ನ.) ಗರಿ
बंभ (ಪು.) ಬ್ರಹ್ಮ
बाहु (ಪು.) ಬಾಹು, ತೋಳ
बाण (ಪು.) ಬಾಣ
भज्जा (ಸ್ತ್ರೀ.) ಹೆಂಡಿತಿ
भारह (ಪು.) ಭರತಖಂಡ
भूमिपइ (ಪು.) ಅರಸು, ರಾಜ
मणिपट्टय (ನ.) ಡಾಬು
मंदिर (ನ.) ದೇವಾಲಯು, ಮನೆ
महुयर (ಪು.) ಜೇನ್ನೊಣ

मा (ಅ.) ನಿಷೇಧಾರ್ಥ ಅವ್ಯಯ
माहण (ಪು.) ಬ್ರಾಹ್ಮಣ
मुणि (ಪು.) ಸಾಧು, ಮುನಿ
यत्त (ಪು.) ಪ್ರಯತ್ನ
रच्छा (ಸ್ತ್ರೀ.) ರಸ್ತೆ, ಬೀದಿ
रयण (ನ.) ರತ್ನ
रयणागर (ಪು.) ರತ್ನಾಕರ, ಸಮುದ್ರ
रस (ಪು.) ರಸ
वाणर (ಪು.) ಮಂಗ
विज्जुलया (ಸ್ತ್ರೀ.) ವಿದ್ಯುಲ್ಲತೆ, ಮಿಂಚು
वीणा (ಸ್ತ್ರೀ.) ವೀಣೆ
वेसा (ಸ್ತ್ರೀ.) ವೇಶ್ಯೆ
सउणि (ಪು.) ಪಕ್ಷಿ
साणु (ಪು.) ಶಿಖರ
सायर (ಪು.) ಸಮುದ್ರ
सुण्हा (ಸ್ತ್ರೀ.) ಸೊಸೆ
हरि (ಪು.) ವಿಷ್ಣು

**ಅಭ್ಯಾಸ**

**(೧) ಕೆಳಗಿನ ರೂಪಗಳನ್ನು ಗುರುತಿಸಿರಿ :—**

मुणिणा, तेयंसि, गालीओ, पारियइ, साहुणींहिं, एहि, भारहे, खंतीए, नासियाए, अच्छीहिं, तलाआओ, कोमुइं, नरवइणा, सउणीहिंतो, तेगिच्छि, भूमिपइणो, कोसल्लाए, हवइ, गीयाइ, साहासु.

**(೨) ರೂಪಗಳನ್ನು ಕೊಡಿರಿ :**

| | |
|---|---|
| ಸಂಬೋಧನ ಏ. ವ. | नेड्ड, विज्जुलया, इत्थि, तेय. |
| ಷಷ್ಠೀ ಏ. ವ. | भज्जा, तेय, मुणि, करि. |
| ಪ್ರಥಮಾ ಬ. ವ. | कित्ति, पिच्छ, सउणि, कयली. |
| ವ. ಕಾ. ಉ. ಪು. ಏ. | बे, सिंच, उद्द, गा. |
| ,, ತೃ. ಪು. ಬ. | उवट्ठा, ए, वा, झिया. |

**ಭಾಷಾಂತರ**

(೧) ಕನ್ನಡಕ್ಕೆ ಪರಿವರ್ತಿಸಿರಿ :—

(१) समणो, कालेण निक्खमइ, कालेण पडिक्कमइ । (२) नरिन्दस्स लोया चंपाए रच्छासु जलं सिंचन्ति । (३) तेगिच्छी नासियाए पडं बंधेइ । (४) महुयरा पुप्फे अच्छान्ति, पुप्फरसं पिबन्ति । (५) निसाए नहंसि चन्दं पासमि । (६) गिहत्थो अइहिणो पूएइ । (७) सउणीओ रुक्खस्स साहाए नेड्डाणि करेन्ति । (८) वाणरा दुमस्स साहासु कीलन्ति । (९) मुणिणो गिहं

चयन्ति। (१०) माहणस्स कुमारा गीयं गायन्ति। (११) जोहा असीहिं जुज्झन्ति। (१२) बंभो, हरी य मित्ता सन्ति। (१३) अणगारो झाणं झियायइ। (१४) भूमियई अणगारस्स धम्मं सुणन्ति, दिक्खं गेण्हन्ति। (१५) वेसाण मन्दिरेसुं पाणागारेसुं, जूयाठाणेसुं, उज्जणेसु कुमारो हिण्डइ। (१६) कोमुइमहूसवंमि ललणा गीयं गायन्ति, नट्टं करेन्ति य। (१७) जणयस्स पसाएण पुत्तो धणं लहेइ। (१८)नरवई बाणा मुंचइ, चोरस्स अच्छींइ छिन्देइ। (१९) सीहा य, करी य, मिया य वणे अच्छन्ति।

(೨) ಅರ್ಧಮಾಗಧಿಯಲ್ಲಿ ಭಾಷಾಂತರಿಸಿರಿ.

(೧) ಸೀತೆಯು ವನದಲ್ಲಿ ಮುನಿಯ ಆಶ್ರಮದಲ್ಲಿ ಇರುತ್ತಾಳೆ. (೨) (೨) ಗಂಡಸರು ಹೆಣ್ಣುಮಕ್ಕಳನ್ನೂ (कन्न), ಹೆಂಗಸರು ಗಂಡುಮಕ್ಕಳನ್ನೂ (बाल) ಇಚ್ಛಿಸುತ್ತಾರೆ. (೩) ಲಕ್ಷ್ಮಿಯ ತೇಜಸ್ಸು ಮತ್ತು ಸೌಂದರ್ಯವು ವಿದ್ಯುಲ್ಲತೆಯಂತೆ ಇರುವದು. (೪) ಬ್ರಾಹ್ಮಣರು ಯಜ್ಞ ಮಾಡುತ್ತಾರೆ. (೫) ಸಾಧುವು ಮನೆಯನ್ನು ಮತ್ತು ಗೃಹಸ್ಥಾಶ್ರಮವನ್ನು ಬಿಡುತಾನ್ತೆ. (೬)ರಾಜ ಕುಮಾರಿಯು ಕೈಕಾಲು ತೊಳೆದುಕೊಳ್ಳುತ್ತಾಳೆ. (೭) ವೀರರು ಬಾಣ ಬಿಡುತ್ತಾರೆ. (೮) ವೈದ್ಯನು ಗಾಯದಮೇಲೆ ಪಟ್ಟಿ ಕಟ್ಟುತ್ತಾನೆ. (೯) ಸಮುದ್ರದಲ್ಲಿ ರತ್ನಗಳು ಇರುತ್ತವೆ. (೧೦) ಸೇವಕನು ನೀರು ತರುತ್ತಾನೆ. (೧೧) ಬ್ರಾಹ್ಮಣನೆ, ಪಶುಹತ್ಯೆ ಮಾಡಬೇಡ. (೧೨) ಹರಿಯು ವೀಣೆಯನ್ನು ಬಾರಿಸುತ್ತಾನೆ. (೧೩) ಬ್ರಾಹ್ಮಣನು ಧಾರ್ಮಿಕ ಪ್ರವಚನ ಹೇಳುತ್ತಾನೆ. (೧೪) ಒಕ್ಕಲಿಗನು ಗಿಡಗಳನ್ನು ಹಚ್ಚುತ್ತಾನೆ. (೧೫) ಸ್ತ್ರೀಯರು ಕರಿಕೆ ಮತ್ತು ಹೂಗಳಿಂದ ದೇವತೆಯನ್ನು ಪೂಜಿಸುತ್ತಾರೆ. (೧೬) ಪಕ್ಷಿಗಳು ಹಾರುತ್ತವೆ. (೧೭) ಪರಸ್ತ್ರೀಯು ಭಗಿನಿಯಂತೆ ಇರುತ್ತಾಳೆ. (೧೮) ಹುಡಗರು ಮಿಂಚನ್ನು ನೋಡುತ್ತಾರೆ. (೧೯) ಸೀತೆಯ ಡಾಬು ಬಂಗಾರದ್ದು ಇರುತ್ತದೆ. (೨೦) ಹೆಂಗಸರು ಕೆರೆಯಿಂದ ನೀರು ತರುತ್ತಾರೆ.

## ಉ ಕಾರಾಂತ ಮತ್ತು ಊ ಕಾರಾಂತ ನಾಮಗಳು.

ಪುಲ್ಲಿಂಗ ಉ ಕಾರಾಂತ ನಾಮಗಳು ಪುಲ್ಲಿಂಗ ಇ ಕಾರಾಂತ ನಾಮಗಳಂತೆಯೂ, ನಪುಂಸಕಲಿಂಗ ಉ ಕಾರಾಂತ ನಾಮಗಳು ನಪುಂಸಕಲಿಂಗ ಇ ಕಾರಾಂತನಾಮಗಳಂತೆಯೂ ಮತ್ತು ಸ್ತ್ರೀಲಿಂಗ ಉ ಕಾರಾಂತ ಮತ್ತು ಊ ಕಾರಾಂತ ನಾಮಗಳು ಅನುಕ್ರಮವಾಗಿ ಸ್ತ್ರೀಲಿಂಗ ಇ, ಈ ಕಾರಾಂತ ನಾಮಗಳಂತೆಯೂ ನಡೆಯುತ್ತವೆ. ಕೆಳಗೆ ಮಾದರಿಗಳನ್ನು ಕೊಟ್ಟಿದೆ.

(೮) ಉ ಕಾರಾಂತ ಪುಲ್ಲಿಂಗ–**भिक्खु** (ಸಾಧು)

| | | |
|---|---|---|
| ಪ್ರ. | भिक्खू | भिक्खू, भिक्खुणो, भिक्खवो |
| ದ್ವಿ. | भिक्खुं | भिक्खू, भिक्खुणो, भिक्खवो |
| ತೃ. | भिक्खुणा | भिक्खूहि–भिक्खूहिं |
| ಪಂ. | भिक्खुणो, भिक्खूओ | भिक्खूहिन्तो |
| ಷ. | भिक्खुणो, भिक्खुस्स | भिक्खूण–भिक्खूणं |
| ಸ. | भिक्खुंसि, भिक्खुम्मि | भिक्खूसु–भिक्खूसुं |
| ಸಂ. | भिक्खु | भिक्खुणो, भिक्खवो |

(೯) ಉ ಕಾರಾಂತ ನಪುಂಸಕಲಿಂಗ– **धणु** (ಬಿಲ್ಲು)

| | | |
|---|---|---|
| ಪ್ರ. | धणुं | धणूइं, धणूणि |
| ದ್ವಿ. | धणुं | धणूइं, धणूणि |
| ತೃ. | धणुणा | धणूहि–धणूहिं |
| ಪಂ. | धणुणो, धणूओ | धणूहिन्तो |
| ಷ. | धणुणो, धणुस्स | धणूण–धणूणं |
| ಸ. | धणुंसि, धणुम्मि | धणूसु–धणूसुं |
| ಸಂ. | धणु | धणूइं, धणूणि. |

---

* ಫುಟ ೬೪ ದಲ್ಲಿ ಹೇಳಿದ **ण** ಕಾರದಿಂದ ಕೂಡಿದ ಪ್ರತ್ಯಯಗಳ ಸಂಬಂಧವಾದ ನಿಯಮವು ನಪುಂಸಕ ಲಿಂಗದ ಹ್ರಸ್ವ ಇ ಕಾರಾಂತ ನಾಮಗಳಂತೆ ಹ್ರಸ್ವ ಉ ಕಾರಾಂತ ನಾಮಗಳ ಪ್ರಥಮಾ, ದ್ವಿತೀಯಾ ಮತ್ತು ಸಂಬೋಧನ ವಿಭಕ್ತಿಗಳ ಬಹುವಚನಗಳಿಗೆ ಅನ್ವಯಿಸುವದಿಲ್ಲ.

(೧೦) ಉ ಕಾರಾಂತ ಸ್ತ್ರೀಲಿಂಗ रज्जु- (ಹಗ್ಗ)

| | ಏ. | ಬ. |
|---|---|---|
| ಪ್ರ. | रज्जू | रज्जू, रज्जूओ |
| ದ್ವಿ. | रज्जुं | रज्जू, रजूओ |
| ತೃ. | रज्जूए | रज्जूहि-रज्जूहिं |
| ಪಂ. | रज्जूए, रज्जूओ | रजूहिन्तो |
| ಷ. | रज्जूए | रज्जूण-रज्जूणं |
| ಸ. | रज्जूए, रजूसि | रज्जूसु-रज्जूसुं |
| ಸಂ. | रज्जु | रज्जू-रज्जूओ |

(೧೧) ಊ ಕಾರಾಂತ ಸ್ತ್ರೀಲಿಂಗ तणू- (ಶರೀರ,)

| | ಏ, | ಬ, |
|---|---|---|
| ಪ್ರ. | तणू | तणू ,तणूओ |
| ದ್ವಿ. | तणुं | तणू , तणूओ |
| ತೃ. | तणूए | तणूहि-तणूहिं |
| ಪಂ. | तणूए, तणूओ | तणूहिन्तो |
| ಷ. | तणूए | तणूण-तणूणं |
| ಸ. | तणूए | तणूसु-तणूसुं |
| ಸಂ. | तणु | तणू, तणूओ |

**ಶಬ್ದಸಂಗ್ರಹ**

**अग्गि** (ಪು.) ಅಗ್ನಿ, ಬೆಂಕಿ
**अंगुली** (ಸ್ತ್ರೀ.) ಕೈಬೆರಳು
**अग्गमाहिसी** (ಸ್ತ್ರೀ.) ಪಟ್ಟರಾಣಿ
**अज्जु** (ಸ್ತ್ರೀ.) ಅತ್ತೆ

---

* ಪುಟ ೬೬ ದಲ್ಲಿಯ ಟಿಪ್ಪಣಿಯಲ್ಲಿ ಹೇಳಿರುವಂತೆ ಡಾ. ಪ. ಲ. ವೈದ್ಯರು ಸ್ತ್ರೀಲಿಂಗ ಉ ಮತ್ತು ಊ ಕಾರಾಂತ ನಾಮಗಳ ಪಂಚಮೀ ಏಕವಚನದಲ್ಲಿ ಎರಡೆರಡು ರೂಪಗಳನ್ನು ಕೊಟ್ಟಿದ್ದಾರೆ. ಆದರೆ ಡಾ. ಘಾಟಗೆಯವರು ಹ್ರಸ್ವ ಉ ಕಾರಾಂತ ಸ್ತ್ರೀಲಿಂಗ ನಾಮಕ್ಕೆ ओ ಕಾರಾಂತ ಮತ್ತು ಈ ಕಾರಾಂತ ನಾಮಕ್ಕೆ ए ಕಾರಾಂತವಾದ ಒಂದೊಂದೇ ರೂಪವನ್ನು ಕೊಟ್ಟಿದ್ದಾರೆ. ಡಾ. ವೈದ್ಯರು ಉ, ಊ, ಕಾರಾಂತ ಸ್ತ್ರೀಲಿಂಗ ನಾಮುಗಳ ಸಂಬೋಧನವನ್ನೂ ಪ್ರಥಮೆಯಂತೆ ಏಕವಚನದಲ್ಲಿ ದೀರ್ಘವಾಗಿಯೆ ಕೊಟ್ಟಿದ್ದಾರೆ. ಆದರೆ ಡಾ. ಘಾಟಗೆಯವರು ಹ್ರಸ್ವವಾಗಿ ಕೊಟ್ಟಿದ್ದಾರೆ.

अणिच्चया (ಸ್ತ್ರೀ.) ಅನಿತ್ಯತೆ
अलाउ (ಪು.) ಕುಂಬಳ
असारया (ಸ್ತ್ರೀ.) ಅಸಾರತೆ
आयर (ಪು.) ಆದರ
इसु (ಪು.) ಬಾಣ
उज्जेणी (ಸ್ತ್ರೀ.) ಒಂದು ಪಟ್ಟಣದ ಹೆಸರು
एवं (ಅ.) ಈ ಪ್ರಕಾರ
कई (ಪು.) ಮಂಗ
कद्दम (ಪು.) ಕೆಸರು
कयली (ಸ್ತ್ರೀ.) ಬಾಳೆ
कित्ति (ಸ್ತ್ರೀ.) ಕೀರ್ತಿ
केली (ಸ್ತ್ರೀ.) ಕ್ರೀಡೆ, ಆಟ
कोसबी (ಸ್ತ್ರೀ.) ಕೌಶಾಂಬಿ ಪಟ್ಟಣ
खण (ನ) ಕ್ಷಣ
खज्जू (ಸ್ತ್ರೀ.) ಹುರುಕು
खंति (ಸ್ತ್ರೀ.) ಕ್ಷಮೆ, ತಾಳ್ಮೆ
गाली (ಸ್ತ್ರೀ.) ಬೈಗಳು
गाहावइ (ಪು.) ಗೃಹಸ್ಥ
गोरी (ಸ್ತ್ರೀ) ಗೌರಿ
चंदिया (ಸ್ತ್ರೀ.) ಬೆಳದಿಂಗಳು
जमल (ನ.) ಅವಳಿ
जलकेली (ಸ್ತ್ರೀ.) ಜಲಕ್ರೀಡೆ
जाणु (ನ.) ಮೊಳಕಾಲು
जीवलोक (ಪು.) ಜೀವಲೋಕ
थुइ (ಸ್ತ್ರೀ.) ಸ್ತುತಿ
दुध्द (ನ.) ಹಾಲು
धणु (ಪು.) ಬಿಲ್ಲು
धाई (ಸ್ತ್ರೀ.) ದಾಯಿ
धारिणी (ಸ್ತ್ರೀ.) ಒಬ್ಬ ಸ್ತ್ರೀಯ ಹೆಸರು
धिइ (ಸ್ತ್ರೀ.) ಧೈರ್ಯ
धूलि (ಸ್ತ್ರೀ.) ಧೂಳು, ಹುಡಿ
नयरी (ಸ್ತ್ರೀ.) ನಗರ
नाय (ಪು.) ನಾದ, ಧ್ವನಿ
पंडिय (ಪು.) ಪಂಡಿತ
पियसंयोग (ಪು.) ಪ್ರೀತಿಯ ಸಂಯೋಗ
पुरा (ಅ.) ಹಿಂದಕ್ಕೆ
भंगुर (ನ.) ನಾಶ ಹೊಂದುವ
भारिया (ಸ್ತ್ರೀ.) ಹೆಂಡತಿ
भासा (ಸ್ತ್ರೀ.) ಭಾಷೆ
(ಪು.) ಭಿಕ್ಷುಕ
(ಪು.) ಮೃತ್ಯು
मट्टिया (ಸ್ತ್ರೀ.) ಮೃತ್ತಿಕೆ, ಮಣ್ಣು
मरुअ (ಪು.) ಗಾಳಿ
महव्वय (ನ.) ಮಹಾವ್ರತ
महावीर (ಪು.) ಮಹಾವೀರ, ಜಿನ
माउसिया (ಸ್ತ್ರೀ.) ಅಬಚಿ
राई (ಸ್ತ್ರೀ.) ರಾತ್ರಿ
रायगिह (ನ.) ಒಂದು ಪಟ್ಟಣದ ಹೆಸರು
लक्खण (ಪು.) ಲಕ್ಷ್ಮಣ
लच्छी (ಸ್ತ್ರೀ.) ಲಕ್ಷ್ಮಿ
लालसा (ಸ್ತ್ರೀ.) ಲಾಲಸೆ, ಆಶೆ
वणकम्म (ನ.) ಗಾಯಕ್ಕೆ ಉಪಚಾರ

वहू (ಸ್ತ್ರೀ.) ವಧು, ಹೆಂಡಿತಿ
वाणारसी (ಸ್ತ್ರೀ.) ಒಂದು ನಗರದ ಹೆಸರು
विप्प (ಪು.) ಬ್ರಾಹ್ಮಣ
विवाह (ಪು.) ಲಗ್ನ, ಮದುವೆ
विहु (ಪು.) ಚಂದ್ರ
संभु (ಪು.) ಶಂಕರ
सरस्सइ (ಸ್ತ್ರೀ.) ಸರಸ್ವತಿ
सिक्खावय (ನ.) ಶಿಕ್ಷಾಪದ
संति (ಸ್ತ್ರೀ.) ಶಾಂತಿ
समणी (ಸ್ತ್ರೀ.) ಶ್ರಮಣಿ, ದೀಕ್ಷೆ ಹೊಂದಿದ ಸ್ತ್ರೀ
समय (ಪು.) ವೇಳೆ
सस्सू (ಸ್ತ್ರೀ.) ಅತ್ತೆ
संसार (ಪು.) ಸಂಸಾರ
सह (ಅ.) ಸಂಗಡ
साहुणी (ಸ್ತ್ರೀ.) ದೀಕ್ಷೆ ಹೊಂದಿದ ಸ್ತ್ರೀ
सूर (ಪು.) ಶೂರ, ಒಂದು ಹೆಸರು
सेउ (ಪು.) ಸೇತು
सेणिय (ಪು.) ಶ್ರೇಣಿಕ ರಾಜ
सोहग्ग (ನ.) ಸೌಭಾಗ್ಯ
हत्थिणाउर (ನ.) ಹಸ್ತಿನಾಪುರ

**ಅಭ್ಯಾಸ.**

(೧) ಕೆಳಗಿನ ರೂಪಗಳನ್ನು ಗುರುತಿಸಿರಿ :—

**उज्जणेसुं, अच्छान्ति, रायगिहे, गालीओ, अग्गिणा, धेणूहिं, गाहावइणा, खंतीए, देवयाहिंतो, धाईओ, राईसु, थुइं, सुण्हाए, साहुणीओ, लच्छीए, सेऊहिं, मच्चुस्स, मरुयं, कइमंसि, जाणुणा.**

(೨) ರೂಪಗಳನ್ನು ಕೊಡಿರಿ.

| | |
|---|---|
| ಸಪ್ತಮೀ ಏ. ವ. | **वहू, कयली, धिइ** |
| ತೃತೀಯಾ ಬ. ವ. | **कोसंबी, जाणु, कित्ति, माउसिया** |
| ಷಷ್ಠೀ ಬ. ವ. | **अभिहाण, सेणिय, अज्जु, अंगुली** |
| ವ. ಕಾ. ಉ. ಪು. ಏ. | **झिया, लिंप, गेण्ह, जाय** |
| ,, ತೃ. ಪು. ಏ. ಬ. | **वन्द, दे, उवणी, हो** |

**ಭಾಷಾಂತರ**

**ಕನ್ನಡದಲ್ಲಿ ಭಾಷಾಂತರಿಸಿರಿ :—**

**(१) उज्जाणे चेइयं अत्थि । कुमारीओ उज्जणाओ पुप्फाइं गेण्हन्ति, देवयं पूयन्ति । (२) समणी असच्चं न भासइ । (३) गोरी माउसियाए गिहं गच्छइ । (४) कुमारा राईसु धम्मं सुणन्ति, अज्झावयस्स थुइं करेन्ति**

सन्ति लहन्ति। (५) कुमारीओ धाईए महुं य दहिं य जायन्ति। (६) साहुणीओ वणे सीयं कयलिफलाइं देन्ति। (७) नरिन्दस्स कीत्ती चंदिया इव भासइ। (८) लोया निवस्स खन्तीए सन्तीए य थुइं करेन्ति। (९) अज्जू सुण्हाए गालीओ देइ। (१०) विवाहसमए ललणा सस्सुं जणयं य वन्दन्ति। (११) धाईओ कुमारं उज्जाणे नेन्ति। कुमारो धूलिंसि केली करेइ। जाणूओ, अंगुलीओ य मट्टियाए लिंपइ। (१२) कन्नाए अंगुलीसु खज्जू अत्थि। तेगिच्छी ओसहेण वणकम्मं करेइ। पडेण अंगुलीओ बंधइ। (१३) उज्जेणीए नयरीए बंभो नरिन्दो अत्थि। (१४) कोसंबीए हरी दिक्खं गहेइ। (१५) रायगिहे नयरे सेणिओ निवो, धारिणी सेणियस्स अग्गमाहिसी। (१६) हत्थिणाउरे सूरे रायपुत्तो अत्थि। रायपुत्तस्स भज्जा गंगा। (१७) भूवइस्स कन्नाए रुवं देवयारुवं इव। (१८) अलाऊ जले न निमज्जइ। (१९) वाणरा रुक्खस्स साहासु अच्छन्ति, फलाइं भक्खन्ति। (२०) पुरा भारहे रायगिहं नयरं अत्थि। रायगिहे नयरे सेणीओ राया रज्जं करेइ।

**(೨) ಅರ್ಧಮಾಗಧಿಯಲ್ಲಿ ಭಾಷಾಂತರಿಸಿರಿ :—**

(೧) ತಂದೆಯು ಮಗನನ್ನು ದಾಯಿಗೆ ಕೊಡುತ್ತಾನೆ. (೨) ಯುದ್ಧದಲ್ಲಿ ಖಡ್ಗ ಮತ್ತು ಬಾಣಗಳಿಂದ ಯುದ್ಧ ಮಾಡುತ್ತಾರೆ. (೩) ಚಂದ್ರನು ರಾತ್ರಿಯಲ್ಲಿ ಮೂಡುತ್ತಾನೆ. (೪) ಸಾಧುವು ಮಹಾವ್ರತ ಮತ್ತು ಶಿಕ್ಷಾಪದಗಳ (ಬಗ್ಗೆ) ಆಚಾರ್ಯರ ಪ್ರವಚನವನ್ನು ಕೇಳುತ್ತಾನೆ ಮತ್ತು ದೀಕ್ಷೆ ತೆಗೆದುಕೊಳ್ಳುತ್ತಾನೆ. (೫) ರಾಮನ ಕೀರ್ತಿಯನ್ನು ಜನಕಕನ್ಯೆಯಾದ ಸೀತೆಯು ಕೇಳಿದಳು. (೬) ರಾಜರು ಬ್ರಹ್ಮದೇವನಿಗೂ ವಿಷ್ಣುವಿಗೂ ಆದರದಿಂದ ನಮಸ್ಕಾರ ಮಾಡುತ್ತಾರೆ. (೭) ಹುಡಿಗಿಯರು ಯಮುನೆಯ ದಂಡೆಯಮೇಲೆ ತೋಟದಲ್ಲಿ ಆಡುತ್ತಾರೆ. (೮) ಸಾಧುಗಳು ಸಾಧ್ವಿಯರು ಧಾರ್ಮಿಕ ಪ್ರವಚನವನ್ನು ನಂಬುತ್ತಾರೆ. (೯) ದೇವತೆಗಳಿಗೆ ಶ್ರೇಣಿಕ ರಾಜನು ವಂದಿಸಿದನು. (೧೦) ದಾಸಿಯು ತೋಟದಲ್ಲಿಯ ಹೂಗಳನ್ನು ಮತ್ತು ಹಣ್ಣುಗಳನ್ನು ಹರಿದಳು ಮತ್ತು ರಾಜಪುತ್ರನಿಗೆ ಕೊಟ್ಟಳು. (೧೧) ಯಮುನೆಯ ನೀರಿನಲ್ಲಿ ಗೋಪಾಲರು ಜಲಕ್ರೀಡೆಯನ್ನಾಡುತ್ತಾರೆ. (೧೨) ಸ್ತ್ರೀಯರು ವನದಲ್ಲಿ ಜಿನಮಂದಿರಕ್ಕೆ ಹೋಗುತ್ತಾರೆ; ಹುಲಿಯ ಧ್ವನಿಯನ್ನು ಕೇಳುತ್ತಾರೆ; ಮತ್ತು ತಿರುಗಿ ಬರುತ್ತಾರೆ. (೧೩) ಗಾಳಿಯು ಆಕಾಶದಲ್ಲಿ ಧೂಳಿಯನ್ನು ಹಾರಿಸುತ್ತದೆ. (೧೪)

ಶ್ರೇಣಿಕರಾಜನು ಆಚಾರ್ಯರಿಂದ ದೀಕ್ಷೆಯನ್ನು ತೆಗೆದುಕೊಳ್ಳುತ್ತಾನೆ. (೧೫) ಲಕ್ಷ್ಮಿ ಮತ್ತು ಸರಸ್ವತಿಯರು ಬಾಳೆಯ ತೋಟದಲ್ಲಿ ಆಡುತ್ತಾರೆ. (೧೬) ಗೌರಿಯು ಮಣ್ಣಿನಲ್ಲಿ ಆಡುತ್ತಾಳೆ. (೧೭) ತಾಯಿಯು ಮಗುವಿಗೆ ಹಾಲನ್ನು ಕೊಡುತ್ತಾಳೆ. (೧೮) ಸಾಧುಗಳು ಸಂಸಾರದಲ್ಲಿ ಅಸಾರತೆಯನ್ನು ಕಾಣುತ್ತಾರೆ ಮತ್ತು ಸಂಸಾರದ ತ್ಯಾಗ ಮಾಡುತ್ತಾರೆ. (೧೯) ಸೈನಿಕನು ಬಿಲ್ಲಿನಿಂದ ಬಾಣ ಬಿಡುತ್ತಾನೆ ಮತ್ತು ಚಿಗರೆಯನ್ನು ಕೊಲ್ಲುತ್ತಾನೆ. (೨೦) ಪತಿವ್ರತಾ ಸ್ತ್ರೀಯರು ಪತಿಯ ಸೇವೆ ಮಾಡುತ್ತಾರೆ.

# ಪಾಠ ೬

## ಭೂತಕಾಲ

ಅರ್ಧಮಾಗಧಿಯಲ್ಲಿ ಭೂತಕಾಲದ ಉಪಯೋಗವು ವಿಶೇಷವಾಗಿಲ್ಲ. ವರ್ತಮಾನ ಕಾಲವನ್ನೇ ಭೂತಕಾಲದ ಅರ್ಥದಲ್ಲಿಯೂ ಉಪಯೋಗಿಸುವರು. ಆದರೆ ಭೂತಕಾಲಕ್ಕೆ ಸ್ವತಂತ್ರವಾದ ಕೆಲವು ಪ್ರತ್ಯಯಗಳಿರುತ್ತವೆ. ಬೇರೆ ಬೇರೆ ಪುರುಷಗಳಿಗೆ ಬೇರೆ ಬೇರೆ ಪ್ರತ್ಯಯಗಳಿಲ್ಲ. ಈ ಪ್ರತ್ಯಯಗಳು ಮೂರೂ ಗುಂಪಿನ ಧಾತುಗಳಿಗೂ ಸಮಾನವಾಗಿವೆ.

**ಭೂತಕಾಲದ ಪ್ರತ್ಯಯಗಳು * इत्थ, इत्था** (ಏಕವಚನ) **इंसु** (ಬಹುಚನ)

**ಗುಂಪು ೧** (अ ಕಾರಾಂತ ಧಾತು) –**कह** (ಹೇಳು)

ಉ. ದ್ವಿ. ತೃ. ಪು. **कहित्थ, कहित्था** **कहिंसु**

**ಗುಂಪು ೨** (ए ಕಾರಾಂತ ಧಾತುಗಳು) – **करे** (ಮಾಡು)

ಉ. ದ್ವಿ. ತೃ. ಪು. **करित्थ, करित्था** **करिंसु**

**करेत्थ, करेत्था** **करेंसु**

---

* ಭೂತಕಾಲದ ಏಕವಚನದ इत्थ ಪ್ರತ್ಯಯವನ್ನು ಡಾ. ಘಾಟಗೆಯವರು ಕೊಟ್ಟಿಲ್ಲ. ಡಾ. ಪ. ಲ. ವೈದ್ಯ ಇವರು ಕೊಟ್ಟಿದ್ದಾರೆ.

ಎರಡು ಪ್ರಕಾರದ ರೂಪಗಳು ಕಂಡುಬರುತ್ತವೆ. ಮುಂದೆ त्थ ಸಂಯುಕ್ತಾಕ್ಷರ ಬದಲು ए ಕಾರವು ಹ್ರಸ್ವ इ ಕಾರಾಂತವಾಗಿರಬಹುದು, ಆದರೆ ಬಹುವಚನದಲ್ಲಿ ಹಾಗೆ ಆಗುವ ಕಾರಣವಿಲ್ಲ. ಆದರೂ ಆಗಿರುವದರಿಂದ ಅನಿಯಮಿತವೆಂದು ತಿಳಿಯಬೇಕು.

**ಗುಂಪು ೩ (ಅ ಕಾರಾಂತೇತರ ಧಾತುಗಳು) गा, ने. हो.**

| | | |
|---|---|---|
| ಉ. ದ್ವಿ. ತೃ. | **गाइत्थ, गाइत्था** | **गाइंसु** |
| | **नेइत्थ, नेइत्था** | **नेइंसु** |
| | **होत्था** § | **होइंसु** |

**ಭೂತಕಾಲದ ಕೆಲವು ಅನಿಯಮಿತ ರೂಪಗಳು.**

ಭೂತಕಾಲದ ಕೆಲವು ರೂಪಗಳು ಸಂಸ್ಕೃತದಿಂದ ನೇರವಾಗಿ ಬಂದಿರುತ್ತವೆ. ಅವು ಎಲ್ಲ ಪುರುಷ ವಚನಗಳಲ್ಲಿ ಒಂದೇಯಾಗಿರುವವು. ಇಂತಹ ರೂಪಗಳು ಬಹಳ ಕಡಿಮೆ ಇರುವವರಿಂದ ಅವುಗಳನ್ನು **ಅನಿಯಮಿತ**ವೆಂದು ತಿಳಿಯಬಹುದು.

| | | |
|---|---|---|
| **वयासी** | (ಸಂಸ್ಕೃತ **वच्**) | ಅಂದನು—ಳು—ರು—ಅಂದಿತು, ಅಂದವು |
| **अकासी** | ( ,, **कृ** ) | ಮಾಡಿದನು—ಇತ್ಯಾದಿ |
| **अहोसी** | ( ,, **भू** ) | ಇದ್ದನು—ಇತ್ಯಾದಿ |
| **अब्बवी** | ( ,, **ब्रू** ) | ಅಂದನು—ಇತ್ಯಾದಿ |
| **कासी** | ( ,, **कृ** ) | ಮಾಡಿದನು—ಇತ್ಯಾದಿ |
| **आसी** | ( ,, **अस्** ) | ಇದ್ದನು—ಇತ್ಯಾದಿ |

ಭೂತಕಾಲದಲ್ಲಿ ಕ್ರಿಯಾಪದವನ್ನು ಉಪಯೋಗಿಸುವದಕ್ಕಿಂತಲೂ ಕರ್ಮಣಿ ಪ್ರಯೋಗ ಮಾಡಿ ಭೂತಕರ್ಮಣಿ ಕೃದಂತ ವಿಶೇಷಣವನ್ನು ಉಪಯೋಗಿಸುವದೇ ಹೆಚ್ಚು ರೂಢಿಯಾಗಿದೆ. ಭೂ. ಕ. ಕೃ. ವಿಶೇಷಣದ ವಿಚಾರವನ್ನು ಮುಂದೆ ಹೇಳಿದೆ. ಸಂಸ್ಕೃತದಂತೆ ಅರ್ಧಮಾಗಧಿಯಲ್ಲಿ ಭೂತಕಾಲದ ಅನೇಕ ಬಗೆಗಳಿಲ್ಲ.

**ಶಬ್ದಸಂಗ್ರಹ**

**अणुसर** – ಅನುಸರಿಸು, ಆಶ್ರಯ ಹೊಂದು

**अप्प** – ಅರ್ಪಿಸು

**अभिगच्छ** – ಎರಿಹೋಗು, ಹಲ್ಲೆ ಮಾಡು

**आणावे** – ಆಜ್ಞಾಪಿಸು

§ **हो** ಧಾತುವಿಗೆ **इत्था** ಪ್ರತ್ಯಯ ಹಚ್ಚುವಾಗ **इ** ಲೋಪವಾಗುವದು. **इत्थ** ಪ್ರತ್ಯಯ ಹತ್ತಿದ ರೂಪಗಳು ಸಿಕ್ಕುವದಿಲ್ಲ. **होत्था** ಎಂಬ ರೂಪವೇ ಅನೇಕ ಸಲ ಎಲ್ಲ ಪುರುಷವಚನಗಳಲ್ಲಿಯೂ ಬರುವದು.

आयर – ಆಚರಿಸು
आलोग – ನೋಡು
आहर – ಊಟಮಾಡು
उवणी – ಅರ್ಪಿಸು
उवसंहर – ಉಪಸಂಹರಿಸು, ಹಿಂತೆಗೆದುಕೊ
कीण – ಕೊಂಡುಕೊಳ್ಳು
चिट्ठ – ಎದ್ದು ನಿಲ್ಲು, ಇರು
पढ – ಓದು
परिणी – ಮದುವೆಯಾಗು
परिवड्ढ – ಬೆಳೆ
पव्वय – ದೀಕ್ಷೆಹೊಂದು
पहा – ಬಿಡು
पील – ಪೀಡಿಸು
बीह – ಅಂಜು
बोल्ल – ಅನ್ನು
भम – ತಿರುಗು
भा – ಹೊಳೆ
भुंज – ಭೋಗಿಸು, ತಿನ್ನು
चोर – ತುಡುಗುಮಾಡು
जाण – ತಿಳಿ
जाय – ಬೇಡು
तर – ದಾಟು
तव – ತಪಸ್ಸು ಮಾಡು
धार – ಧರಿಸು
नंद – ಆನಂದಿಸು
निरूव – ಶೋಧಿಸು, ಹುಡುಕು
पच्चागच्छ – ತಿರುಗಿಬರು
पडिभास – ಹೇಳು, ಉತ್ತರ ಕೊಡು
पडिवज्ज – ಒಪ್ಪು, ಸ್ವೀಕರಿಸು
मर – ಸಾಯು
वड्ढ – ಬೆಳೆ
विलस – ಉಪಭೋಗಿಸು
विवज्ज – ಸಾಯು
वीसस – ನಂಬು, ವಿಶ್ವಾಸವಿಡು
सज्ज – ಸಿದ್ಧಗೊಳಿಸು
समायर – ಆಚರಿಸು
सद्दह – ನಂಬು
संलव – ಅನ್ನು, ಮಾತಾಡು
साहर – ಸಂವರಿಸು, ಹಿಂತೆಗೆ
हाय – ಬಿಡು

## ಅಭ್ಯಾಸ

(೧) ರೂಪಗಳನ್ನು ಗುರುತಿಸಿರಿ:—

तरिंसु, सुणित्था, कासी, गाहावईहिंतो, खज्जूओ, पंडियाणं, आहरिंसु, भलाउओ, वयासी घेणुंसि मट्टियाए, पावइ, ठायन्ति, रज्जूहिं, वड्डूए, जलकीलं, नंदित्था, विप्पेण, होत्था, धूलिंसि.

(೨) ರೂಪಗಳನ್ನು ಕೊಡಿರಿ :—

ಭೂತಕಾಲ ಏಕವಚನ — परिणी, वड्ढ, बीह, गा, हाय, अप्प,
बोल्ल, ए, ठा, हो.

,, ಬಹುವಚನ — उद्दे, खाय, वा, नंद, हो, वे, का,
पाउब्भव, भक्ख उवणी.

## ಭಾಷಾಂತರ

(೧) ಕನ್ನಡದಲ್ಲಿ ಭಾಷಾಂತರಿಸಿರಿ :—

(१) पुरा वाणारसीए नयरीए जमला विप्पा होत्था। (२) साहुणीओ संसारस्स अणिच्चया चिन्तिसु। (३) विवाहसमए गोरी देवयं वन्दित्था। (४) साहू पावयणं सुणित्था, संसारं चइंसु। (५) कुमारा उज्जाणाओ कयलीफलाइं आणिंसु, खाइंसु। (६) निवो वणे गच्छित्था, पसुं हणित्था। (७) लच्छी हरिस्स भज्जा होत्था। (८) धम्मं निसुणित्था लोया महावीरस्स खन्तीए संतीए थुइं करिंसु। (९) तेगिच्छी कुमरास्स अच्छीसुं ओसहं लिंपित्था, पडं बन्धित्था। (१०) सुण्हा सस्सुं उवट्टेइ। (११) कुमारा सालाए गच्छिसु। (१२) कुमारीओ आयरियं फलाइं उवणेन्ति। (१३) वणे वग्घा सिंहा मिया हणिंसु। (१४) महावीरस्स पावयणं सुणित्था, नरिन्दो एवं वयासी 'दिक्खं गेण्हामि'। (१५) समणा संसारसायरं तरिंसु, तरन्ति य। (१६) गाहावई उज्जाणाओ पुप्फाइं आणित्था, देवयं पूइत्था। (१७) अग्गी वणे डहइ, मिया बीहन्ति। (१८) भूमिपई अग्गमाहिसिं सुवण्णपट्टयं उवणेइ। (१९) विहगा रुक्खाणं साणुंसि अच्छिसु, फलाइं आहरिंसु। (२०) वणे सीया वग्घा सिंहा य पासित्था।

(೨) ಅರ್ಧಮಾಗಧಿಯಲ್ಲಿ ಭಾಷಾಂತರಿಸಿರಿ :—

(೧) ಕೌಮುದೀ ಮಹೋತ್ಸವದ ವೇಳೆಯಲ್ಲಿ ಹುಡಿಗೆಯರು ತೋಟದಲ್ಲಿ ಆಡಿದರು. (೨) ಜೇನ್ನೊಣಗಳು ಹೂಗಳಲ್ಲಿಯ ರಸವನ್ನು ಕುಡಿದವು. (೩) ಗೌರಿಯು ದೇವಾಲಯದಲ್ಲಿ ವೀಣೆಯನ್ನು ಬಾರಿಸಿದಳು. (೪) ವೈದ್ಯನು ರಾಜನ ಕೈಗೆ ಮಲಾಮು ಪಟ್ಟಿ ಕಟ್ಟಿದನು. (೫) ಸ್ತ್ರೀಯರು ನದಿಯಿಂದ ನೀರಿನ ಕೊಡಗಳನ್ನು ತಂದರು. (೬) ಚಂಪಾನಗರದಲ್ಲಿ ಶ್ರೇಣಿಕ ರಾಜನ

ಆನೆಯು ಬಂದಿತು. (೭) ಒಕ್ಕಲಿಗನಿಗೆ ಹೊಲದಲ್ಲಿ ಬಂಗಾರದ ಕೊಡವು ಸಿಕ್ಕಿತು. (೮) ರಾಜನ ಮಕ್ಕಳು ದೇವಾಲಯದಲ್ಲಿ ಹೋದರು ಮತ್ತು ಜಗಳಾಡಿದರು. (೯) ಬ್ರಾಹ್ಮಣರ ಹುಡಿಗೆಯು ಬಯ್ಯುವದಿಲ್ಲ. (೧೦) ಮಹಾವೀರನು ಗಂಗೆಯ ತೀರದಲ್ಲಿ ಗಿಡದ ನೆರಳಿನಲ್ಲಿ ಪ್ರವಚನವನ್ನು ಹೇಳಿದನು. (೧೧) ರಾಮನು ಸೇತುವೆ ಕಟ್ಟಿದನು ಮತ್ತು ಸೀತೆಯನ್ನು ಭಾರತದಲ್ಲಿ ತಂದನು. (೧೨) ಗಿಡದ ಮೇಲಿನ ಹಕ್ಕಿಯ ಗೂಡುಗಳು ಗಾಳಿಯಿಂದ ಬಿದ್ದವು. (೧೩) ಗೌರಿಯು ಗಂಡನೊಡನೆ ತೋಟದಲ್ಲಿ ಹೋದಳು. (೧೪) ಯುದ್ಧದಲ್ಲಿ ಶಂಕರನು ವಿಷ್ಣುವನ್ನು ಗೆದ್ದನು. (೧೫) ಹುಡಗರು ಬಟ್ಟಿಗೆ ಮಣ್ಣು ಹಚ್ಚುತ್ತಾರೆ. (೧೬) ಸೇವಕನು ರಾಜನ ಛತ್ರಿಯನ್ನು ಹಿಡಿದನು. (೧೭) ಗೋಪಾಲರು ಯಮುನೆಯ ತೀರದಲ್ಲಿ ಆಡಿದರು. (೧೮) ವೀರರು ಹುಲಿ ಸಿಂಹಗಳಿಗೆ ಅಂಜುವದಿಲ್ಲ. (೧೯) ಶಂಕರನ ಹೆಂಡತಿಯ ಹೆಸರು ಗೌರಿಯು. (೨೦) ಶ್ರೇಣಿಕನು ಕೌಶಾಂಬೀ ನಗರದ ಮೇಲೆ ಹಲ್ಲೆ ಮಾಡಿದನು.

## ಪಾಠ ೭

### ವಿಶೇಷಣಗಳು.

ಅರ್ಧಮಾಗಧಿಯಲ್ಲಿ ವಿಶೇಷಣಗಳಿಗೆ ಸ್ವತಂತ್ರ ಪ್ರಕ್ರಿಯೆಯಿಲ್ಲ. ಎಲ್ಲ ವಿಶೇಷಣಗಳೂ ನಾಮಗಳಂತೆ ಮೂರೂ ಲಿಂಗಗಳಲ್ಲಿ ಮತ್ತು ಎರಡೂ ವಚನಗಳಲ್ಲಿ ನಡೆಯುತ್ತವೆ. ಆದ್ದರಿಂದ ಇಲ್ಲಿ ಬೇರೆಯಾಗಿ ಅವುಗಳನ್ನು ನಡಿಸಿ ತೋರಿಸಿಲ್ಲ. **अ** ಕಾರಾಂತ ವಿಶೇಷಣಗಳು ಪುಲ್ಲಿಂಗ ಮತ್ತು ನಪುಂಸಕ ಲಿಂಗಗಳಲ್ಲಿ **अ** ಕಾರಾಂತ ನಾಮಗಳಂತೆಯೂ, ಸ್ತ್ರೀಲಿಂಗದಲ್ಲಿ **आ** ಕಾರಾಂತ ನಾಮಗಳಂತೆಯೂ ನಡೆಯುತ್ತವೆ.* ಅರ್ಧಮಾಗಧಿಯಲ್ಲಿ ವಿಶೇಷಣವು ಲಿಂಗವಚನ ವಿಭಕ್ತಿಗಳಲ್ಲಿ ಮುಂದಿನ ವಿಶೇಷ್ಯವನ್ನು ಅನುಸರಿಸುತ್ತದೆ. ಕನ್ನಡದಂತೆ ಹಾಗೆಯೆ ಉಳಿಯುವದಿಲ್ಲ.

ಉದಾ — **सुंदरो पुरिसो । सुकुमारा बाला । महुराइं फलाइं ।**

---

* **अ** ಕಾರಾಂತವಲ್ಲದ **इतर** ವಿಶೇಷಣಗಳು ಅಂತ್ಯ ಸ್ವರದ ಪ್ರಕಾರ ಆಯಾ ಲಿಂಗದ ಆ ಅಂತ್ಯ ಸ್ವರಾಂತ ನಾಮಗಳಂತೆ ನಡೆಯುತ್ತವೆ.

ವಿಶೇಷಣಗಳು ಮೂರು ಪ್ರಕಾರದವುಗಳಿರುವವು.

(೧) **ಗುಣವಾಚಕ** (೨) **ಸಂಖ್ಯಾವಾಚಕ** (೩) **ಕೃದಂತ ಅಥವಾ ಧಾತು ಸಾಧಿತ.** *

**(೧) ಗುಣವಾಚಕ ವಿಶೇಷಣಗಳು :—**

ಈ ವಿಶೇಷಣಗಳು ನಾಮದ ವಿಶಿಷ್ಟ ಗುಣವನ್ನು ತೋರಿಸುತ್ತವೆ. ಉದಾ – **फलं। पक्कं फलं। महुरं पक्कं फलं।** ಕೇವಲ **फलं** ಎಂದು ಹೇಳು ವದರಿಂದ ಫಲದ ವಿಶೇಷ ಜ್ಞಾನವಾಗುವದಿಲ್ಲ. **महुरं, पक्कं, फलं** ಎಂದಾಗ ಫಲದ ಬಗ್ಗೆ ವಿಶೇಷ ಗುಣ ತಿಳಿದು ಬರುವದು. ಆದ್ದರಿಂದ ಇವುಗಳಿಗೆ ಗುಣ ವಾಚಕ ವಿಶೇಷಣಗಳೆನ್ನುವರು.

**ಸ್ವಾಮಿತ್ವದರ್ಶಕ ವಿಶೇಷಣಗಳು.** ಇವು ಗುಣವಾಚಕಗಳ ಒಂದು ಪ್ರಕಾರವು. ಇವು ಕೆಳಗಿನಂತೆ ಸಿದ್ಧವಾಗುವವು.

(೧) ನಾಮ ಅಥವಾ ವಿಶೇಷಣಗಳಿಗೆ **आल, आलय** ಪ್ರತ್ಯಯ ಹಚ್ಚುವದು. ಉದಾ – **सद्द + आल = सद्दाल** ದನಿಯುಳ್ಳ; **महा + आलय = महालय.**

(೨) ನಾಮ ಅಥವಾ ವಿಶೇಷಣಗಳಿಗೆ **इल्ल** ಪ್ರತ್ಯಯ ಹಚ್ಚುವದು. ಉದಾ – **पढम + इल्ल = पढमिल्ल** ಮೊದಲಿನ, **माया + इल्ल = माइल्ल** ಮಾಯೆ ಯುಳ್ಳ ಅಥವಾ ಮಾಯಾವಿ.

(೩) ನಾಮ ಅಥವಾ ವಿಶೇಷಣಗಳಿಗೆ **अल्ल** ಪ್ರತ್ಯಯ ಹಚ್ಚುವದು. ಉದಾ – **महा + अल्ल = महल्ल, कढिण + अल्ल = कढिणल्ल** ಕಠಿಣವಾದ.

(೪) ನಾಮಗಳಿಗೆ **मन्त** ಅಥವಾ **वन्त** ಪ್ರತ್ಯಯ ಹಚ್ಚುವದು. ಉದಾ – **बुद्धि + मन्त = बुद्धिमन्त, चित्त + मन्त = चित्तमन्त, सील + वन्त = सीलवन्त, गुण + वन्त = गुणवन्त.**

(೫) ಧಾತುಗಳಿಗೆ **इम** ಅಥವಾ **इर** ಪ್ರತ್ಯಯಗಳನ್ನು ಹಚ್ಚುವದರಿಂದ ವಿಶೇಷಣಗಳಾಗುವವು. ಉದಾ – **खा + इम = खाइम** ತಿನ್ನಲು ಯೋಗ್ಯ, **भज्ज + इम = भज्जिम** ಮುಂ. ಕರ್ಮಣಿ ಕೃದಂತ ವಿಶೇಷಣಗಳಂತೆಯೆ

* **ಇವುಗಳ ವಿಚಾರವನ್ನು ಸ್ವತಂತ್ರವಾಗಿ ಮುಂದೆ ಮಾಡಿದೆ.**

**ಯಾವಾಗ ಯಾವ ಪ್ರತ್ಯಯ ಹಚ್ಚಬೇಕೆಂಬ ಬಗ್ಗೆ ನಿರ್ದಿಷ್ಟ ನಿಯಮಗಳಿಲ್ಲ.**

ಇವುಗಳನ್ನು ಉಪಯೋಗಿಸುವರು. **हस + इर = हसिर** ನಗುವ, **वेव + इर = वेविर** (ಅಂಜಿಕೆಯಿಂದ) ನಡುಗುವ. ಈ ರೂಪಗಳು ರೂಢಿಯನ್ನು ತೋರಿಸಲು ವಿಶೇಷವಾಗಿ ಉಪಯೋಗಿಸಲ್ಪಡುವವು.

**ತುಲನಾತ್ಮಕ ಪ್ರತ್ಯಯಗಳು – तर, तम.**

ವಿಶೇಷಣಗಳಿಗೆ **तर** ಅಥವಾ **यर**, **तराग** ಅಥವಾ **यराग**, **तराय** ಅಥವಾ **यराय** ಈ ಪ್ರತ್ಯಯಗಳನ್ನು ಹಚ್ಚುವದರಿಂದ '**तर**' ಭಾವವನ್ನು ಎಂದರೆ 'ಎರಡರಲ್ಲಿ ಒಂದು ಹೆಚ್ಚು' ಎಂಬ ಭಾವವನ್ನು ತೋರಿಸುವ ವಿಶೇಷಣಗಳಾಗುವವು. ಉದಾ – **कढिण + यर = कढिणयर**, **कढिण + यराग = कढिणयराग** ಹೆಚ್ಚು ಕಠಿಣ, **सुक + यर = सुकयर** ಹಾಗೆಯೆ **सुक्कयराग**, **किण्ह** (कृष्ण–ಕಪ್ಪು) ಇದರಿಂದ **किण्हयर**, **किण्हयराग** ಮುಂ.

ವಿಶೇಷಣಗಳಿಗೆ **तम** ಅಥವಾ **यम** ಪ್ರತ್ಯಯ ಹಚ್ಚುವದರಿಂದ '**तम**' ಭಾವವನ್ನು ಎಂದರೆ 'ಹಲವು ವಸ್ತುಗಳಲ್ಲಿ ಎಲ್ಲಕ್ಕೂ ಹೆಚ್ಚು' ಎಂಬ ಅರ್ಥವನ್ನು ತೋರಿಸುವ ವಿಶೇಷಣಗಳಾಗುವವು. ಉದಾ – **कढिण + यम = कढिणयम**, ಅದೇ ಪ್ರಕಾರ **सूक्कयम**, **किण्हयम** ಮುಂ.

ಕೆಲವು ತಾರತಮ್ಯಭಾವದ ರೂಪಗಳನ್ನು ಸಂಸ್ಕೃತದಿಂದ ನೇರವಾಗಿ ತೆಗೆದುಕೊಳ್ಳಲಾಗಿದೆ. ಸಂಸ್ಕೃತದ **ईयस्** ಮತ್ತು **इष्ठ** ಪ್ರತ್ಯಯಗಳನ್ನು ಹೊಂದಿದ ರೂಪಗಳನ್ನು ಹೀಗೆ ತೆಗೆದುಕೊಂಡಿರುವರು. ಉದಾ – श्रेयस् > **सेयं** ಹೆಚ್ಚು ಒಳ್ಳೆಯದು, श्रेष्ठ > **सेट्ठ** ಅತ್ಯುತ್ತಮ, कनीयस् > **कणीयस** ಹೆಚ್ಚು ಚಿಕ್ಕ, कनिष्ठ > **कणिट्ठ** ಎಲ್ಲಕ್ಕಿಂತ ಚಿಕ್ಕ, जेष्ठ > **जेट्ठ** ಎಲ್ಲರಿಗಿಂತ ಹಿರಿಯ, पापीयस् > **पावियंस** ಹೆಚ್ಚು ಪಾಪಿ, पापिष्ठ > **पाविट्ठ** ಎಲ್ಲಕ್ಕಿಂತ ಪಾಪಿ, ಮುಂ.

**ಸಂಖ್ಯಾವಾಚಕಗಳು —**

ಸಂಖ್ಯಾವಾಚಕಗಳು ಸಾಮಾನ್ಯವಾಗಿ (೧) ಗಣನೆ, (೨) ಕ್ರಮ, (೩) ಪಟ್ಟು ಅಥವಾ ಸಲ, (೪) ಆವೃತ್ತಿ, (೫) ಅಪೂರ್ಣಾಂಕ, ಮೊದಲಾದವುಗಳನ್ನು ಹೇಳಲು ಬರುವವು. ಇವುಗಳನ್ನು ಸ್ವತಂತ್ರವಾಗಿ ಬೇರೆ ಬೇರೆಯಾಗಿ ವಿಚಾರಿಸುವೆವು.

## (೧) ಗುಣವಾಚಕಗಳು :—

**एग** ಇದು ಮೂರೂ ಲಿಂಗಗಳಲ್ಲಿ ಬೇರೆಬೇರೆಯಾಗಿ ನಡೆಯುವದು. **दो, ति, चउ** (ನಾಲ್ಕು) ಇವು ಮೂರೂ ಲಿಂಗಗಳಲ್ಲಿ ಒಂದೇ ವಿಧವಾದ ರೂಪಗಳನ್ನು ಹೊಂದುವವು. ಐದರಿಂದ (**पंच**) ಹದಿನೆಂಟರ (**अट्ठारस**) ವರೆಗಿನ ಎಲ್ಲ ಸಂಖ್ಯಾವಾಚಕಗಳು **पंच** ದಂತೆ ಮೂರೂ ಲಿಂಗಗಳಲ್ಲಿ ಒಂದೇ ರೀತಿಯಾಗಿ ನಡೆಯುವವು. ಹತ್ತೊಂಬತ್ತರಿಂದ (**एगूणवीस**) ನಾಲ್ವತ್ತೆಂಟರ (**अट्ठयालीस**) ವರೆಗಿನ ಸಂಖ್ಯೆಗಳು ಪುಲ್ಲಿಂಗ, ನಪುಂಸಕಲಿಂಗಗಳಲ್ಲಿ **अ** ಕಾರಾಂತ ನಾಮಗಳಂತೆಯೂ ಸ್ತ್ರೀಲಿಂಗದಲ್ಲಿ **आ** ಕಾರಾಂತ ನಾಮಗಳಂತೆಯೂ ನಡೆಯುವವು. ನಾಲ್ವತ್ತರೊಂಬತ್ತರಿಂದ (**एगूणपन्नास**) ಐವತ್ತೆಂಟರ (**अट्ठावन्न**) ವರೆಗಿನ ಸಂಖ್ಯೆಗಳು **पंच** ದಂತೆ ನಡೆಯುವವು. ಐವತ್ತರೊಂಬತ್ತರಿಂದ (**एगूणसट्ठि**) ತೊಂಬತ್ತರೊಂಬತ್ತರ (**नवणउइ**) ವರೆಗಿನ ಸಂಖ್ಯೆಗಳು ಪ್ರಥಮಾ ಮತ್ತು ದ್ವಿತೀಯಾಗಳಲ್ಲಿ **इ** ಕಾರಾಂತ ನಪುಂಸಕ ಲಿಂಗದ ನಾಮಗಳಂತೆಯೂ ಉಳಿದ ವಿಭಕ್ತಿಗಳಲ್ಲಿ **ई** ಕಾರಾಂತ ಸ್ತ್ರೀಲಿಂಗ ನಾಮಗಳಂತೆಯೂ ನಡೆಯುವವು.

ಸಂಖ್ಯಾವಾಚಕಗಳ ವಚನಗಳ ಉಪಯೋಗವೂ ಅನಿಯಮಿತವಾಗಿರುವದು. ಸಾಮಾನ್ಯವಾಗಿ **एग** ಒಂದೇ ಏಕವಚನದಲ್ಲಿ ಉಳಿದವುಗಳೆಲ್ಲ ಬಹುವಚನದಲ್ಲಿ ನಡೆಯಬೇಕು. ಆದರೆ ಹತ್ತೊಂಬತ್ತರಿಂದ (**एगूणवीस**) ನಾಲ್ವತ್ತೆಂಟರ (**अट्ठयालीस**) ವರೆಗಿನ ಸಂಖ್ಯೆಗಳು ಮುಂದಿನ ವಿಶೇಷ್ಯವು ಬಹುಚನದಲ್ಲಿದ್ದರೂ ಏಕವಚನದಲ್ಲಿಯೆ ಉಪಯೋಗಿಸಲ್ಪಡುವವು. ಅದೇ ಪ್ರಕಾರ ಐವತ್ತರೊಂಬತ್ತರಿಂದ (**एगूणसट्ठि**) ತೊಂಬತ್ತರೊಂಬತ್ತರ (**नवणउइ**) ವರೆಗಿನ ಎಲ್ಲ ಸಂಖ್ಯೆಗಳು ಕೇವಲ ಏಕವಚನದಲ್ಲಿಯೆ ನಡೆಯುವವು. ನೂರರಿಂದ (**सय**) ಸಾಗರೋಪಮ (**सागरोवम**) ದ ವರೆಗಿನ ಸಂಖ್ಯೆಗಳು ಅವುಗಳ ಅಂತ್ಯಸ್ವರದಂತೆ ಎರಡೂ ವಚನಗಳಲ್ಲಿಯೂ ಬೇರೆ ಬೇರೆಯಾಗಿ ನಡೆಯುವವು. ಇವುಗಳನ್ನು ನಡೆಸುವದು ನೆನಪಿನಲ್ಲುಳಿಯಲು ಕೆಳಗಿನ ಕೊಷ್ಟಕವನ್ನು ನೋಡಬೇಕು.

| ಸಂಖ್ಯೆ | ಲಿಂಗ | ವಚನ |
|---|---|---|
| ೧ (**एग**) | ಮೂರೂ ಲಿಂಗಗಳಲ್ಲಿ ಬೇರೆ ಬೇರೆ ರೂಪಗಳು. | ಏಕವಚನದಲ್ಲಿ ಮಾತ್ರ |

೨ ರಿಂದ ೧೮  ಮೂರೂ ಲಿಂಗಗಳಲ್ಲಿ ಒಂದೇ ರೂಪ. ಬಹುವಚನದಲ್ಲಿ ಮಾತ್ರ
೨, ೩, ೪, ಬೇರೆ ಬೇರೆಯಾಗಿ
ನಡೆಯುವವು. ೫ ರಿಂದ ೧೮
ಒಂದೇ ವಿಧವಾಗಿ ನಡೆಯುವವು.

೧೯ ರಿಂದ ೪೮  ಪು. ನ. ಗಳಲ್ಲಿ **अ** ಕಾರಾಂತದಂತೆ. ಏಕವಚನದಲ್ಲಿ ಮಾತ್ರ.
ಸ್ತ್ರೀಲಿಂಗದಲ್ಲಿ **आ** ಕಾರಾಂತದಂತೆ.

೪೯ ರಿಂದ ೫೮  **पंच** ದಂತೆ ಮೂರೂ ಲಿಂಗಗಳಲ್ಲಿ. ಬಹುವಚನದಲ್ಲಿ ಮಾತ್ರ.
ಒಂದೇ ರೂಪ.* ಒಮ್ಮೊಮ್ಮೆ ಸ್ತ್ರೀ.ದಲ್ಲಿ
**आ** ಕಾರಾಂತದಂತೆ ನಡೆಯುವವು.

೫೯ ರಿಂದ ೯೯  ಮೂರೂ ಲಿಂಗಗಳಲ್ಲಿ ಒಂದೇ ರೂಪ. ಏಕವಚನದಲ್ಲಿ ಮಾತ್ರ.
ಪ್ರ. ಮತ್ತು ದ್ವಿ. ವಿಭಕ್ತಿಗಳಲ್ಲಿ
**इ** ಕಾರಾಂತ ನ. ಲಿಂಗ ನಾಮಗಳಂತೆ.
ಉಳಿದ ವಿಭಕ್ತಿಗಳಲ್ಲಿ **ई** ಕಾರಾಂತ
ಸ್ತ್ರೀಲಿಂಗದಂತೆ.

೧೦೦ ರಿಂದ **सागरोवम** ದ ವರೆಗೆ.  ಅಂತ್ಯ ಸ್ವರದಂತೆ ಮೂರೂ ಲಿಂಗಗಳಲ್ಲಿ ಒಂದೇ ರೂಪ.  ಎರಡೂ ವಚನಗಳಲ್ಲಿ ಮುಂದಿನ ವಿಶೇಷ್ಯದ ವಚನದಂತೆ.

**एग** ದಿಂದ **पंच** ದ ವರೆಗಿನ ಸಂಖ್ಯೆಗಳನ್ನು ಕೆಳಗೆ ನಡೆಸಿ ತೋರಿಸಿದೆ. ಇವುಗಳಿಗೆ ಸಂಬೋಧನವಿಲ್ಲ.

| | ಏಕವಚನದಲ್ಲಿ ಮಾತ್ರ. | | | ಬಹುಚನದಲ್ಲಿ ಮಾತ್ರ ಮೂರೂ ಲಿಂಗಗಳಲ್ಲಿ ಒಂದೇ ರೂಪ. | | | |
|---|---|---|---|---|---|---|---|
| | ಪು. | ಸ್ತ್ರೀ. | ನ. | | | | |
| | **एग** | **एक्क** | ಒಂದು | **दो** | **ति** | **चउ** | **पंच** |
| | ೧ | | | ೨ | ೩ | ೪ | ೫ |
| ಪ್ರ. | **एगो** | **एगा** | **एगं** | **दो, दुवे, दोण्णि** | **तओ तिण्णि** | **चत्तारो चउरो, चत्तारि** | **पंच** |
| ದ್ವಿ. | **एगं** | **एगं** | **एगं** | **दो, दुवे, दोण्णि** | **तओ तिण्णि** | **चत्तारो चउरो, चत्तारि** | **पंच** |

* ಡಾ. ಘಾಟಗೆಯವರ Introduction to Ardhamagadhi 2nd edition ಪುಟ ೧೪೦ ರಿಂದ ೧೪೨ ನೋಡಬೇಕು.

| | | | | | |
|---|---|---|---|---|---|
| ತೃ. एगेण एगाए एगेण | दोहिं | तिहिं | चउहिं | पंचहिं |
| ಪಂ. एगाओ एगाओ एगाओ | दोहिंतो | तिहिंतो | चऊहिंतो | पंचहिंतो |
| ಷ. एगस्स एगाए एगस्स | दोण्हं | तिण्हं | चउण्हं | पंचणं |
| एगंसि एगाए एगंसि | दोसु | तिसु | | पंचसु |
| एगम्मि एगम्मि | | | | |

## ಸಂಖ್ಯೆಗಳೂ ಅವುಗಳ ಹೆಸರುಗಳೂ

१ एग
२ दो
३ ति
४ चउ
५ पंच
६ छ
७ सत्त
८ अट्ठ
९ नव
१० दस
११ एक्कारस
एयारस
१२ बारस,दुवालस
१३ तेरस
१४ चोद्दस,चउद्दस
१५ पन्धरह
पन्नरस
१६ सोलह
१७ सत्तरस
१८ अठ्ठारस
१९ एगूणवीस
१९ अउणवीस
अउणवीसइ
२० वीस· वीसइ
२१ एक्कवीस
२२ बावीस
२३ तेवीस
२४ चउवीस
२५ पणवीस
२६ छव्वीस
२७ सत्तवीस
२८ अट्ठवीस
२९ अउणतीस
३० तीस
३१ एगतीस
एक्कतीस
३२ बत्तीस
३३ तेत्तीस
३४ चोत्तीस
चउत्तीस
३५ पणतीस
३६ छत्तीस
३७ सत्ततीस
३८ अट्ठतीस
३९ एगूणचत्तालीस
४० चत्तालीस
४१ एगचत्तालीस
एक्कचत्तालीय
इगयाल
४२ बायालीस
४३ तेयालीस
४४ चउयालीस
चोयालीस
४५ पणयालीस
पणयाल
४६ छायालीस
४७ सीतालीस
सत्तचत्तालीस
सत्तयालीस
४८ अट्ठयालीस
अढयाल
अट्ठचत्तालीस
४९ एगूणपन्नास
४९ एगूणपन्न
अउणपन्न
५० पन्नास
५१ एक्कावन्न
एगावन्न
५२ बावन्न
५३ तेवन्न
५४ चउवन्न
५५ पणवन्न
५६ छव्वन्न
५७ सत्तावन्न
५८ अट्ठवन्न
५९ एगूणसट्ठि
६० सट्ठि
६१ एगट्ठि
एगसट्ठि
६२ बासट्ठि
बावट्ठि
६३ तेसट्ठि
६४ चउसट्ठि
चउवट्ठि

| ಸಂಖ್ಯೆ | ಪ್ರಾಕೃತ |
|---|---|
| ೬೫ | पणसट्ठि, पन्नट्ठि |
| ೬೬ | छावट्ठि |
| ೬೭ | सत्तसट्ठि |
| ೬೮ | अट्ठसट्ठि, अडसट्ठि |
| ೬೯ | एगूणसत्तरि, अउणत्तरि |
| ೭೦ | सत्तरि |
| ೭೧ | एक्कसत्तरि, एगसत्तरि |
| ೭೨ | बावत्तरि |
| ೭೩ | तेवत्तरि |
| ೭೪ | चोवत्तरि |
| ೭೫ | पंचहत्तरि, पन्नत्तरि |
| ೭೬ | छावत्तरि |
| ೭೭ | सत्तहत्तरि |
| ೭೮ | अट्ठहत्तरि |
| ೭೯ | एगूणासीइ |
| ೮೦ | असीइ |
| ೮೧ | एगासीइ, एक्कासीइ |
| ೮೨ | बासीइ, बाइईसी |
| ೮೩ | तेसीइ |
| ೮೩ | तेयासी |
| ೮೪ | चउरासीइ, चोरासी |
| ೮೫ | पंचासीइ |
| ೮೬ | छलसीइ |
| ೮೭ | सत्तासीइ |
| ೮೮ | अट्ठासीइ |
| ೮೯ | एगूणनउइ |
| ೯೦ | नउइ |
| ೯೧ | एक्काणउइ, एक्कणउइ |
| ೯೨ | बाणउइ, बेणउइ |
| ೯೩ | तेणउइ |
| ೯೪ | चउणउइ |
| ೯೫ | पंचणउइ, पंचाणउइ |
| ೯೬ | छण्णउइ, छन्नउइ |
| ೯೭ | सत्ताणउइ, सत्तणउइ |
| ೯೮ | अट्ठणउइ, अट्ठाणउइ |
| ೯೯ | नवणउइ |
| ೧೦೦ | सय |
| ೧೦೦೦ | सहस्स, सहस्सी |

೧೦೦೦೦ सयसहस्स, सयसहस्सी, ೧೦೦೦೦೦ लक्ख, ೧೦೦೦೦೦೦೦ कोडी कोडाकोडी ( ಕೋಟ್ಯಾವಧಿ ) पलिओवम* ( ಅಸಂಖ್ಯ ) सागरोवम. ೧೦ ಕ್ಯೋಟ್ಯಾವಧಿ पल्योपमा.

## (೨) ಕ್ರಮವಾಚಕಗಳು —

ಸಂಖ್ಯಾವಾಚಕಗಳಿಗೆ '**म**' ಹಚ್ಚುವದರಿಂದ ಕ್ರಮವಾಚಕಗಳಾಗುವವು. ಉದಾ – अट्ठ + म = **अट्ठम** ಎಂಟನೆಯ. ಅದೇ ಪ್ರಕಾರ **सत्तम, नवम, दसम,** ಮುಂ. ಆದರೆ **ಒಂದರಿಂದ ಆರರ** ವರೆಗಿನ ಕ್ರಮವಾಚಕಗಳು ಸ್ವತಂತ್ರ ರೀತಿಯಿಂದಾಗಿರುವವು. ಉದಾ – **पढम** ಮೊದಲನೆಯ,

* ಒಂದು ಪಲ್ಯೋಪಮವೆಂದರೆ ನೂರು ಯೋಜನ ವಿಸ್ತೀರ್ಣವಾದ ಮೂರು ತಗ್ಗು ತೆಗೆದು ಅದರಲ್ಲಿ ಮರಿಗುರಿಯ ಕೂದಲುಗಳನ್ನು ಮಡಿಕೆಯಲ್ಲಿ ತುಂಬಿ ಹುಗಿಯಬೇಕು. ಮೇಲೆ ನೀರು ಹಾಯ್ದು ಹೋದರೂ ಒಳಗೆ ಒಂದು ಹನಿ ಇಳಿದಿರಬಾರದು. ಆ ಮೇಲೆ ನೂರು ವರ್ಷಕ್ಕೊಂದರಂತೆ ಕೂದಲುಗಳನ್ನು ತೆಗೆಯುತ್ತ ಹೋಗಲು ಎಲ್ಲ ಕೂದಲುಗಳು ತೀರಲು ಬೇಕಾಗುವ ಕಾಲಾವಧಿಯು. ಇಂತಹ ಕೋಟ್ಯಾವಧಿ ಪಲ್ಯೋಪಮಗಳಿಂದ ಸಾಗರೋಪಮ ಕಾಲಾವಧಿಯಾಗುವದು. ಕಾಲಮಾಪನದ ಅನಂತತೆಯನ್ನು ತೋರಿಸುವ ರೀತಿಯಿದೆನ್ನಬಹುದು.

**बीय, बिइय, दोच्च** ಎರಡನೆಯ, **तइय, तच्च** ಮೂರನೆಯ, **चउत्थ** ನಾಲ್ಕನೆಯ, **पंचम** ಐದನೆಯ, **छट्ठ** ಆರನೆಯ. ಕ್ರಮವಾಚಕಗಳು ಗುಣವಾಚಕ ವಿಶೇಷಣಗಳಂತೆ ಮೂರೂ ಲಿಂಗಗಳಲ್ಲಿ ಬೇರೆ ಬೇರೆಯಾಗಿ ನಡೆಯುವವು. ಉದಾ – **पढमो पुरिसो, तइया ललणा, छट्टं पुप्फं** ಮುಂ. ಪುಲ್ಲಿಂಗ ಮತ್ತು ನಪುಂಸಕಲಿಂಗಗಳಲ್ಲಿ **अ** ಕಾರಾಂತ ನಾಮಗಳಂತೆಯೂ ಸ್ತ್ರೀಲಿಂಗದಲ್ಲಿ **आ** ಕಾರಾಂತ ನಾಮಗಳಂತೆಯೂ **पढम, दोच्च, तच्च,** ಇವುಗಳು ನಡೆಯುವವು. ಉಳಿದವುಗಳಿಗೆ ಸ್ತ್ರೀಲಿಂಗದಲ್ಲಿ **ई** ಪ್ರತ್ಯಯವು ಹತ್ತಿ **ई** ಕಾರಾಂತ ಸ್ತ್ರೀಲಿಂಗ ನಾಮಗಳಂತೆ ನಡೆಯುವವು.

**(೩) ಪಟ್ಟು ಅಥವಾ ಸಲ–ಹೇಳುವ ಪ್ರಕಾರಗಳು –**

**सइं** ಒಂದು ಸಲ, **दोच्चं** ಅಥವಾ **दुक्खुत्तो** ಎರಡು ಸಲ, **तिक्खुत्तो** ಮೂರು ಸಲ. **एक, दो,** ಇವುಗಳನ್ನು ಬಿಟ್ಟು ಉಳಿದವುಗಳಿಗೆ **खुत्तो** ಪ್ರತ್ಯಯ ಹಚ್ಚುವದರಿಂದ ಈ ರೂಪಗಳಾಗುವವು.

**(೪) ಆವೃತ್ತಿ ಹೇಳುವ ರೂಪಗಳು –**

**विह** ಮತ್ತು **हा** ಪ್ರತ್ಯಯಗಳಿಂದ ಈ ರೂಪಗಳಾಗುವವು. ಉದಾ– **एगविह, दुविह, तिविह, चउविह, अट्ठहा** ಎಂಟು ಪ್ರಕಾರ, **सयहा** ನೂರು ವಿಧ, **सहस्सहा** ಮುಂ. ಸಂಖ್ಯಾವಾಚಕಗಳಿಗೆ **सो** ಹಚ್ಚುವದರಿಂದ ಕ್ರಿಯಾ ವಿಶೇಷಣಾವ್ಯಯಗಳಾಗುವವು. ಉದಾ – **सहस्ससो** ಸಾವಿರಾರು, **सयसो** ನೂರಾರು ಮುಂ.

**(೫) ಅಪೂರ್ಣಾಂಕವಾಚಕಗಳು –**

ಮುಂದಿನ ಪೂರ್ಣಾಂಕದ ಹಿಂದೆ ಅಪೂರ್ಣಾಂಕದರ್ಶಕ ಶಬ್ದವನ್ನು ಜೋಡಿಸಬೇಕು. ಉದಾ — **अद्ध + अट्ठम = अद्धट्ठम** ಏಳೂವರೆಯ, **अद्धपंचम, अद्धबारह** ಮುಂ. ಕನ್ನಡದಲ್ಲಿ ಪೂರ್ಣಾಂಕದ ಮುಂದೆ ಅಪೂರ್ಣಾಂಕವನ್ನು ಬರೆದು ಎರಡನ್ನೂ ಕೂಡಿಸಿದ ಅರ್ಥವನ್ನು ತಿಳಿಯುವರು. ಉದಾ— ಎಂಟುವರೆ, ಏಳುಮುಕ್ಕಾಲು ಇತ್ಯಾದಿ. ಆದರೆ ಅರ್ಧಮಾಗಧಿಯಲ್ಲಿ ಮುಂದಿನ ಪೂರ್ಣಾಂಕದಲ್ಲಿ ಹಿಂದಿನ ಅಪೂರ್ಣಾಂಕವನ್ನು ಕಳೆದು ಲೆಕ್ಕಮಾಡುವರು. ಉದಾ – **अद्धपंचम** ೫ – ½ ನಾಲ್ಕುವರೆಯ. ಒಮ್ಮೊಮ್ಮೆ ಅಪೂರ್ಣಾಂಕವು ಮುಂದೆಯೂ ಬರುವದು. ಉದಾ – **दिवड्ढ, दियड्ढ** ಒಂದುವರೆ ದಿವಸ.


ವಿಶೇಷಣಗಳು.
ಗುಣವಾಚಕ
(ವಿಶೇಷ್ಯದಂತೆ ನಡೆಯುವವು)
'ಉಳ್ಳ' ಎಂಬರ್ಥದ ಪ್ರತ್ಯಯಗಳು
(೧) ನಾಮ ಅಥವಾ ವಿಶೇಷಣ + आल, इल, अल
(೨) ನಾಮ + मन्त, वन्त
(೩) ಧಾತು इर, इम
ಸಂಖ್ಯಾವಾಚಕ
ಸಂಖ್ಯೆ
ಲಿಂಗ ವಚನಗಳ ಬಗ್ಗೆ ಹಿಂದಿನ ಕೋಷ್ಟಕ ನೋಡಬೇಕು.
ಆವೃತ್ತಿ ಪ್ರತ್ಯಯ विह. हा
ಕ್ರಮ ೧ ರಿಂದ ೬ ಸ್ವತಂತ್ರ ರೂಪಗಳು. ೭ ರಿಂದ ಮುಂದೆ म ಪ್ರತ್ಯಯ.
ಸಲ ಪ್ರತ್ಯಯ खुत्तो
ಅಪೂರ್ಣಾಂಕ
ಮುಂದಿನ ಪೂರ್ಣಾಂಕದ ಹಿಂದೆ ಅಪೂರ್ಣಾಂಕ ದರ್ಶಕ ಶಬ್ದವನ್ನು ಜೋಡಿಸಬೇಕು.
ಕೃದಂತ ಅಥವಾ ಧಾತುಸಾಧಿತ
ಮುಂದಿನ ಪಾಠಗಳಲ್ಲಿ ಬೇರೆ ಕೋಷ್ಟಕ ಕೊಟ್ಟಿದೆ.

## ಶಬ್ದ ಸಂಗ್ರಹ

**ऊईव** (ಅ.) ಅತೀವ, ಬಹಳ
**अगडदत्त** (ಪು.) ಒಂದು ಹೆಸರು
**अंजणगिरि** (ಪು.) ಒಂದು ಪರ್ವತ
**अणसण** (ನ.) ಉಪವಾಸ
**अणुपाल** (ಧಾ.) ಪಾಲಿಸು
**अणुव्वय** (ನ.) ಅನುವ್ರತ
**अणेग** (ವಿ.) ಅನೇಕ
**अपुत्त** (ವಿ.) ಮಕ್ಕಳಿಲ್ಲದ
**अमच्च** (ಪು.) ಪ್ರಧಾನ, ಮುಖ್ಯ ಮಂತ್ರಿ
**अमरसेन** (ಪು.) ಒಂದು ಹೆಸರು
**असरण** (ವಿ.) ನಿಸ್ಸಹಾಯ, ರಕ್ಷಕರಿಲ್ಲದ
**अहम्मिय** (ವಿ.) ಅಧಾರ್ಮಿಕ
**अहिय** (ವಿ.) ಅಧಿಕ,ಬಹಳ
**आगच्छ** (ಧಾ.) ಬರು
**आगिइ** (ಸ್ತ್ರೀ.) ಆಕೃತಿ
**आयाहिण (पयाहिण)** ಪ್ರದಕ್ಷಿಣೆ
**इत्थि** (ಸ್ತ್ರೀ.) ಹೆಂಗಸು
**उक्किट्ठ** (ವಿ.) ಉತ್ಕೃಷ್ಟ
**उग्ग** (ವಿ.) ಉಗ್ರ
**एगागी** (ವಿ) ಒಬ್ಬನೆ
**कंचणपुर** (ಪು.) ಒಂದುನಗರ
**कणयमंजरी** (ಸ್ತ್ರೀ.) ಒಬ್ಬ ಸ್ತ್ರೀ
**कणयमाला** (ಸ್ತ್ರೀ.) ಒಬ್ಬ ಸ್ತ್ರೀ
**कला** (ಸ್ತ್ರೀ.) ಕಲೆ
**कासव** (ಪು.) ಒಬ್ಬನ ಹೆಸರು
**केस** (ಪು.) ಕೂದಲು
**खंड** (ಪು.) ತುಣುಕು, ಭಾಗ
**गंधवदत्ता** (ಸ್ತ್ರೀ.) ಒಬ್ಬ ಸ್ತ್ರೀ
**गोयम** (ಪು.) ಗೌತಮ
**चक्कवट्टि** (ಪು.) ಚಕ್ರವರ್ತಿ
**चारु** (ವಿ.) ಸುಂದರ
**छंद** (ಪು. ನ.) ಛಂದಸ್ಸು, ರುಚಿ, ಪ್ರೀತಿ
**जयघोस** (ಪು.) ಒಬ್ಬನ ಹೆಸರು
**जियसत्तु** (ಪು.) ಒಬ್ಬ ರಾಜ
**जणणी** (ಸ್ತ್ರೀ.) ತಾಯಿ
**जलहर** (ಪು.) ಮೋಡ
**जाइअन्ध** (ವಿ.) ಹುಟ್ಟುಗುರುಡ
**जोव्वण** (ನ.) ತಾರುಣ್ಯ, ಯೌವನ
**तत्थ** (ಅ.) ಅಲ್ಲಿ
**तरु** (ಪು.) ಗಿಡ
**तव** (ನ.) ತಪಸ್ಸು
**तेलोक्क** (ಪು.) ಮೂರು ಲೋಕಗಳು
**तोय** (ನ.) ನೀರು
**थेव** (ವಿ.) ಸ್ವಲ್ಪ
**दंडग** (ಪು ) ಕೋಲು, ಬಡಿಗೆ
**दसरह** (ಪು.) ದಶರಥ
**दहिमुह** (ಪು.) ಒಬ್ಬ ರಾಜ
**दारग** (ನ.) ಬಾಲಕ
**दियह** (ಪು.) ದಿವಸ
**दीव** (ಪು.) ದ್ವೀಪ, ನಡುಗಡ್ಡೆ
**दुग्गम** (ವಿ.) ಹೋಗಲು ಕಠಿಣ

**दुम्मग** (ವಿ.) ದುಃಖಿಯಾದ
**दूय** (ಪು.) ದೂತ
**देवदत्त** (ಸ್ತ್ರೀ.) ಒಬ್ಬ ಸ್ತ್ರೀಯ ಹೆಸರು
**देवी** (ಸ್ತ್ರೀ.) ಮಹಾರಾಣಿ
**धारी** (ವಿ.) ಧರಿಸುವವನು-ಳು
**नंदीसर** (ಪು.) ಒಂದು ಸ್ಥಳದ ಹೆಸರು
**नम** (ಧಾ.) ನಮಸ್ಕರಿಸು
**नयण** (ನ.) ಕಣ್ಣು
**नागदत्त** (ಪು.) ಒಬ್ಬನ ಹೆಸರು
**नाणा** (ಅ.) ಅನೇಕ
**नाम** (ಅ.) ಎಂಬ
**निउण** (ವಿ.) ನಿಪುಣ, ಕುಶಲ
**पज्जुवास** (ಧಾ.) ಸೇವಿಸು
**पडिमा** (ಸ್ತ್ರೀ.) ಪ್ರತಿಮೆ, ಮೂರ್ತಿ
**पत्थिव** (ಪು.) ರಾಜ
**परम** (ವಿ.) ಬಹಳ
**परिवस** (ಧಾ.) ಇರು
**परिहा** (ಧಾ.) ಬಿಡು
**पवणचंड** (ಪು.) ಒಂದು ಹೆಸರು
**पव्वय** (ಪು.) ಪರ್ವತ
**पहाण** (ಪು.) ಕಲ್ಲು, ಪಾಷಾಣ
**पहाण** (ವಿ.) ಪ್ರಧಾನ, ಮುಖ್ಯ
**पासाय** (ಪು.) ಅರಮನೆ
**पिंगल** (ವಿ.) ಪಿಂಗಲ ಬಣ್ಣದ
**पुप्फदंती** (ಸ್ತ್ರೀ.) ಒಬ್ಬ ಸ್ತ್ರೀಯ ಹೆಸರು
**पेच्छ** (ಧಾ.) ನೋಡು
**बंधु** (ಪು.) ಬಂಧು
**बुद्धिमंत** (ವಿ.) ಬುದ್ಧಿವಂತ
**भवण** (ನ.) ಮನೆ
**भारुण्डपक्खि** (ಪು.) ಒಂದು ಪಕ್ಷಿ
**भीसण** (ವಿ.) ಭಯಂಕರ
**मउड** (ಪು.ನ.) ಕಿರೀಟ, ಮುಕುಟ
**मज्झ** (ನ.) ಮಧ್ಯ
**मंडलिय** (ಪು.) ಮಾಂಡಲಿಕ
+ **त्त** (ನ.) ಮಾಂಡಲಿಕತ್ವ
**मणोहर** (ವಿ.) ಮನೋಹರ, ಸುಂದರ
**मय** (ವಿ.) ಮಾಡಲ್ಪಟ್ಟ
**मयंकसेन** (ಪು.) ಒಂದು ಹೆಸರು
**मरण** (ನ.) ಮೃತ್ಯು
**महाजस** (ವಿ.) ಮಹಾಯಶಸ್ಸುಳ್ಳ
**महाराय** (ಪು.) ಮಹಾರಾಜ
**माला** (ಸ್ತ್ರೀ.) ಮಾಲೆ, ಹಾರ
**महिसी** (ಸ್ತ್ರೀ.) ರಾಣಿ
**मियादेवी** (ಸ್ತ್ರೀ.) ಒಬ್ಬ ಸ್ತ್ರೀ
**मेत्त** (ಅ.) ಮಾತ್ರ, ಕೇವಲ
**य** (ಅ.) ಮತ್ತು
**रइकर** (ಪು.) ಒಂದು ಹೆಸರು
**रक्खस** (ಪು.) ರಾಕ್ಷಸ
**रण्ण** (ನ.) ಅರಣ್ಯ
**रत्त** (ವಿ.) ರಕ್ತ ಕೆಂಪಾದ
**रयणजुय** (ವಿ.) ರತ್ನಗಳಿಂದ ಕೂಡಿದ
**राम** (ಪು.) ಒಂದು ಹೆಸರು
**रुइ** (ಸ್ತ್ರೀ.) ರುಚಿ

लायण्णवइ (ಸ್ತ್ರೀ.) ಲಾವಣ್ಯವತಿ
(ವಿ.) ಲೋಲುಪ
वरं (ಅ.) ಶ್ರೇಷ್ಠ, ಸುಂದರ
वरुण (ಪು.) ಒಂದು ಹೆಸರು
वसंत (ಪು.) ವಸಂತ ಋತು
वंसकुडंग (ನ.) ಬಿದಿರು ಮೆಳೆ
वास (ನ.) ಮಳೆ
वि (पि.) (ಅ.)
विक्कम (ಪು.) ವಿಕ್ರಮ. ಒಂದು ಹೆಸರು
विक्खाय (ವಿ.) ವಿಖ್ಯಾತ
विजयघोस (ಪು.) ಒಂದು ಹೆಸರು
विणय (ಪು.) ವಿನಯ
विण्हुसिरी (ಸ್ತ್ರೀ.) ಒಬ್ಬ ಸ್ತ್ರೀಯ ಹೆಸರು
विदब्भ (ಪು.) ವಿದರ್ಭ
विभूस (ಧಾ.) ಅಲಂಕರಿಸು
विमाण (ನ.) ಭವ್ಯ ಮಂದಿರ
वुड्ढ (ವಿ.) ವೃದ್ಧ
सग्ग (ಪು.) ಸ್ವರ್ಗ
संजय (ಪು.) ಸಾಧು
सणंकुमार (ಪು.) ಒಂದು ಹೆಸರು
सत्थ (ನ.) ಶಾಸ್ತ್ರ
सत्थवाह (ಪು.) ವ್ಯಾಪಾರಿ
सप्पुरिस (ಪು.) ಸತ್ಪುರುಷ
समीवं (ಅ.) ಸಮೀಪ
सव्व (ವಿ.) ಎಲ್ಲ
सामण्ण (ನ.) ಶ್ರಾಮಣ್ಯ, ಸನ್ಯಾಸ
सार (ಪು.) ಸಾರ, ಬಡ
सालि (ಪು.) ಭತ್ತ
सावय (ಪು.) ಗೃಹಸ್ಥ, ಶ್ರಾವಕ
साहु (ಪು.) ಸಾಧು
सिहर (ನ.) ಶಿಖರ
सीलवंत (ವಿ.) ಶೀಲವುಳ್ಳ
सुणंदा (ಸ್ತ್ರೀ.) ಒಬ್ಬ ಸ್ತ್ರೀ
सुर (ಪು.) ದೇವ
सुरनामा (ಸ್ತ್ರೀ.) ಒಂದು ಹೆಸರು
सुरसुंदरी (ಸ್ತ್ರೀ.) ದೇವಾಂಗನೆ
सुसाण (ನ.) ಸ್ಮಶಾನ
सुसील (ವಿ.) ಸುಶೀಲ
सेट्ठि (ಪು.) ಶೆಟ್ಟಿ, ವ್ಯಾಪಾರಿ
सेणावइ (ಪು.) ಸೇನಾಪತಿ
सेयविया (ಸ್ತ್ರೀ.) ಒಂದು ನಗರ
सेल (ಪು.) ಪರ್ವತ
सेवय (ಪು.) ಸೇವಕ
सेविया (ಸ್ತ್ರೀ.) ಸೇವಿಕಾ, ದಾಸಿ
हुंड (ವಿ.) ವಿದ್ರೂಪಿ

**ಅಭ್ಯಾಸ**

(೧) ಕೆಳಗಿನ ರೂಪಗಳನ್ನು ಗುರುತಿಸಿರಿ :—

**आसि, सुकुमारो, केवलीहिं, हत्थिरयणं, साहुणो, जुइमं, कम्मुणा, देवाणुप्पिओ, बन्धुवल्लहाणं, समाओ, होत्था, तिहुयणाणं, हणिसु, सुंदरं, अणवज्जेण, बुद्धिमन्तेहिं, हुंडं, सागरोवमं, कासि, मि.**

(೨) ರೂಪಗಳನ್ನು ಕೊಡಿರಿ.

ಪಂಚಮೀ ಏಕವಚನ (ಸ್ತ್ರೀಲಿಂಗ) सत्तावीस, पणतीस, इगयाल.
ತೃತೀಯಾ ಬಹುವಚನ (ಎಲ್ಲ ಲಿಂಗ) तेरस, सोलस, अट्ठारस.
ಷಷ್ಠೀ ಏಕವಚನ (ಪುಲ್ಲಿಂಗ) छावट्ठि, बावत्तरि.
ಸಪ್ತಮೀ ಬಹುವಚನ (ನಪುಂಸಕಲಿಂಗ) चउवन्न, अट्ठावन्न.

ಭಾಷಾಂತರ :—

(೧) ಕನ್ನಡದಲ್ಲಿ ಭಾಷಾಂತರಿಸಿರಿ :—

(१) दो संजया सुसाणे आगच्छिसु. वंकुसडंगे एगं दण्डगं पेच्छिसु। (२) कणयमंजरी निवं एवं वयासी– 'जगओ एगं अपुत्तो, बीयं वुड्ढो. तइयं दुग्गओ'। (३) अगडदत्तो थेवेणं कालेणं बावत्तरिं कलाइं गेण्हइ। (४) एगो बुद्धिमन्तो अमच्चपुत्तो अत्थि। (५) अजणगिरीसु चउसु, दहिमुहेसु सेलेसु सोलससु, बत्तीस रइकरेसु, नन्दीसरदीवमज्झंमि जिणपडिमा सन्ति। (६) दसरहनरिन्दस्स पुत्तो रामो जणयस्स कन्नं सीयं परिणेइ। (७) जणणीए मरणेण कन्ना असरणा होन्ति। (८) उज्जाणस्स समीवे पहाणसेट्ठिस्स अईव उत्तुंगं, विच्छिण्णं, रमणीयं च भवणं होत्था। (९) साहू नाणा रूइं च छन्दं च चयन्ति। (१०) कंचणपुरे नयरे नागदत्तो सत्थवाहो। रूवजोव्वण लायण्ण–सोहग्ग–गुणेहिं सुरसुंदरीणं वि अहिया विण्हुसिरी सत्थवाहस्स भारिया आसी। (११) मियादेवी आगिइमेत्तं जाइअन्धं दारगं पसवेइ। (१२) सेयवियाए नयरीए तेलोक्कसाररूवा विक्कमनरिंदस्स गंधव्वदत्ता नाम कन्ना होत्था। (१३) जणणी हुंडं दारगं पासित्था, दुम्मणा होत्था। (१४) सीया भीसणे रण्णे एगागी हिंडइ। (१५) एगो तावसकुमारो उग्गं तवं करेइ। (१६) देवो कुमारत्तं मंडलियत्तं पन्नासपन्नासं वाससहस्साइं, वासलक्खं च चक्कवट्टित्तं, वासलक्खं च समाण्णं अणुपालेइ। (१७) वसन्तपुरं नयरं, तत्थ वरुणो पहाणसेट्ठी, एगखंडं पहाणमयं देवउलं करेइ। (१८) विमाणाओ एगो वररयणमउडधारी सुरो आगच्छित्था। (१९) पत्थिवस्स पुप्फदती नाम सुसीला, चारुकन्ना उज्जाणाओ पुप्फाइं आणित्था, मालं करेत्था, केसे विभूसित्था य। (२०) साली भरेण, तोएण जलहरा, फलभारेण तरुसिहरा, विणएण य सप्पुरिसा नमन्ति।

(೨) ಅರ್ಧಮಾಗಧಿಗೆ ಭಾಷಾಂತರಿಸಿರಿ :—

(೧) ಸಣಂಕುಮಾರನ ಪತ್ನಿಯಾದ ಸುನಂದೆಯು ಬಹಳ ಸುಂದರಿಯಾಗಿದ್ದಳು. (೨) ವಿಜಯಘೋಷ ಮತ್ತು ಜಯಘೋಷರು ಅವಳಿ ಬಂಧುಗಳಾಗಿದ್ದರು. (೩) ಶ್ರಾವಕನು ಐದು ಅಣುವ್ರತಗಳನ್ನೂ ಏಳು ಶ್ಶಿಕ್ಷಾಪದಗಳನ್ನೂ ಪಾಲಿಸುತ್ತಾನೆ. (೪) ಉಜ್ಜಯನಿ ನಗರದಲ್ಲಿ ಜಿಯಸತ್ತುವೆಂಬ ಹೆಸರಾದ ರಾಜನಿದ್ದನು. (೫) ಭಾರುಂಡ ಪಕ್ಷಿಗೆ ಎರಡು ಮುಖಗಳು ಮತ್ತು ಮೂರು ಕಾಲುಗಳು ಇರುತ್ತವೆ. (೬) ಕೌಶಾಂಬೀ ನಗರದಲ್ಲಿ ಹದಿನಾಲ್ಕು ವಿದ್ಯೆಗಳಲ್ಲಿ ಪಾರಂಗತನಾದ ಕಾಶ್ಯಪನೆಂಬ ಬ್ರಾಹ್ಮಣನು ಇರುತ್ತಿದ್ದನು. (೭) ಹಸ್ತಿನಾಪುರದ ಮಹಾಯಶಸ್ವಿಯಾದ ಸುರನಾಮನೆಂಬ ರಾಜನ ಪತ್ನಿಯಾದ ಗಂಗಾ ಇವಳು ಸುಂದರಿಯೂ ಶೀಲವತಿಯೂ ಆಗಿದ್ದಳು. (೮) ಪವಣಚಂದನು ಎಲ್ಲ ಕಲೆ ಮತ್ತು ಶಾಸ್ತ್ರಗಳಲ್ಲಿ ನಿಪುಣನಾಗಿದ್ದನು. (೯) ಮೃಗಾಂಗಸೇನ ಮತ್ತು ಅಮರಸೇನರು ದೇವರ ಸೇವೆ ಮಾಡುತ್ತಿದ್ದರು. (೧೦) ಸೇವಕನು ರಾಜನಿಗೆ ಅಂದನು – ಮಹಾರಾಜ, ವಿದರ್ಭದಿಂದ ಇಬ್ಬರು ದೂತರು ಬಂದಿದ್ದಾರೆ. (೧೧) ಗೌತಮನು ದೇವಾಲಯದಲ್ಲಿ ಹೋದನು ಮತ್ತು ದೇವತೆಗೆ ಮೂರು ಪ್ರದಕ್ಷಿಣೆ ಹಾಕಿದನು. (೧೨) ರಾಜನು ಏಳುದಿನಗಳಿಗೊಮ್ಮೆ ಗುಡ್ಡದ ಮೇಲಿನ ಅರಮನೆಗೆ ಹೋಗುತ್ತಿದ್ದನು. (೧೩) ರಾಜನು, ರಾಣಿಯು, ಬ್ರಾಹ್ಮಣ, ಮತ್ತು ಸೇನಾಪತಿಯು ಸ್ವರ್ಗಕ್ಕೆ ಹೋದರು. (೧೪) ರಾಜನು ಕನಕಮಾಲೆಗೆ ಅನೇಕ ದಾಸಿಯರನ್ನು ಕೊಟ್ಟನು. (೧೫) ಸಣಂಕುಮಾರನು ಬಹು ಉತ್ಕೃಷ್ಟ ಮತ್ತು ರತ್ನ ಕೆಚ್ಚಿದ ಕಿರೀಟ ಧರಿಸಿದನು. (೧೬) ಸಾಧುಗಳು ಅತಿ ಉಗ್ರ ತಪಸ್ಸು ಮಾಡುತ್ತಾರೆ. (೧೭) ಶ್ರೇಣಿಕರಾಜನು ಒಂದು ತಿಂಗಳ ಉಪವಾಸ ಮಾಡಿದನು. (೧೮) ಅಗಡದತ್ತನು ಅಧಾರ್ಮಿಕನೂ ಸ್ತ್ರೀ ಲೋಲುಪನೂ ಇದ್ದನು. (೧೯) ರಾಕ್ಷಸನ ಕೂದಲು ಪಿಂಗಲವೂ, ಕಣ್ಣು ಕೆಂಪೂ ಇದ್ದವು. (೨೦) ದೇವತೆಯು ಎಪ್ಪತ್ತೆರಡು ಕಲೆಗಳಲ್ಲಿ ನಿಪುಣಳಾಗಿದ್ದಳು.

# ಪಾಠ ೮

## ಭವಿಷ್ಯತ್ಕಾಲವು

ಸಂಸ್ಕೃತದಲ್ಲಿ ಅರ್ಥವಿಶೇಷದಿಂದ ಭವಿಷ್ಯತ್ಕಾಲದಲ್ಲಿ ಎರಡು ಪ್ರಕಾರಗಳಿರುವವು. ಆದರೆ ಅರ್ಧಮಾಗಧಿಯಲ್ಲಿ ಹಾಗೇನೂ ಇಲ್ಲ. **इस्स** ಅಥವಾ **इहि** ಎಂಬುದನ್ನು ಧಾತುಗಳಿಗೆ ಹಚ್ಚಿ ಮುಂದೆ ವರ್ತಮಾನಕಾಲದ ಪ್ರತ್ಯಯಗಳನ್ನು ಹಚ್ಚಲು ಭವಿಷ್ಯತ್ಕಾಲದ ರೂಪಗಳು ಸಿದ್ಧವಾಗುವವು. ಉತ್ತಮ ಪುರುಷ ಏಕವಚನದಲ್ಲಿ **इस्सामि** ಎಂಬುದಲ್ಲದೆ **इस्सं** ಎಂದೂ ಪ್ರತ್ಯಯ ಹತ್ತುವದು. ಅಕಾರಾಂತೇತರ (**आ, इ, ओ**) ಧಾತುಗಳಿಗೆ **इहि** ಹಚ್ಚುವಾಗ ಹಿಂದಿನ **इ** ಕಾರವು ಲೋಪವಾಗುವದು. **इस्स** ಹಚ್ಚುವಾಗಲೂ ಒಮ್ಮೊಮ್ಮೆ ಈ ಲೋಪ ಬರುವದುಂಟು.

**ಭವಿಷ್ಯತ್ಕಾಲದ ರೂಪಗಳು ಸಿದ್ಧವಾಗುವ ರೀತಿ :—**

**हस + इस्स = हसिस्स; हस + इहि = हसिहि.**

**कर + इस्स = करिस्स: कर + इहि = काहि.** *

**ने + इस्स = नेइस्स; ने + इहि = नेहि.**

**गा + इस्स = गाइस्स; गा + इहि = गाहि.**

**हो + इस्स = होइस्स; हो + इहि = होहि.**

ಕೆಳಗೆ ಪ್ರತ್ಯಯಗಳನ್ನು ಸಿದ್ಧಮಾಡಿ ಕೊಟ್ಟಿದೆ. ಅವುಗಳನ್ನು ಹಚ್ಚುವದರಿಂದ ಭವಿಷ್ಯತ್ಕಾಲದ ರೂಪಗಳು ಸಿದ್ಧವಾಗುವವು.

**ಭವಿಷ್ಯತ್ಕಾಲದ ಪ್ರತ್ಯಯಗಳು.**

| | ಒಂದನೆಯ ರೀತಿ. | | ಎರಡನೆಯ ರೀತಿ. | |
|---|---|---|---|---|
| | ಏ. | ಬ. | ಏ. | ಬ. |
| ಉ. ಪು. | **इस्सामि, इस्सं** | **इस्सामो** | **इहामि, इहिमि** | **इहामो, इहिमो** |
| ಮ. ಪು. | **इस्ससि** | **इस्सह** | **इहिसि** | **इहिह** |
| ತೃ. ಪು. | **इस्सइ** | **इस्सन्ति** | **इहिइ, इही** | **इहिन्ति** |

---

* **इहि** ಪ್ರತ್ಯಯ ಹಚ್ಚುವಾಗ ಎರಡನೆಯ ಗುಂಪಿನ ಧಾತುಗಳು ಮೊದಲನೆಯ ಗುಂಪಿನ **अ** ಕಾರಾಂತಗಳಂತೆ ಅಥವಾ ಮೂರನೆಯ ಗುಂಪಿನ **अ** ಕಾರಾಂತೇತರಗಳಂತೆ ತಿಳಿಯಲ್ಪಡುವವು.

**ಭವಿಷ್ಯತ್ಕಾಲ ಪ್ರಕಾರ ೧ :—** (ಒಂದನೆಯ ಗುಂಪು.) **अ** ಕಾರಾಂತ ಧಾತುಗಳು.

| | ಏಕವಚನ | ಬಹುವಚನ |
|---|---|---|
| ಉ. ಪು. | कहिस्सामि, कहिस्सं | कहिस्समो |
| ಮ. ಪು. | कहिस्ससि | कहिस्सह |
| ತೃ. ಪು. | कहिस्सइ | कहिस्सन्ति |

**೨ ನೆಯ ಗುಂಪು.** कर– ಮಾಡು. **इ** ಕಾರಾಂತ ಧಾತುಗಳು.

| | | |
|---|---|---|
| ಉ. ಪು. | करिस्सामि, करिस्सं | करिस्सामो |
| ಮ. ಪು. | करिस्ससि | करिस्सह |
| ತೃ. ಪು. | करिस्सइ | करिस्सन्ति |

**೩ ನೆಯ ಗುಂಪು.** गा– ಹಾಡು. **आ** ಕಾರಾಂತ ಧಾತುಗಳು.

| | | |
|---|---|---|
| ಉ. ಪು. | गाइस्सामि, गाइस्सं | गाइस्सामो |
| ಮ. ಪು. | गाइस्ससि | गाइस्सह |
| ತೃ. ಪು. | गाइस्सइ | गाइस्सन्ति |

दे– ಕೊಡು. **ए** ಕಾರಾಂತ ಧಾತುಗಳು.

| | | |
|---|---|---|
| ಉ. ಪು. | देइस्सामि, देइस्सं | देइस्सामो |
| ಮ. ಪು. | देइस्ससि | देइस्सह |
| ತೃ. ಪು. | देइस्सइ | देइस्सन्ति |

हो– ಇರು, ಆಗು. **ओ** ಕಾರಾಂತ ಧಾತುಗಳು.

| | | |
|---|---|---|
| ಉ. ಪು. | होइस्सामि, होइस्सं | होइस्सामो |
| ಮ. ಪು. | होइस्ससि | होइस्सह |
| ತೃ. ಪು. | होइस्सइ | होइस्सन्ति |

**ಭವಿಷ್ಯತ್ಕಾಲ–** ಪ್ರಕಾರ ೨ *

| | | |
|---|---|---|
| ಉ. ಪು. | कहिहामि, कहिहिमि, कहिहं | कहिहामो, कहिहिमो |
| ಮ. ಪು. | कहिहिसि | कहिहिह |
| ತೃ. ಪು. | कहिहिइ, कहिही | कहिहिन्ति |

* ಉತ್ತಮ ಪುರುಷ ಏಕವಚನದಲ್ಲಿ ಎಲ್ಲ ಧಾತುಗಳಿಗೂ **इहं** ಪ್ರತ್ಯಯ ಹತ್ತಿದ ರೂಪಗಳು ಕಂಡುಬರುವವು. ಆದರೆ **इहं** ಪ್ರತ್ಯಯವನ್ನು ಮಾತ್ರ ಯಾರೂ ಹೇಳಿರುವ

कर

| | | |
|---|---|---|
| ಉ. ಪು. | काहामि, काहिमि, कहं | काहामो, काहिमो |
| ಮ. ಪು. | काहिसि | काहिह |
| ತೃ. ಪು. | काहिइ, काही | काहिन्ति, |

गा

| | | |
|---|---|---|
| ಉ. ಪು. | गाहामि, गाहिमि, गाहं | गाहामो, गाहिमो |
| ಮ. ಪು. | गाहिसि | गाहिह |
| ತೃ. ಪು. | गाहिइ | गाहिन्ति, |

दे

| | | |
|---|---|---|
| ಉ. ಪು. | देहिमि, देहामि, देहं | देहिमो, देहामो |
| ಮ. ಪು. | देहिसि | देहिह |
| ತೃ. ಪು. | देहिइ, देही | देहिन्ति |

हो

| | | |
|---|---|---|
| ಉ. ಪು. | होहिमि, होहामि, होहं | होहिमो, होहामो |
| ಮ. ಪು. | होहिसि | होहिह |
| ತೃ. ಪು. | होहिइ, होही | होहिन्ति. |

**ಅನಿಯಮಿತ ಭವಿಷ್ಯತ್ಕಾಲ :–**

ಕೆಲವು ಧಾತುಗಳಿಗೆ इस्स ಅಥವಾ इहि ಪ್ರತ್ಯಯ ಹತ್ತದೆ ಅವು ಸ್ವತಂತ್ರವಾಗಿ ಬದಲಾವಣೆಯನ್ನು ಹೊಂದಿ च्छ ಕಾರಾಂತವಾಗುವವು. ಮುಂದೆ ವರ್ತಮಾನಕಾಲದ ಪ್ರತ್ಯಯಗಳನ್ನು ಹಚ್ಚಲು ಭವಿಷ್ಯತ್ಕಾಲದ ರೂಪಗಳು ಸಿದ್ಧವಾಗುವವು. ಮತ್ತು ಉತ್ತಮ ಪುರುಷ ಏಕವಚನದಲ್ಲಿ मि ದ ಬದಲು ಕೇವಲ ಅನುಸ್ವಾರವಿರುವ ರೂಪವೂ ಬರುವದು.

रुय (रुद्) ಅಳು – रोच्छ

| | ಏ. | ಬ. |
|---|---|---|
| ಉ. ಪು. | रोच्छामि, रोच्छं | रोच्छामो |
| ಮ. ಪು. | रोच्छसि | रोच्छह |
| ತೃ. ಪು. | रोच्छइ | रोच्छन्ति |

---

ದಿಲ್ಲ. ಡಾ. ಘಾಟಗೆಯುವರು ಈ ಪ್ರತ್ಯಯ ಹತ್ತಿದ ರೂಪವನ್ನು ಕೊಟ್ಟಿಲ್ಲ. ಡಾ. ಪ. ಲ. ವೈದ್ಯರು इहि ಪ್ರತ್ಯಯದೊಡನೆ ಒಂದೇ ಒಂದು ಧಾತುವನ್ನು ನಡೆಸಿ ತೋರಿಸಿದ್ದಾರೆ. ಮತ್ತು ಅಲ್ಲಿ काहं ಎಂಬ ರೂಪವನ್ನು ಕೊಟ್ಟಿದ್ದಾರೆ.

ಹೀಗೆ 'ಚ್ಛ' ಕಾರಾಂತವಾಗುವ ಧಾತುಗಳು —*

| | |
|---|---|
| छिद > | मुय > |
| वय > | भुंज > **भोच्छ** |
| विय > **वेच्छ** | दे > **दच्छ** |
| सुण > **सोच्छ** | भिन्द > **भेच्छ** |
| गम > **गच्छ** § | |

## ಶಬ್ದಸಂಗ್ರಹ

**अच्छ** (ಧಾ.) ಇರು, ವಾಸಿಸು
**अट्ठाए** (ಅ.) ಸಲುವಾಗಿ
**अणुपालण** (ನ.) ಪಾಲಿಸುವದು
**अत्थ** (.ಪು) ಅರ್ಥ, ದುಡ್ಡು
**अथिर** (ವಿ.) ಅಸ್ಥಿರ, ಚಂಚಲ
**अलं** (ಅ.) ಸಾಕು
**अवस**(ವಿ.) ಅವಶ, ನಿರಾಧಾರ
**अह** (ಅ.) ಈಗ, ನಂತರ
**अहिंसा** (ಸ್ತ್ರೀ.) ಅಹಿಂಸೆ
**आवट्ट** (ಪು.) ಆವರ್ತ, ತಿರುಗಣಿಮಡು
**इदाणिं** (ಅ.) ಈಗ
**उतम** (ವಿ.) ಉತ್ತಮ
**उद्दाल** (ಧಾ.) ಅಗಿ, ಖರ್ಚುಮಾಡು
**उराल** (ವಿ.) ಉದಾರ
**उवणी** (ಧಾ.) ಸಮೀಪಕ್ಕೆ ಒಯ್ಯು, ಅರ್ಪಿಸು।
**उवद्दव** (ದಾ.) ಪೀಡಿಸು
**कणिट्ठ** (ವಿ.) ಕನಿಷ್ಟ, ಕಿರಿಯ
**कहं** (ಅ.) ಹೇಗೆ
**कहिं** (ಅ.) ಎಲ್ಲಿ
**कायमणि** (ಪು.) ಕಾಜಿನಮಣಿ
**कुम्मास** (ಪು.) ಉದ್ದು
**खण** (ಪು.) ಕ್ಷಣ
**गणिया** (ಸ್ತ್ರೀ.) ವೇಶ್ಯೆ
**गन्ध** (ಪು.) ಸುವಾಸನೆ
**गव्विय** (ವಿ.) ಗರ್ವಿತ
**घोर** (ವಿ.) ಭಯಂಕರ
**चित** (ನ.) ಚಿತ್ತ, ಮನಸ್ಸು
**जइ** (ಅ.) ರೆಅರ್ಥದ ಅವ್ಯಯ
**जंबु** (ಪು.) ಒಂದು ಹೆಸರು
**जया** (ಅ.) ಯಾವಾಗ
**जुत** (ವಿ.) ಯುಕ್ತ
**ठाण** (ನ.) ಸ್ಥಾನ
**तओ** (ಅ.) ಆಮೇಲೆ, ಆಗ

* **इस्स** ಅಥವಾ **इह** ಪ್ರತ್ಯಯ ಹತ್ತಿದ ರೂಪಗಳೂ ಇರುತ್ತವೆ. ಆದರೆ ಕಾರಾಂತ ರೂಪಗಳು ಈ ಧಾತುಗಳ ವೈಶಿಷ್ಟ್ಯಗಳಾಗಿವೆ.

§ **गच्छ** ಇದು ವರ್ತಮಾನಕಾಲದಲ್ಲಿಯೂ ಬರುತ್ತದೆ.

तक्कर (ಪು.) ಕಳ್ಳ
तया (ಅ.) ಆವಾಗ, ಆಗ
ता (ಅ.) ಆದ್ದರಿಂದ, जइ ಇದರ ಪೂರಕ ಅವ್ಯಯ
ताय (ಪು.) ತಾತ, ತಂದೆ
तावस (ಪು.) ತಪಸ್ವಿ
ति, त्ति (ಅ.) ಇತಿ, ಹೀಗೆ
दढपइन्न (ಪು.) ಧೃಢಪ್ರತಿಜ್ಞ
दव्व (ನ.) ದ್ರವ್ಯ
दाइय (ಪು.) ಆಪ್ತ, ಬಂಧು
दूरं (ಅ.) ದೂರ
देव (ಪು.) ದೇವ, ರಾಜ, ಪ್ರಭು
नच्च (ಧಾ.) ಕುಣಿ
नरेसर (ಪು.) ರಾಜ
निगूह (ಧಾ.) ಅಡಗು
निच्छय (ಪು.) ನಿಶ್ಚಯ
निव्वाण (ನ.) ನಿರ್ವಾಣ, ಮೋಕ್ಷ
पउर (ಪು.) ಪೌರ, ನಾಗರಿಕ
पच्छा (ಅ.) ನಂತರ, ಆಮೇಲೆ
पभाय (ಪು.ನ.) ಬೆಳಗು
पय (ನ.) ಪದ, ಸ್ಥಾನ
पवेस (ಪು.) ಪ್ರವೇಶ
पहाव (ಪು.) ಪ್ರಭಾವ
पि (ಅ.) ಸಹ, ಆದಾಗೂ
बंभण (ಪು.) ಬ್ರಾಹ್ಮಣ
बहु (ವಿ.) ಬಹಳ
बालग (ಪು.) ಬಾಲಕ
भाव (ಪು.) ಭಾವನೆ, ಇಚ್ಛೆ
भिक्खा (ಸ್ತ್ರೀ.) ಭಿಕ್ಷೆ
मज्झण्ह (ನ.) ಮಧ್ಯಾಹ್ನ
मयणमंजरी (ಸ್ತ್ರೀ.) ಒಂದು ಹೆಸರು
महाविदेह (ಪು.) ಒಂದು ಹೆಸರು
मिगया (ನ.) ಬೇಟೆ
मील (ಧಾ.) ಭೆಟ್ಟಿಯಾಗು, ಕೂಡು
मुहुत्त (ಪು.ನ.) ಮೂಹೂರ್ತ, ಕ್ಷಣ
मेहकुमार (ಪು.) ಒಂದು ಹೆಸರು
मोक्ख (ಪು.) ಮೋಕ್ಷ
मोल्ल (ನ.) ಬೆಲೆ
रम (ಧಾ.) ಆಡು, ಆಸಕ್ತನಾಗು
रयणी (ಸ್ತ್ರೀ.) ರಾತ್ರಿ
रायनगरी (ಸ್ತ್ರೀ.) ರಾಜಧಾನಿ
रायपुत्त (ಪು.) ರಾಜಪುತ್ರ
लाह (ಪು.) ಲಾಭ
वंतर (ಪು.) ವ್ಯಂತರ, ದೇವತೆಯ ಒಂದು ಪ್ರಕಾರ
वणयर (ಪು.) ವನಚರ, ಬೇಡ
वसुहा (ಸ್ತ್ರೀ.) ಭೂಮಿ
वार (ಪು.) ವೇಳೆ, ಸರತಿ
वावाय (ಧಾ.) ಕೊಲ್ಲು
वास (ಪು.) ವಾಸ, ವಸತಿ
विणस्स (ಧಾ.) ನಾಶವಾಗು
विण्णाण (ನ.) ವಿಜ್ಞಾನ
विलुंप (ಧಾ.) ತುಡುಗುಮಾಡು, ನಾಶವಾಗು
विहव (ಪು.) ವೈಭವ, ಸಂಪತ್ತು

सगरपुत्त (ಪು.) ಸಗರಪುತ್ರ, ಒಂದು ಹೆಸರು
संजम (ಪು.) ಸಂಯಮ, ಇಂದ್ರಿಯ ನಿಗ್ರಹ
संझा (ಸ್ತ್ರೀ.) ಸಂಧ್ಯಾ, ಸಂಜೆ
संपयं (ಅ.) ಈಗ
सरीर (ನ.) ಶರೀರ
सीयल (ವಿ,) ಶೀತಲ, ತಂಪಾದ
सुह (ವಿ.) ಶುಭ
सुह (ನ.) ಸುಖ
हव, हो, हु (ಧಾ.) ಆಗು. ಇರು

**ಅಭ್ಯಾಸ**

(೧) ರೂಪಗಳನ್ನು ಗುರುತಿಸಿರಿ :—

वोच्छामि, तरिस्सन्ति, भोच्छं, विणिस्सिहिसि, हविस्सइ, काहं, दाहामि, पविसिहिन्ति, कहिस्सह, अब्बवी, भेच्छन्ति, थुईए, डहिंसु, खज्जूए, दच्छन्ति, बाणारसीए, पेक्खिस्सइ, सोच्छह, वेमो, पायन्ति.

(೨) ರೂಪಗಳನ್ನು ಕೊಡಿರಿ :—

೧) ಭವಿಷ್ಯತ್ಕಾಲ ಉತ್ತಮ ಪುರುಷ ಏಕವಚನ. मोच्छ, भुंज, कुण
೨) ಭವಿಷ್ಯತ್ಕಾಲ ದ್ವಿತೀಯ ಪುರುಷ ಬಹುವಚನ. तर, हो, वेच्छ
(೩) ಭೂತಕಾಲ ಎಲ್ಲ ಪುರುಷಗಳ ಎರಡೂ ವಚನ. लिप, वड्ढ, ने
(೪) ಸಪ್ತಮೀ ಏಕವಚನ. कित्ति, गाहावइ, धाइ

(೧) ಕನ್ನಡಕ್ಕೆ ಪರಿವರ್ತಿಸಿರಿ :—

(१) रयणस्स मोल्लेण न कायमणिं कीणिस्सं। (२) रामस्स कणिट्ठो बंधू लक्खणो सीयाए सह रण्णे गच्छित्था। (३) ताय, असारे संसारे खणं पि न रमामि, ता पव्वइस्सामि। (४) अलं वणम्मि रयणीए वासेण, ता नयरिं पविसिहामो। (५) मा भमिहिसि भयावट्टे घोरे संसारसागरे। (६) अहिंसासच्चधम्मेण नरो निव्वाणपयं लहिस्सइ। (७) पढमं पत्थिवस्स चित्तभावं जाणामि, पच्छा दव्वलाहो हविस्सइ। (८) दढपइन्ने दारगे सुहेग परिवड्ढिस्सइ। (९) नरिन्दो कुमारं कलायरियस्स उवणेहिइ। (१०) कणयमाला भणइ – 'देव, नयरं दूरं अत्थि, कहं पायचारेण गच्छिस्सामि' (११) अवसो बालगो रण्णे वणयरेहिं वावाइस्सइ। (१२) बंभणा देवयाए पडिमं उत्तमं गंधजुत्तं सीयलं जलं सिंचन्ति। (१३) मुणी सामण्णस्स अणुपालणेण संसारसायरं तरिंसु, तरन्ति, तरिस्सन्ति य। (१४) दंडगस्स पहावेण

नरिन्दो होहामि । (१५) संझाए रुक्खम्मि मीलन्ति विहगा बहू । (१६) अत्थि य तत्थ रूव–लावण्ग-विण्णाण–गव्विया देवदत्ता नाम पहाण–गणिया। (१७) कंचणउरस्स निवो पढमनिसाए चेव रक्खसेण विणस्सइ। (१८) अत्थं चोरा विलुंपन्ति, उद्दालन्ति नरेसरा, वंतरा य निगूहन्ति, गेण्हन्ति अह दाइया। (१९) दो तिण्णिवारे जइ हिंडामि, ता कुम्मासा लहिस्सं। (२०) सुहमुहुत्ते सुविणयफलं कहिस्सामि ।

(೨) ಅರ್ಧಮಾಗಧಿಯಲ್ಲಿ ಭಾಷಾಂತರಿಸಿರಿ :–

(೧) ರಾಜಪುತ್ರನು ಅರಣ್ಯದಲ್ಲಿ ಹೋಗುವನು ಮತ್ತು ಬೇಟೆಯಾಡುವನು. (೨) ಅಗಡದತ್ತನು ಅಂದನು – 'ನಾನು ಮದನಮಂಜರಿಯನ್ನು ರಾಜಧಾನಿಗೆ ಒಯ್ಯುವೆನು.' (೩) ಮಹಾವಿದೇಹ ಸ್ವರ್ಗದಿಂದ ರಾಜನಿಗೆ ಮೋಕ್ಷವು ಸಿಗುವದು. (೪) ಉದಾರನಾದ ರಾಜನು ಪ್ರಜೆಗಳಿಗೆ ತೊಂದರೆ ಕೊಡುವದಿಲ್ಲ. (೫) ರಾಜನು ವೀಣೆ ಬಾರಿಸಿದರೆ ರಾಣಿಯು ನೃತ್ಯ ಮಾಡುವಳು. (೬) ಸಾಧುವು ಅರಣ್ಯದಲ್ಲಿ ಹೋಗುವನು ಮತ್ತು ತಪಸ್ಸು ಮಾಡುವನು ಮತ್ತು ಮೋಕ್ಷಗಳಿಸುವನು. (೭) ಬೆಳಗುಮುಂಜಾನೆ ಪುರೋಹಿತನ ಕನ್ಯೆಯು ತೋಟದಲ್ಲಿ ಹೋಗುವಳು ಮತ್ತು ಹೂಗಳನ್ನ ಹರಿದು ಕೊಳ್ಳುವಳು. (೮) (೮) ರಾಜನ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳದಿದ್ದರೆ ಚಕ್ರವರ್ತಿಯು ದಾಳಿಮಾಡುವನು. (೬) ಸಗರ ಪುತ್ರನು ಗಂಗಾನದಿಯನ್ನು ಭೂಮಿಯ ಮೇಲೆ ತರುವನು. (೧೦) ಆಚಾರ್ಯರು ಕೌಶಾಂಬಿ ನಗರಕ್ಕೆ ಯಾವಾಗ ಬರುವರೊ ಆಗ ನಾವು ದೀಕ್ಷೆ ತೆಗೆದುಕೊಳ್ಳುವೆವು. (೧೧) ಧರ್ಮವನ್ನು ಪಾಲಿಸದಿದ್ದರೆ ಆತ್ಮಕ್ಕೆ ಮೋಕ್ಷವು ಸಿಗಲಾರದು. (೧೨) ಶರೀರವು ನಾಶವಾಗುವದು; ಆದರೆ ಆತ್ಮವು ನಾಶ ಹೊಂದುವದಿಲ್ಲ. (೧೩) ವೈಭವವು ವಿದ್ಯುಲ್ಲತೆಯಂತೆ ಚಂಚಲವಾಗಿರುವದು. (೧೪) ಸಾಧುಗಳು ಒಂದೇ ಸ್ಥಳದಲ್ಲಿ ಮೂರು ದಿನ ಇರುತ್ತಾರೆ. (೧೫) ಮಧ್ಯಾಹ್ನದಲ್ಲಿ ತಾಪಸಕುಮಾರರು ಭಿಕ್ಷೆ ಬೇಡಲು ಊರಲ್ಲಿ ಬರುವರು. (೧೬) ಉಸುಯಾರ ನಗರದಲ್ಲಿ ಒಬ್ಬ ಬ್ರಾಹ್ಮಣನಿಗೆ ಇಬ್ಬರು ಹುಡುಗರು ಇದ್ದರು. (೧೭) ಸಂಯಮ ಮತ್ತು ತಪಶ್ಚರ್ಯೆಯಿಂದ ಮೋಕ್ಷವು ಸಿಗುವದು. (೧೮) ಜಂಬುವು ಮಹಾವೀರನಿಗೆ ಕೇಳಿದನು–" ಈಗ ಮೇಘಕುಮಾರನು ಎಲ್ಲಿ ಹೋಗುವನು ? " (೧೯) ನಾಗರಿಕರು ಕಳ್ಳರಿಗೆ ನಗರದಲ್ಲಿ ಪ್ರವೇಶವನ್ನು ಕೊಡುವದಿಲ್ಲ. (೨೦) 'ನಾನು ಹಿಂಸೆ ಮಾಡುವದಿಲ್ಲ' ವೆಂದು ನಿಶ್ಚಯ ಮಾಡಿದೆನು.

# ಪಾಠ. ೯

## ಸರ್ವನಾಮುಗಳು

ಅರ್ಧಮಾಗಧಿಯಲ್ಲಿ ಸರ್ವನಾಮಗಳೂ ನಾಮಪದಗಳಂತೆ ಸ್ವರಾಂತವಾಗಿಯೇ ಇರುವವು. ನಡೆಸುವಾಗ ಸ್ವಲ್ಪ ವ್ಯತ್ಯಾಸಗಳಾಗುವವು. ಸರ್ವನಾಮಗಳಿಗೆ ಸಂಬೋಧನವಿಲ್ಲ. ಉತ್ತಮ ಮಧ್ಯಮ ಪುರುಷಗಳ ಸರ್ವನಾಮಗಳು ಮೂರೂ ಲಿಂಗಗಳಲ್ಲಿ ಒಂದೇ ಪ್ರಕಾರವಿರುವವು. ಆದರೆ ತೃತೀಯಪುರುಷ, ಪ್ರಶ್ನಾರ್ಥಕ, ಸಂಬಂಧಾರ್ಥಕ ಮತ್ತು ದರ್ಶಕ ಮೊದಲಾದ ಸರ್ವನಾಮಗಳು ಮೂರೂ ಲಿಂಗಗಳಲ್ಲಿ ಬೇರೆ ಬೇರೆ ಪ್ರಕಾರವಾಗಿ ನಡೆಯುವವು. ಉತ್ತಮ ಮಧ್ಯಮ ಪುರುಷ ಸರ್ವನಾಮಗಳನ್ನು ನಡೆಸುವ ಅನೇಕ ರೂಪವಿಭೇದಗಳು ಕಂಡುಬರುವವು. ಆದರೆ ಅರ್ಧಮಾಗಧಿಯಲ್ಲಿ ಮುಖ್ಯವೆನಿಸಿದವುಗಳನ್ನಷ್ಟೆ ಇಲ್ಲಿ ಕೊಡಲಾಗಿದೆ.

**ಪುರುಷಾರ್ಥಕ ಸರ್ವನಾಮುಗಳು :—**

ಉತ್ತಮಪುರುಷ ಸರ್ವನಾಮ — **अम्ह** (अस्मद्) ನಾನು, ನಾವು.

| | ಏಕವಚನ | ಬಹುವಚನ |
|---|---|---|
| ಪ್ರ. | **अहं, हं** | **अम्हे, वयं** |
| ದ್ವಿ. | **ममं, मं, मे** | **अम्हे, णे** |
| ತೃ. | **मए, मइ, मे** | **अम्हेहि—अम्हेहिं** |
| ಪಂ. | **ममाओ, मत्तो, मए, मइ** | **अम्हेहिंतो** |
| ಷ. | **मम, ममं, मे, मह, मज्झ** | **अम्हाणं, अम्हं, णो** |
| ಸ. | **ममंसि, मइ** | **अम्हेसु—अम्हेसुं** |

ದ್ವಿತೀಯಪುರುಷ ಸರ್ವನಾಮ — **तुम्ह** (युष्मद्) ನೀನು, ನೀವು

| | ಏಕವಚನ | ಬಹುವಚನ |
|---|---|---|
| ಪ್ರ. | **तुमं, तं, तुमे** | **तुम्हे, तुज्झे, तुब्भे** |
| ದ್ವಿ. | **तुमं, ते** | **तुब्भे, तुज्झे, तुम्हे, भे** |
| ತೃ. | **तुमे, तुए, तए, तुमए** | **तुब्भेहिं—तुज्झेहिं—तुम्हेहिं** |
| ಪಂ. | **तुमाओ, तुमत्तो** | **तुब्भेहिंतो—तुम्हेहिंतो** |
| ಷ. | **तव, ते, तुब्भ, तुज्झ, तुम्ह** | **तुम्हाणं, तुम्हं, तुब्भं, भे, वो** |
| ಸ. | **तुमंसि, तइ, तुमंमि** | **तुब्भेसुं— तुज्झेसुं, तुम्हेसुं** |

## ತೃತೀಯಪುರುಷ ಸರ್ವನಾಮಗಳು– त (तद्)

ಅವನು, ಅವಳು, ಅದು, ಅವರು, ಅವು.

| | ಪುಲ್ಲಿಂಗ | | ಸ್ತ್ರೀಲಿಂಗ | | ನಪುಂಸಕಲಿಂಗ | |
|---|---|---|---|---|---|---|
| | ಏ. | ಬ. | ಏ. | ಬ. | ಏ. | ಬ. |
| ಪ್ರ. | सो, से | ते | सा | ताओ | तं | ताइं, ताणि |
| ದ್ವಿ. | तं | ते | तं | ताओ | तं | ताइं, ताणि |
| ತೃ. | तेणं, णेणं | तेहिं | ताए, तीए | ताहिं | तेणं, णेणं | तेहिं |
| ಪಂ. | ताओ | तेहिंतो | ताओ | ताहिंतो | ताओ | |
| ಷ. | तस्स, ते, से | तेसिं | तीए, तीसे, से | तासिं | तस्स, ते, से | तेसिं |
| ಸ. | तंसि, तम्मि | | तीए, तीसे | तासु | तंसि, तम्मि | तेसुं |

### ದರ್ಶಕ ಸರ್ವನಾಮಗಳು :–

ಅರ್ಧಮಾಗಧಿಯಲ್ಲಿ ದರ್ಶಕ ಸರ್ವನಾಮಗಳು एय ಮತ್ತು इम ಎಂದು ಎರಡೇ ಇರುವವು. ಮತ್ತು ಅವು ಕೆಳಗಿನಂತೆ ನಡೆಯುತ್ತವೆ.

एय (एतद्) ಇವನು, ಇವಳು, ಇದು.

| | ಪುಲ್ಲಿಂಗ | | ಸ್ತ್ರೀಲಿಂಗ | | ನಪುಂಸಕಲಿಂಗ | |
|---|---|---|---|---|---|---|
| ಪ್ರ. | एस, एसो, एसे | एए | एसा | एयाओ | एयं | एयाइं, एयाणि |
| ದ್ವಿ. | एयं | एए | एयं | एयाओ | एयं | एयाइं, एयाणि |
| ತೃ. | एएणं | एएहिं | एयाए | एयाहिं | एएणं | एएहिं |
| ಪಂ. | एयाओ | एएहिंतो | एयाओ | एयाहिंतो | एयाओ | एएहिंतो |
| ಷ. | एयस्स | एएसिं | एयाए | एयासिं | एयस्स | एएसिं |
| ಸ. | एयंसि, एयम्मि | एएसुं | एयाए | एयासुं | एयंसि, एयंमि | एएसुं |

इम ( संस्कृत-इदम् ) ಇವನು, ಇವಳು, ಇದು.

| | ಪುಲ್ಲಿಂಗ | | ಸ್ತ್ರೀಲಿಂಗ | | ನಪುಂಸಕಲಿಂಗ | |
|---|---|---|---|---|---|---|
| ಪ್ರ. | इमे, अयं, इणामो | इमे | इमा, इयं | इमाओ | इमं, इदं | इमाइं, इमाणि |
| ದ್ವಿ. | इम | इमे | इमं | इमाओ | इमं, इदं | इमाइं, इमाणि |
| ತೃ. | इमेण, णेण, इमिणा | इमेहिं | इमाए | इमाहिं | इमेण, णेण, इमिणा | इमेहिं |
| ಪಂ. | इमाओ | इमेहिंतो | इमाओ | इमाहिंतो | इमाओ | इमेहिंतो |
| ಷ. | इमस्स, अस्स, से | इमेसिं, एसिं | इमाए, इमाए, इमीसे, से | इमासिं | इमस्स, अस्स, से | इमेसिं, एसिं |
| ಸ. | इमंसि, अस्सि, इमम्मि | इमेसुं | इमीसि, इमीसे, इमाए | इमासुं | इमंसि, अस्सि, इमम्मि | इमेसुं |

## ಸಂಬಂಧಾರ್ಥಕ ಸರ್ವನಾಮ

ज ಎಂಬುದೊಂದೇ ಸಂಬಂಧಾರ್ಥಕ ಸರ್ವನಾಮವಿದ್ದು ಅದರ ರೂಪಗಳು ಕೆಳಗಿನಂತೆ ಆಗುತ್ತವೆ.

| | ಪುಲ್ಲಿಂಗ | | ಸ್ತ್ರೀಲಿಂಗ | | ನಪುಂಸಕಲಿಂಗ | |
|---|---|---|---|---|---|---|
| ಪ್ರ. | जे, जो | जे | जा | जाओ | जं | जाइं, जाणि |
| ದ್ವಿ. | जं | जे | जं | जाओ | जं | जाइं, जाणि |
| ತೃ. | जेण | जेहिं | जाए | जाहिं | जेण | जेहिं |
| ಪಂ. | जाओ | जेहिंतो | जाओ | जाहिंतो | जाओ | जेहिंतो |
| ಷ. | जस्स | जेसिं | जाए, जीसे | जासिं | जस्स | जेसिं |
| ಸ. | जंसि, जस्सि, जम्मि | जेसुं | जाए, जीसे | जासुं | जंसि, जस्सि, जम्मि | जेसुं |

## ಪ್ರಶ್ನಾರ್ಥಕ ಸರ್ವನಾಮ

ಅರ್ಧಮಾಗಧಿಯಲ್ಲಿ 'क' ಎಂಬುದೊಂದೇ ಪ್ರಶ್ನಾರ್ಥಕ ಸರ್ವನಾಮವಿದ್ದು ಅದು ಕೆಳಗಿನಂತೆ ನಡೆಯುವದು.

| | ಪುಲ್ಲಿಂಗ | | ಸ್ತ್ರೀಲಿಂಗ | | ನಪುಂಸಕಲಿಂಗ | |
|---|---|---|---|---|---|---|
| ಪ್ರ. | के, को | के | का | काओ | कं, किं | काइं, काणि |
| ದ್ವಿ. | कं | के | कं | काओ | कं, किं | काइं, काणि |
| ತೃ. | केण | केहिं | काए | काहिं | केण | केहिं |
| ಪಂ. | काओ | केहितो | काओ | काहितो | काओ | केहितो |
| ಷ. | कस्स | केसिं | कीसे, काए | कासिं | कस्स | केसिं |
| ಸ. | कंसि, कस्सि, कम्मि | केसुं | कीसे, काए | कासुं | कंसि कस्सि कम्मि | केसुं |

### ಶಬ್ದಸಂಗ್ರಹ

| | |
|---|---|
| अइ (ಅ.) ಅತಿ | अवराहि (ಪು.) ಅಪರಾಧಿ |
| अक्क (ಪು.) ಸೂರ್ಯ | आस (ಪು.) ಕುದುರೆ, ಅಶ್ವ |
| अमर (ಪು.) ದೇವ | ईसिं (ಅ.) ಸ್ವಲ್ಪ |

* अन्न ಎರಡನೆಯ, अवर ಬೇರೆಯ. पर ಇತರ, कयर ಎರಡರಲ್ಲಿ ಯಾವ, कयम ಅನೇಕದರಲ್ಲಿ ಯಾವ, सव्व ಎಲ್ಲ, एग ಒಂದು, स, सग ಸ್ವತಃ, इयर ಇತರ, ಮೊದಲಾದ ಸಾರ್ವನಾಮಿಕ ವಿಶೇಷಣಗಳು ಮೂರೂ ಲಿಂಗಗಳಲ್ಲಿ 'क' (किम्) ಪ್ರಶ್ನಾರ್ಥಕ ಸರ್ವನಾಮದಂತೆ ನಡೆಯುವವು. 'क' ಎಂಬುದಕ್ಕೆ ಮುಂದೆ चि ಅಥವಾ इ ಎಂಬ ಅವ್ಯಯವನ್ನು ಕೂಡಿಸಲು ಯಾವುದೊ ಒಂದು ಎಂಬ ಅನಿಶ್ಚಿತಾರ್ಥವು ಉಂಟಾಗುವದು. 'क' ಇದರ ವಿಭಕ್ತಿ ರೂಪದಲ್ಲಿ ಅಂತ್ಯದಲ್ಲಿ ಅನುಸ್ವಾರವಿದ್ದರೆ 'चि' ಯನ್ನೂ, ಅನುಸ್ವಾರ ಇಲ್ಲದಿದ್ದರೆ 'इ' ಯನ್ನೂ ಕೂಡಿಸಬೇಕು. ಉದಾ- "एस कोइ पर-पुरिसो जाइ" ಇವನು ಯಾವನೊ ಪರಪುರುಷನು ಹೋಗುತ್ತಿದ್ದಾನೆ. "भयवं, एत्थ रुक्खच्छायाए आगमित्तु वीसमह मए समाणं किंचि कालं" ಪೂಜ್ಯರೆ, ಇಲ್ಲಿ ಗಿಡದ ನೆರಳಲ್ಲಿ ಬಂದು ನನ್ನೊಡನೆ ಕೆಲಹೊತ್ತು ವಿಶ್ರಮಿಸಿರಿ. 'वि' (अपि) ಎಂಬ ಅವ್ಯಯ ಬಂದರೂ ಇದೇ ರೀತಿಯ ಅರ್ಥವಾಗುವದು. "को वि मूढो पुरिसो कस्स वि धणियस्स सेवगो भूओ" ಯಾವನೊ ಮೂರ್ಖನು ಯಾವನೊ ಧನಿಕನ ಸೇವಕನಾದನು. "मग्गे च तेण का वि निम्मलजलपुण्णा नई दिट्ठा" ಮಾರ್ಗದಲ್ಲಿ ಅವನಿಂದ ನಿರ್ಮಲ ಜಲದಿಂದ ತುಂಬಿದ ಯಾವುದೊ ಒಂದು ನದಿಯು ನೋಡಲ್ಪಟ್ಟಿತು. ಮುಂ.

**उवद्दव** (ಪು.) ಉಪದ್ರವ, ಪೀಡೆ
**कंचुलिया** (ಸ್ತ್ರೀ.) ಹಾವಿನ ಪರೆ
**कज्ज** (ನ.) ಕಾರ್ಯ
**कत्तो** (ಅ.) ಎಲ್ಲಿಂದ
**कत्थ** (ಅ.) ಎಲ್ಲಿ
**किंचि** (ಅ.) ಕಿಂಚಿತ ಸ್ವಲ್ಪಾದರೂ
**कीस** (ಅ.) ಏಕೆ
**कुलवन्त** (ವಿ.) ಉತ್ತಮ ಕುಲದ
**कुवलय** (ನ) ಕಮಲ
**गइ** (ಸ್ತ್ರೀ.) ಗತಿ
**गोवाल** (ಪು.) ಗೋಪಾಲ
**घिणा** (ಸ್ತ್ರೀ) ಘೃಣಾ, ದಯೆ
**चित** (ಧಾ.) ಚಿತ್ರಿಸು
**चेडी** (ಸ್ತ್ರೀ ) ದಾಸಿ
**चोर** (ಪು.) ಕಳ್ಳ
**जक्ख** (ಪು.) ಯಕ್ಷ
**जम्म** (ನ.) ಜನ್ಮ
**जा** (ಧಾ.) ಹೋಗು
**जाव** (ಅ.) ಎಲ್ಲಿಯವರೆಗೆ, ಯಾವಾಗ

**डाइणी** (ಸ್ತ್ರೀ.) ಡಾಕಿನಿ
**तहावि** (ಅ.) ಆದಾಗ್ಯೂ
**ताव** (ಅ.) ಆಗ, ಅಲ್ಲಿಯವರೆಗೆ
**तिविह** (ವಿ.) ಮೂರು ಪ್ರಕಾರದ
**थोक** (ವಿ.) ಸ್ವಲ್ಪ
**दच्छ** (ಧಾ.) ನೋಡು (ಭವಿಷ್ಯತ್ ರೂಪ)
**दमयंती** (ಸ್ತ್ರೀ.) ದಮಯಂತಿ ಒಂದು ಹೆಸರು
**दुक्ख** (ನ.) ದುಃಖ
**दुत्तर** (ವಿ.) ದುಸ್ತರ, ದಾಟಲು ಕಠಿಣ
**दुल्लह** (ವಿ.) ದುರ್ಲಭ, ದೊರಕಿಸಲು ಕಠಿಣ
**धण** (ಪು.) ಒಂದು ಹೆಸರು
**नवकार** (ಪು ) ನಮಸ್ಕಾರ
**नारी** (ಸ್ತ್ರೀ.) ನಾರಿ, ಸ್ತ್ರೀ
**नाह** (ಪು.) ನಾಥ, ಪತಿ
**निवड** (ಧಾ.) ಬೀಳು
**नु** (ಅ.) ನಿಜವಾಗಿ
**पक्खि** (ಪು.) ಪಕ್ಷಿ, ಹಕ್ಕಿ
**पच्चक्ख** (ವಿ.) ಪ್ರತ್ಯಕ್ಷ
**पच्छात्ताप** (ಪು.) ಪಶ್ಚಾತ್ತಾಪ
**पंजर** (ನ.) ಪಂಜರ, ಬಲೆ
**पडिनियत्त** (ಧಾ.) ತಿರುಗಿಬರು
**पत्थ** (ಧಾ.) ಪಾರ್ಥಿಸು, ಬೇಡು
**पयड** (ಧಾ.) ಪ್ರಕಟಿಸು
**परं** (ಅ.) ಆದರೆ
**पहव** (ಧಾ.) ಸಮರ್ಥನಾಗು
**पाव** (ನ.) ಪಾಪ
**पुणो** (ಅ.) ಮತ್ತೆ
**बाला** (ಸ್ತ್ರೀ.) ಬಾಲಿಕೆ
**भत्त** (ನ.) ಅನ್ನ
**भूव** (ಧಾ.) ಇರು, ಆಗು
**भुवण** (ನ.) ಜಗತ್ತು, ಮನೆ
**भोगि** (ಪು.) ಸರ್ಪ
**मऊर** (ಪು.) ನವಿಲು

मगहापुर (ನ.) ಒಂದು ನಗರದ ಹೆಸರು
मारि (ಪು.) ಒಂದು ರೋಗ, ಮೃತ್ಯು
रहनेमि (ಪು.) ಒಂದು ಹೆಸರು
रायकन्ना (ಸ್ತ್ರೀ.) ರಾಜಕನ್ಯೆ
रायमग्ग (ಪು.) ರಾಜಮಾರ್ಗ
रायहंस (ಪು.) ರಾಜಹಂಸ
वग्ग (ಪು.) ವರ್ಗ, ಸಮಾಜ
वड (ಪು) ಆಲದಗಿಡ
वर (ವಿ.) ಶ್ರೇಷ್ಠ
व्व (ಅ.) ಅಂತೆ, ಹಾಗೆ
वाय (ಪು.) ಗಾಳಿ
विसाल (ವಿ.) ವಿಶಾಲ, ದೊಡ್ಡ
वेग (ಪು.) ವೇಗ, ಗತಿ
वेसमण (ಪು.) ಒಂದುಹೆಸರು
वेयाल (ಪು.) ವೇತಾಳ
सइ, सइं (ಅ.) ಒಮ್ಮೆ
सइंवर (ಪು.) ಸ್ವಯಂವರ
संदेह (ಪು.) ಸಂಶಯ
संनिरुह (ಧಾ.) ತಡೆ, ಅಡ್ಡಿಯಾಗು
सब्भाव (ಪು.) ಸದ್ಭಾವ, ನಿಜಸಂಗತಿ
समागमण (ನ.) ಸಮಾಗಮ, ಭೆಟ್ಟಿ
समुद्द (ಪು.) ಸಮುದ್ರ
सयल (ವಿ.) ಸಕಲ, ಎಲ್ಲ
सवर (ಪು.) ಶಬರ, ಬೇಡ
सलिल (ನ.) ನೀರು
सु (ವಿ.) ಒಳ್ಳೆಯ
सुंदर (ವಿ.) ಸುಂದರ
हत्थि (ಪು.) ಆನೆ
हढ (ಪು.) ಒಂದು ವನಸ್ಪತಿ
हिंस (ಧಾ.) ಹಿಂಸಿಸು
हेट्ठा (ಅ.) ಕೆಳಗೆ

## ಅಭ್ಯಾಸ

(೧) ಕೆಳಗಿನ ರೂಪಗಳನ್ನು ಗುರುತಿಸಿರಿ :—

**मे, तेसुं, णो, णेणं, इमाए, काओ, अयं, मत्तो, एयासुं, जाइं, केसिं, मइ, इमाणि, जंसि, कं, तासिं, से, तइ, एए, जेसुं.**

(೨) ರೂಪಗಳನ್ನು ಕೊಡಿರಿ :—

ಸಪ್ತಮೀ ಏಕವಚನ **अम्ह**, **त** (ಸ್ತ್ರೀ.) **ज** (ಪು.)
ತೃತೀಯಾ ಏಕವಚನ **तुम्ह**, **क** (ನ.) **इम** (ಸ್ತ್ರೀ.)
ಪ್ರಥಮಾ ಬಹುವಚನ **एय** (ಮೂರೂ ಲಿಂಗಗಳಲ್ಲಿ) **त** (ಪು.)
ಪಂಚಮೀ ಏಕವಚನ **ज, क** (ನಪು. ಮತ್ತು ಸ್ತ್ರೀ.)

## ಭಾಷಾಂತರ

(೧) ಕನ್ನಡಕ್ಕೆ ಪರಿವರ್ತಿಸಿರಿ :—

(१) सा चिन्तेइ–' जो मम पुत्तं आणेइ सो जं चेव पत्थइ, तं चेव तस्स देइस्सं ' (२) जाव अहं जणयस्स भत्तं आणेमि, ताव रायमग्गे एगो पुरिसो अइवेगेण आसं नेइ, न से थोवा वि विणा अत्थि। (३) मगहापुरम्मि मम जणयस्स कणिट्ठो बंधू धणसत्थवाहो सेट्ठी अत्थि । सो य तुम्हं अम्हं च समागमणं सुंदरं मन्निस्सइ । (४) इमं च मे अत्थि, इमं च मे नत्थि । (५) जइ तं काहिसि भावं जा जा दच्छसि नारिओ, वायाइद्धो व्व हडो अट्ठिरो भविस्ससि । (६) गोवालदारगा तं पुच्छन्ति–' को तुमं ? कस्स पुत्तो ? काओ नयराओ आगच्छसि ? (७) नरिंदो देविं भणइ ' एयस्स वडस्स हेट्ठा हत्थी जाहिइ, तओ साहं अहं गेण्हिस्सामि '। (८) सो वेइ ' पडिकम्मं को कुणइ रण्णे मियपक्खीणं '। (९) किं अत्थि कोइ भुवणम्मि जस्स जायन्ति नेव पावाइं। (१०) जो न हिंसइ विविहेणं तं वयं बूम माहणं । (११) को चित्तेइ मऊरं, गइं च को कुणइ रायहंसाणं, को कुवलयाणं गन्धं, विणयं च कुलवन्ताणं । (१२) चोरो अगडदत्तं एवं वयासी–' सुपुरिस, कत्तो सि तुमं, केण वा कज्जेण चिट्ठसि । (१३) कमल व्व किं नु एसा, सरस्सई किं व पच्चक्खा । (१४) जा जा गच्छइ रयणी न सा पडिनियत्तइ । (१५) जो पुरिसो जुवइवग्गे सब्भावं जाइ सो दुत्तरदुक्खसमुद्दे निवडइ, एए संदेहो नत्थि । (१६) अगडदत्तो भणइ–' का सि तुमं वरबाले, ईसिं पयडेसि कीस अहाणं'। (१७) जइ होन्ति गुणा तो किं कुलेण ? (१८) हा नाह ! किं तुज्ज होमि भारकरी ? न हि भोगिणो कया वि नियकंचुलिया कुणइ भारं। (१९) ता किं करेमि, कत्थ गच्छामि, का मे गई ? (२०) न य तस्स किंचि पहवइ डाइणि-वेयाल-जक्ख-मारिभयं, नवकारपहावेण नासंति सयलाइं दुक्खाइं।

(೨) ಅರ್ಧಮಾಗಧಿಯಲ್ಲಿ ಭಾಷಾಂತರಿಸಿರಿ :—

(೧) ನಾನು ಮುಂಜಾನೆ ಸೂರ್ಯನಿಗೆ ನಮಸ್ಕಾರ ಮಾಡುತ್ತೇನೆ. (೨) " ನನ್ನಿಂದ ನಿನಗೆ ತೊಂದರೆಯಾಗುವದಿಲ್ಲ" ಎಂದು ರಥನೇಮಿಯು ಅಂದನು. (೩) ನಾವು ನದಿಯ ದಂಡೆಗೆ ಹೋದೆವು ಮತ್ತು ದೇವರ ಪೂಜೆ

ಮಾಡಿದೆವು. (೪) ಅರಣ್ಯದಲ್ಲಿ ಒಬ್ಬ ಯಕ್ಷನು ಬಂದನು ಮತ್ತು ಅವನು ರಾಜಕನ್ನೆಗೆ ನೀರು ಕೊಟ್ಟನು. (೫) ಅಗಡದತ್ತನು ಯಾವ ಮನುಷ್ಯನನ್ನು ನೋಡಿದನೊ ಅವನು ಸಾಧುವಾಗಿದ್ದಿಲ್ಲ; ಕಳ್ಳನಾಗಿದ್ದನು. (೬) ಯಾವನು ಹುಡುಗನನ್ನು ತರುವನೊ ಅವನಿಗೆ ನಾನು ಅರ್ಧರಾಜ್ಯವನ್ನು ಕೊಡುವೆನು. (೭) ಯಾವನು ದೀಕ್ಷೆಯನ್ನು ಹೊಂದುತ್ತಾನೆ ಆದರೆ (ಆಮೇಲೆ) ಪಶ್ಚಾತ್ತಾಪ ಪಡುವದಿಲ್ಲವೊ ಅವನಿಗೆ ನಾನು ಸಾಧುವೆನ್ನುತ್ತೇನೆ. (೮) "ನೀನು ಯಾರು? ನಿನ್ನ ಹೆಸರೇನು?" ಎಂದು ರಾಕ್ಷಸನು ದಮಯಂತಿಗೆ ಕೇಳಿದನು. (೯) ಈ ನಾಶಕರವಾದ ಸಂಸಾರದಲ್ಲಿ ಯಾರಿಗೆ ಯಾರೂ ಇಲ್ಲ. (೧೦) ಯಾವ ಮನೆಯ ಎದುರಿಗೆ ಒಂದು ದೊಡ್ಡ ಕಲ್ಲು ಇರುವದೊ ಆ ಮನೆಯು ನಷ್ಟದಿರುತ್ತದೆ. (೧೧) ಈ ಪಂಜರದಲ್ಲಿಯ ಪ್ರಾಣಿಗಳನ್ನು ಯಾರ ಸಲುವಾಗಿ ಹಿಡಿದು ಹಾಕಿದ್ದಾರೆ? (೧೨) ಇವನಿಗೆ ಯಾರು ನೆಟ್ಟಗೆ ಮಾಡುವರು? (೧೩) ಅಗಡದತ್ತನು ಬೇಡರಿಗೆ ಅಂದನು – "ನೀವು ಎಲ್ಲಿಂದ ಬಂದಿರಿ? ಮತ್ತು ಈಗ ಎಲ್ಲಿಗೆ ಹೋಗುವಿರಿ"? (೧೪) ನಾನು ಆ ಅಪರಾಧಿಗಳನ್ನು ಒಮ್ಮೆ ಕ್ಷಮಿಸಿದರೆ ಅವರು ಮತ್ತೆ ತೊಂದರೆ ಕೊಡುವರು. (೧೫) ಮನುಷ್ಯಜನ್ಮವು ದುರ್ಲಭವಿರುವದು. (೧೬) ನನ್ನ ಹುಡುಗರು ಮತ್ತು ಹೆಂಡತಿಯು ನನ್ನನ್ನು ಬಿಡುವರು ಮತ್ತು ಧರ್ಮವನ್ನು ಸ್ವೀಕರಿಸುವರು. (೧೭) ಆ ಹುಡಿಗೆಯರು ಗಂಗಾನದಿಗೆ ಹೋದರು ಮತ್ತು ಜಲವಿಹಾರ ಮಾಡಿದರು. (೧೮) ದಾಸಿಯು ರಾಜಕನ್ಯೆಗೆ ಅಂದಳು – "ನಿನ್ನ ಸ್ವಯಂವರವು ಎಂಟು ದಿನಗಳಲ್ಲಿ ಆಗುವದು." (೧೯) ನೀವು ಮತ್ತು ನಾವು ತೋಟದಲ್ಲಿ ಹೋಗೋಣ. (೨೦) ನಿನ್ನ ಸೌಂದರ್ಯವು ವೈಶ್ರಮಣನಂತೆ ಇದ್ದರೂ ನನಗೆ ನಿನ್ನ ಇಚ್ಛೆ ಇಲ್ಲ.

# ಪಾಠ ೧೦

## ಆಜ್ಞಾರ್ಥ ಮತ್ತು ವಿಧ್ಯರ್ಥ

ಅರ್ಧಮಾಗಧಿಯಲ್ಲಿ ಮೂರು **ಅರ್ಥ**ಗಳು ಉಪಯೋಗದಲ್ಲಿರುವವು. ಅವುಗಳಲ್ಲಿ **ಆಜ್ಞಾರ್ಥ, ವಿಧ್ಯರ್ಥ**ಗಳಿಗೆ ಸ್ವತಂತ್ರವಾದ ಪ್ರತ್ಯಯಗಳಿದ್ದು, **ಸಂಕೇತಾರ್ಥಕ್ಕೆ** ಇರುವದಿಲ್ಲ. ವರ್ತಮಾನ ಕೃದಂತ ವಿಶೇಷಣವನ್ನೇ

ಸಂಕೇತಾರ್ಥದಲ್ಲಿ ಉಪಯೋಗಿಸುವರು.* ಎಲ್ಲ ಪ್ರಕಾರದ ಧಾತುಗಳಿಗೂ ಆಜ್ಞಾರ್ಥ, ವಿಧ್ಯರ್ಥಗಳಲ್ಲಿ ಬರುವ ಪ್ರತ್ಯಯಗಳನ್ನು ಕೆಳಗೆ ಕೊಡಲಾಗಿದೆ.

**ಆಜ್ಞಾರ್ಥ**

| | ಏಕವಚನ. | ಬಹುಚನ. |
|---|---|---|
| ಉ. ಪು. | मु | मो |
| ಮ. ಪು. | •, सु, हि | ह |
| ತೃ. ಪು. | उ | अन्तु |

೧ ನೆಯ ಗುಂಪು – कह (ಹೇಳು)

| | | |
|---|---|---|
| ಉ. ಪು. | कहामु | कहामो |
| ಮ. ಪು. | कह, कहसु, कहहि | कहह |
| ತೃ. ಪು. | कहउ | कहन्तु |

೨ ನೆಯ ಗುಂಪು – करे (ಮಾಡು)

| | | |
|---|---|---|
| ಉ. ಪು. | करेमु | करेमो |
| ಮ. ಪು. | कर, करेसु, करेहि | करेह |
| ತೃ. ಪು. | करेउ | करेन्तु |

೩ ನೆಯ ಗುಂಪು आ ಕಾರಾಂತ गा (ಹಾಡು)

| | | |
|---|---|---|
| ಉ. ಪು. | गामु | गामो |
| ಮ. ಪು. | गा, गासु, गाहि | गाह |
| ತೃ. ಪು. | गाउ | गायन्तु |

ए ಕಾರಾಂತ ने (ಒಯ್ಯು)

| | | |
|---|---|---|
| ಉ. ಪು. | नेमु | नेमो |
| ಮ. ಪು. | ने, नेसु, नेहि | नेह |
| ತೃ. ಪು. | नेउ | नेन्तु |

---

* ಸಂಕೇತಾರ್ಥದ ವಿಚಾರವನ್ನು ವರ್ತಮಾನ ಕೃದಂತ ವಿಶೇಷಣಗಳ ಉಪಯೋಗವನ್ನು ಹೇಳುವಾಗ ಮಾಡಿದೆ.

* आ ಕಾರಾಂತ ಧಾತುಗಳಿಗೆ ತೃ, ಪು, ಬ, ದಲ್ಲಿ अन्तु ಪ್ರತ್ಯಯ ಹಚ್ಚುವಾಗ ಅದರ अ ಕಾರಕ್ಕೆ य ಕಾರಾದೇಶವಾಗುತ್ತದೆ.

ಓ ಕಾರಾಂತ हो (ಆಗು)

| | | |
|---|---|---|
| ಉ. ಪು. | होस्सु | होमो |
| ಮ. ಪು. | हो, होसु. होहि | होह |
| ತೃ. ಪು. | होउ | होन्तु |

ಆಜ್ಞಾರ್ಥವು ಬೇರೆ ಬೇರೆ ಪುರುಷಗಳಲ್ಲಿ ಬೇರೆ ಬೇರೆ ಅರ್ಥದಲ್ಲಿ ಉಪಯೋಗವಾಗುವದು. ಉತ್ತಮ ಪುರುಷದಲ್ಲಿ ಇಚ್ಛೆ, ಪ್ರಯೋಜನಗಳನ್ನು ತೋರಿಸುವದು. ಮಧ್ಯಮ ಪುರುಷದಲ್ಲಿ ಆಜ್ಞೆ, ಬಿನ್ನಹ, ಮೊದಲಾದದ್ದನ್ನು ತೋರಿಸುವದು. ತೃತೀಯ ಪುರುಷದಲ್ಲಿ ಸಮ್ಮತಿ, ಬಿನ್ನಹ, ಆಶೀರ್ವಾದ ಮೊದಲಾದದ್ದನ್ನು ತೋರಿಸುವದು. ಒಮ್ಮೊಮ್ಮೆ ಸಂಶಯ, ಅನಿಶ್ಚಯಗಳ ಭಾವದಲ್ಲಿಯೂ ಆಜ್ಞಾರ್ಥವನ್ನು ಉಪಯೋಗಿಸಲಾಗುವದು.

## ವಿಧ್ಯರ್ಥ

ವಿಧ್ಯರ್ಥದ ರೂಪಗಳನ್ನು ಸಿದ್ಧಗೊಳಿಸುವಾಗ ಧಾತುವಿಗೆ एज्जा ಎಂಬ ಪ್ರತ್ಯಯವನ್ನು ಹಚ್ಚಲಾಗುವದು. ಉದಾ :— कह + एज्जा = कहेज्जा गा + एज्ज = गाएज्जा ಮುಂ. ए ಕಾರಾಂತ, ओ ಕಾರಾಂತ ಧಾತುಗಳಿಗೆ एज्जा ಪ್ರತ್ಯಯ ಹಚ್ಚುವಾಗ ಅದರ 'ए' ಕಾರವು ಲೋಪವಾಗುವದು. ಉದಾ:— दे + एज्जा = देज्जा, हो + एजजा = होज्जा. 'ए' ಎಂಬ ಪ್ರತ್ಯಯವನ್ನು ಹಚ್ಚಿ ಆಗುವ ರೂಪವನ್ನು ವಿಧ್ಯರ್ಥದ ಎಲ್ಲ ಪುರುಷಗಳ ಏಕವಚನ ಬಹುವಚನಗಳಲ್ಲಿ ಉಪಯೋಗಿಸುವರು. ಉದಾ:— कर + ए = करे, पास + ए = पासे.

**ಪ್ರತ್ಯಯಗಳು :— ***

| | ಏಕವಚನ | ಬಹುಚನ |
|---|---|---|
| ಉ. ಪು. | एज्जा, एज्जामि | एज्जाम |
| ಮ. ಪು. | एज्जा, एज्जासि, एज्जाहि | एज्जाह |
| ತೃ. ಪು. | एज्जा, ए | एज्जा |

* ವರ್ತಮಾನ ಕಾಲದಂತೆಯೆ ಬಹುಶ ಎಲ್ಲ ಪ್ರತ್ಯಯಗಳಿರುವವು. ದ್ವಿ. ಪು. ಏಕವಚನದಲ್ಲಿ, ಉತ್ತಮ ಪುರುಷ ಮತ್ತು ತೃತೀಯ ಪುರುಷ ಏಕವಚನಗಳಲ್ಲಿ ಹೆಚ್ಚು ರೂಪಗಳಿರುವವು. ತೃ. ಪು. ಎರಡೂ ವಚನಗಳಲ್ಲಿ ಒಂದೇ ವಿಧದ ರೂಪವಿರುವದು.

### ೧ ನೆಯ ಗುಂಪು कह (ಹೇಳು)

| | ಏಕವಚನ | ಬಹುವಚನ |
|---|---|---|
| ಉ. ಪು. | कहेज्जा, कहेज्जामि | कहेज्जाम |
| ಮ. ಪು. | कहेज्जा, कहेज्जासि, कहेज्जाहि | कहेज्जाह |
| ತೃ. ಪು. | कहेज्जा, कहे | कहेज्जा |

### ೨ ನೆಯ ಗುಂಪು करे (ಮಾಡು)

| | | |
|---|---|---|
| ಉ. ಪು. | करेज्जा, करेज्जामि | करेज्जाम |
| ಮ. ಪು. | करेज्जा, करेज्जासि, करेज्जाहि | करेज्जाह |
| ತೃ. ಪು. | करेज्जा, करे | करेज्जा |

### ೩ ನೆಯ ಗುಂಪು आ ಕಾರಾಂತ गा (ಹಾಡು)

| | | |
|---|---|---|
| ಉ. ಪು. | गाएज्जा, गाएज्जामि | गाएज्जाम |
| ಮ. ಪು. | गाएज्जा, गाएज्जासि, गाएज्जाहि | गाएज्जाह |
| ತೃ. ಪು. | गाएज्जा, गाए | गाएज्जा |

### ए ಕಾರಾಂತ ने (ಒಯ್ಯು)

| | | |
|---|---|---|
| ಉ. ಪು. | नेज्जा, नेज्जामि | नेज्जाम |
| ಮ. ಪು. | नेज्जा, नेज्जासि, नेज्जाहि | नेज्जाह |
| ತೃ. ಪು. | नेज्जा | नेज्जा |

### ओ ಕಾರಾಂತ हो (ಆಗು)

| | | |
|---|---|---|
| ಉ. ಪು. | होज्जा, होज्जामि | होज्जाम |
| ಮ. ಪು. | होज्जा, होज्जासि, होज्जाहि | होज्जाह |
| ತೃ. ಪು. | होज्जा | होज्जा |

**ಅನಿಯಮಿತ ರೂಪಗಳು**—

ಕೆಲವು ರೂಪಗಳು ಸಂಸ್ಕೃತದಿಂದ ನೇರವಾಗಿ ಬಂದಿರುವವು. ಆದರೆ ಆವು ವಿಶೇಷವಾಗಿಲ್ಲ. ಕೆಲವನ್ನು ಕೆಳಗೆ ಕೊಟ್ಟಿದೆ.

कुज्जा > कुर्यात्     सिया > स्यात्     बूया > ब्रूयात्.

ವಿಧ್ಯರ್ಥವನ್ನು ಕನ್ನಡದ 'ತಕ್ಕದ್ದು' 'ಬೇಕು' ಎಂಬ ಕ್ರಿಯಾಪದಗಳನ್ನು ಉಪಯೋಗಿಸುವ ವಾಕ್ಯಗಳಲ್ಲಿ, ಉದ್ದೇಶ, ಶಕ್ಯಾಶಕ್ಯತೆ, ಉಪದೇಶ, ಇಚ್ಛೆ ಮೊದಲಾದವುಗಳನ್ನು ಸೂಚಿಸಲು ಉಪಯೋಗಿಸುವರು. ಒಮ್ಮೊಮ್ಮೆ ಸಂಕೇತಾರ್ಥದಲ್ಲಿಯೂ ವಿಧ್ಯರ್ಥವನ್ನು ಉಪಯೋಗಿಸುವದುಂಟು. ಒಮ್ಮೊಮ್ಮೆ ನಡೆದು ಹೋದ ಸಂಗತಿಯನ್ನು ಹೇಳುವಾಗಲೂ ವಿಧ್ಯರ್ಥವನ್ನು ಉಪಯೋಗಿಸುವದು ಕಂಡು ಬರುತ್ತದೆ.

## ಶಬ್ದಸಂಗ್ರಹ

**अगार** (ನ.) ಮನೆ
**अप्पमाय** (ಪು.) ತಪ್ಪದೆ, ಕಾಳಜಿಯಿಂದ
**अभय** (ನ.) ಅಭಯ
**अरिट्ठनेमि** (ಪು.) ಒಂದು ಹೆಸರು
**अलिय** (ವಿ.) ಸುಳ್ಳು
**अवलोय** (ಧಾ.) ನೋಡು
**असण** (ನ.) ತಿನ್ನುವಪದಾರ್ಥ, ಅಶನ
**अहिलस** (ಧಾ.) ಇಚ್ಛಿಸು
**आणण** (ನ.) ಮುಖ
**आयंक** (ಪು.) ರೋಗ
**आसीसा** (ಸ್ತ್ರೀ.) ಆಶೀರ್ವಾದ
**इंदिय** (ನ.) ಇಂದ್ರಿಯ
**उ** (ಅ.) ಆದರೆ, ನಿಜವಾಗಿ
**उवचिट्ठ** (ಧಾ.) ಹತ್ತಿರ ಇರು, ನಿಲ್ಲು
**कंद** (ಪು.) ಅಳುವಿಕೆ
**करकंडु** (ಪು.) ಒಬ್ಬರಾಜನ ಹೆಸರು
**किन्तु** (ಅ.) ಆದರೆ
**कूडागारसाला** (ಸ್ತ್ರೀ.) ಶಿಖರದ ಆಕಾರದಮನೆ
**केवल** (ಅ.) ಕೇವಲ
**खिप्पं** (ಅ.) ಶೀಘ್ರ. ಕೂಡಲೆ
**खेड्ड** (ನ.) ಹಳ್ಳಿ
**गगण** (ನ.) ಆಕಾಶ
**गोस** (ಪು.) ಬೆಳಗುಮುಂಜಾನೆ
**चिरं** (ಅ.) ಬಹುಕಾಲ
**छिद्द** (ನ.) ಛಿದ್ರ, ಹುಳುಕು
**जण्हु** (ಪು.) ಒಬ್ಬರಾಜನ ಹೆಸರು
**जरा** (ಸ್ತ್ರೀ.) ಮುಪ್ಪು
**जीव** (ಪು.) ಜೀವ
**णं** (ಅ.) ವಾಕ್ಯಾಲಂಕಾರಕ ಅವ್ಯಯ
**ण्हाण** (ನ.) ಸ್ನಾನ
**तवस्सि** (ಪು.) ತಪಸ್ವಿ
**ताहे** (ಅ.) ಆಗ, ಆಕಾಲಕ್ಕೆ
**तिगिच्छ** (ಧಾ.) ಚಿಕಿತ್ಸೆಮಾಡು, ಪರೀಕ್ಷಿಸು
**थुण** (ಧಾ.) ಸ್ತುತಿಸು
**दरिस** (ಧಾ.) ತೋರಿಸು
**दंसण** (ನ.) ದರ್ಶನ
**देवाणुप्पिय** (ವಿ.) ದೇವರಿಗೆ ಪ್ರಿಯ

धम्मलाह (ಪು.) ಧರ್ಮಲಾಭ, ಆಶೀರ್ವಾದಿಸುವರೀತಿ
धार (ಧಾ.) ಧರಿಸು
नक्खत्त (ನ.) ನಕ್ಷತ್ರ
नाग (ಪು) ನಾಗ, ಸರ್ಪ
नागकन्ना (ಸ್ತ್ರೀ.) ನಾಗಕನ್ನಿಕೆ
नागसेट्ठ (ಪು.) ನಾಗರಾಜ, ನಾಗಶ್ರೇಷ್ಠ
निय (ವಿ.) ನಿಜ, ಸ್ವಂತ
नो (ಅ.)ಇಲ್ಲವೆಂಬ ಅರ್ಥದ ಅವ್ಯಯ
पइ (ಪು.) ಪತಿ, ಗಂಡ
पउमावई (ಸ್ತ್ರೀ.) ಪದ್ಮಾವತಿ, ಒಬ್ಬ ಸ್ತ್ರೀಯಹೆಸರು
पमाण (ನ.) ಪ್ರಮಾಣ
पमाय (ಪು.) ಪ್ರಮಾದ, ತಪ್ಪು
परधण (ನ.) ಪರದ್ರವ್ಯ
परिग्गह (ಪು.) ಪರಿಗ್ರಹ, ಸಂಗ್ರಹ
परिमंडण (ನ.) ವಿಭೂಷಣ, ಅಲಂಕಾರ
परिवज्ज (ಧಾ.) ಬಿಡು
परिहा (ಸ್ತ್ರೀ.) ಕಂದಕ
पाणिवह (ಪು.) ಪ್ರಾಣಿವಧ
पिययम (ವಿ.) ಪ್ರಿಯತಮ, ಪ್ರಿಯತಮೆ
पीइ (ಸ್ತ್ರೀ.) ಪ್ರೀತಿ, ಪ್ರೇಮ
पोत्त (ನ.) ವಸ್ತ್ರ
बंभचेर (ನ.) ಬ್ರಹ್ಮಚರ್ಯೆ
बंभचेरधारी (ವಿ.) ಬ್ರಹ್ಮಚರ್ಯ ಧರಿಸಿದ

भर (ಧಾ.) ತುಂಬು
भो (ಅ.) ಎಲೊ
मयणरेहा (ಸ್ತ್ರೀ.) ಒಬ್ಬಸ್ತ್ರೀಯ ಹೆಸರು
महा, महया (ವಿ.) ದೊಡ್ಡ, ವಿಪುಲ
महापह (ಪು.) ದೊಡ್ಡ ಮಾರ್ಗ
माण (ನ.) ಗರ್ವ, ಸ್ವಾಭಿಮಾನ
माया (ಸ್ತ್ರೀ.) ಮಾಯೆ, ಮಾತೆ
मुंडण (ನ.) ಮುಂಡನ, ಕೂದಲು ತೆಗೆಯುವದು
मेहुण (ನ.) ಜೋಡು, ಮೈಥುನ
लहुं (ಅ.) ಬೇಗ
व, व्व (ಅ.) ಅಂತೆ, ಹಾಗೆ
वइयर (ಪು.) ಸಂಗತಿ
वच्छ (ನ.) ವತ್ಸ, ಕರು
वासुदेव (ಪು.) ಕೃಷ್ಣ
वाही (ಸ್ತ್ರೀ.) ರೋಗ, ವ್ಯಾಧಿ
विउल (ವಿ.) ವಿಪುಲ
विजयवद्धमाण (ನ.) ಒಂದು ಹಳ್ಳಿಯ ಹೆಸರು
विज्जत्थि (ಪು.) ವಿದ್ಯಾರ್ಥಿ
विणय (ಧಾ.) ನಿಯಮನಗೊಳಿಸು
विणोय (ಪು.) ವಿನೋದ
विद्देस (ಪು.) ವಿದ್ವೇಷ, ವೈರ
विभूसा (ಸ್ತ್ರೀ.) ಅಲಂಕಾರ
विरह (ಪು.) ವಿರಹ, ಅಗಲಿಕೆ
विलव (ಧಾ.) ಅಳು
विलाव (ಪು.) ವಿಲಾಪ, ಅಳುವಿಕೆ

विलासिणी (ಸ್ತ್ರೀ.) ವಿಲಾಸಿನಿ
विहर (ಧಾ.) ವಿಹರಿಸು, ತಿರುಗು
वेरमण (ನ.) ನಿವೃತ್ತಿ, ಬಿಟ್ಟು ಬಿಡುವದು
सद्द (ಪು.) ಶಬ್ದ, ದನಿ
सद्धिं (ಅ.) ಸಂಗಡ
समर (ಪು. ನ.) ಯುದ್ಧ
समरभूमि (ಸ್ತ್ರೀ.) ರಣಾಂಗಣ
सिक्ख (ಧಾ.) ಕಲಿ
संधि (ಪು. ಸ್ತ್ರೀ.) ಛಿದ್ರ, ವಿವರ
संरंभ (ಪು.) ಸಿಟ್ಟು
संसारसुह (ನ.) ಸಂಸಾರ ಸುಖ
सारहि (ಪು.) ಸಾರಥಿ
सिंगार (ಪು.) ಶೃಂಗಾರ
सेव (ಧಾ.) ಸೇವೆಮಾಡು

## ಅಭ್ಯಾಸ

(೧) ರೂಪಗಳನ್ನು ಗುರುತಿಸಿರಿ:—

बूहि, सुणेज्जाहि, गाहामि, वेयसं, बूम, पडिवज्जेजा, वायन्तु, जायाहि, तुब्भं, तेसिं, निक्खमसु, पमायए, भमिहिसि, करेह, वीससे, लभेज्जा, समयाए, हं, होहिसि, तासिं.

(೨) ರೂಪಗಳನ್ನು ಕೊಡಿರಿ:—

| | |
|---|---|
| ಆಜ್ಞಾರ್ಥ. ದ್ವಿ. ಪು. ಏ. ವ. | मुण, बे, दण्ड, छिंद, डह |
| ,, ಉ. ಪು. ಏ. ವ. | चिन्त, हो, करे, लह, तव |
| ವಿಧ್ಯರ್ಥ. ಉ. ಪು. ಏ. ವ. | ठा, निमंत, कह, भुंज, कुण |
| ,, ತೃ. ಪು. ಏ. ವ. | झिया, ए, चोर, कीण, तर |

## ಭಾಷಾಂತರ

(೧) ಕನ್ನಡಕ್ಕೆ ಪರಿವರ್ತಿಸಿರಿ:—

(१) भो सारहि, उज्जाणं गच्छिस्सं, ता जुंजेहि रहं। (२) रक्खिज्जा कोहं, विणएज्ज माणं, मायं न सेवेज्ज, पहेज्ज लोहं। (३) नरिन्दा पयं अप्पमाएण पालेन्तु। (४) नो इत्थीणं सद्धिं विहरेज्जा, नो इत्थीणं मणोहराइ इंदियाइ आलोएज्जा। (५) पत्थिवो एवं वयासी 'गच्छह, विउलं असणं उवणेह, कूडागारसालं य साहरह'। (६) न कज्जं मज्झ भिक्खेण खिप्पं निक्खमसु दिया। (७) विभूसं परिवज्जेज्जा, सरीरपरिमंडणं, बंभचेरधारी भिक्खू सिंगारत्थं न धारए। (८) जरा जाव न पीलेइ वाही जाव न वड्ढइ, जाविन्दिया

न हायन्ति ताव धम्मं समायरे। (९) जण्हू एवं वयासी 'भो नागसेट्ठ, करेसु पसायं, उवसंहरसु संरंभं खमसु अवराहं'। (१०) समरेसु आगारेसु संधीसु य महापहे, एगो एगित्थीए सद्धिं नोवचिट्ठे न संलवे। (११) वासुदेवो भणइ–'संसारसागरं घोरं तर कन्ने लहुं लहुं'। (१२) नो इत्थीणं गीयासद्दं, हसियं वा कन्दं वा विलावं वा सुणेज्जा। (१३) नक्खत्ताणं मुहं बूहि, बूहि धम्माण वा मुहं। (१४) 'गच्छह णं देवाणुप्पिया, विजयवद्धमाणे खेडे महया सद्देणं एवं वयह'। (१५) 'जं देवो कहेइ तं मे पमाणं'। (१६) पिययम, निसुणेसु मे वइयरं। (१७) नागदत्तो भारियाविरहेण एवं विलवइ–'हा चन्दाणणे, देहि मे दंसणं'। (१८) किं एसा अमरविलासिणी उ जइ होज्जा नागकन्न व्व। (१९) जया मिगस्स आयंको महारण्णम्मि हवइ, तओ को णं ताहे तिगिच्छइ। (२०) पाणिवह–अलिय–परधण–मेहुण –परिग्गहाणवेरमेणं। तिविहं तिविहेण तहा कुणसु तुमं जाव जीवाए।

(೨) ಅರ್ಧಮಾಗಧಿಯಲ್ಲಿ ಭಾಷಾಂತರಿಸಿರಿ:—

(೧) ರಾಣಿಯು ದಾಸಿಗೆ ಅಂದಳು— ನನ್ನ ಅರಿವೆಗಳನ್ನು ತೆಗೆದು ಕೊಂಡು ಬಾ, ಮತ್ತು ಸ್ನಾನದ ಸಿದ್ಧತೆ ಮಾಡು. (೨) ಪ್ರೀತಿ, ಚೇಷ್ಟೆ, ಮತ್ತು ಅಂಜಿಕೆಗಳಿಂದ ಸಾಧುವು ಸುಳ್ಳು ಹೇಳಬಾರದು. (೩) " ಕರುವಿಗೆ ಹೆಚ್ಚು ಹಾಲು ಕುಡಿಸಿರಿ " ಎಂದು ಕರಕಂಡುವು ಗವಳಿಗರಿಗೆ ಆಜ್ಞೆ ಮಾಡಿದನು. (೪) ತಪಸ್ವಿಯು ರಾಜನಿಗೆ ಅಂದನು— " ಅಂಜಬೇಡ, ನಿನಗೆ ಅಭಯವಾಗಲಿ " (೫) ' ಮುಂಜಾನೆ ಊರನ್ನು ಬಿಡು ' ಎಂದು ರಾಜನು ಚೋರರಿಗೆ ಆಜ್ಞೆ ಮಾಡಿದನು. (೬) ಸುಂದರ ಮತ್ತು ಆಕರ್ಷಕ ಮಾತುಗಳಿಗೆ ಸಾಧುವು ಲಕ್ಷ್ಯ ಕೊಡಬಾರದು. (೭) ಜನರ ದೋಷಗಳನ್ನು ನೋಡಬಾರದು ಆದರೆ ಅವರ ಗುಣಗಳನ್ನು ಹೊಗಳಬೇಕು. (೮) ಜಹ್ನುವು ಸಗರ ಪುತ್ರರಿಗೆ ಅಂದನು— " ಆಕಾಶದಿಂದ ಗಂಗೆಯನ್ನು ತರೋಣ ಮತ್ತು ಕಂದಕವನ್ನು ತುಂಬೋಣ " (೯) ಮನುಷ್ಯರು ಐಹಿಕ ಸುಖಕ್ಕಾಗಿ ಹಂಬಲಿಸಬಾರದು. (೧೦) ಪುರುಷರು ತಮ್ಮ ಸಾಮರ್ಥ್ಯವನ್ನು ರಣಾಂಗಣದ ಮೇಲೆ ತೋರಿಸಬೇಕು. (೧೧) " ಧರ್ಮಲಾಭ " ಎಂದು ಮುನಿಯು ಆಶೀರ್ವಾದ ಮಾಡಿದನು. (೧೨) ಮದನ ರೇಖೆಯು ಪತಿಗೆ ಅಂದಳು—"ಸಂಯಮವನ್ನು ಆಚರಿಸು, ಮತ್ತು ಎಲ್ಲ ಪ್ರಾಣಿಗಳನ್ನು ಪ್ರೀತಿಸು ಮತ್ತು ದ್ವೇಷಮಾಡಬೇಡ. (೧೩) ಸಾಧ್ವಿಯು

ಪದ್ಮಾವತಿಗೆ ಅಂದಳು– "ಆಶ್ರಮದಲ್ಲಿ ವಾಸಿಸು; ಮತ್ತು ದೇವರನ್ನು ಭಜಿಸು." (೧೪) ಸಾಧುವು ಒಂದೇ ಸ್ಥಳದಲ್ಲಿ ಬಹಳ ಕಾಲ ಇರಬಾರದು. (೧೫) ವಾಸುದೇವನು ಅರಿಷ್ಟನೇಮಿಗೆ "ನಿನ್ನ ಕಲ್ಯಾಣವಾಗಲಿ" ಎಂದು ಆಶೀರ್ವಾದ ಮಾಡಿದನು. (೧೬) ತಲೆ ಬೋಳಿಸಿಕೊಂಡರೆ ಮುನಿಯಾಗುವದಿಲ್ಲ. (೧೭) ಎಲೊ ಸಾಧುವೆ, ಧರ್ಮದಮೇಲೆ ವಿಶ್ವಾಸವಿಡು; ಮತ್ತು ಶಾಂತಿಯನ್ನು ಗಳಿಸು. (೧೮) ವಿದ್ಯಾರ್ಥಿಗಳು ಬೆಳಗಿನಲ್ಲಿ ಏಳಬೇಕು ಮತ್ತು ಅಭ್ಯಾಸ ಮಾಡಬೇಕು. (೧೯) "ನೀನು ಬರಬೇಡ" ಎಂದು ರಾಜನು ಕನ್ಯೆಗೆ ಅಂದನು. (೨೦) ಕನ್ಯೆಯು ನದಿಗೆ ಹೋದರೆ ನೀರನ್ನು ತರುವಳು.

## ಪಾಠ ೧೧

### ಅನಿಯಮಿತ ನಾಮಗಳು

ಅರ್ಧಮಾಗಧಿಯಲ್ಲಿ ಎಲ್ಲ ನಾಮಗಳೂ ಸ್ವರಾಂತವಾಗಿದ್ದು ಹಿಂದೆ ಹೇಳಿದಂತೆ ಹನ್ನೊಂದು ರೀತಿಯಾಗಿರುವವು. ಆದರೆ ಸಂಸ್ಕೃತದಲ್ಲಿಯ ಕೆಲವು ವ್ಯಂಜನಾಂತ ನಾಮಗಳು ಮತ್ತು ಋ ಕಾರಾಂತ ನಾಮಗಳು ಅರ್ಧಮಾಗಧಿಯಲ್ಲಿ ಅನಿಯಮಿತವೆಂದು ಹೇಳಬಹುದು. ಇಂತಹ ಐದಾರು ರೀತಿಗಳನ್ನು ಇಲ್ಲಿ ಕೊಡಲಾಗಿದೆ.

**ವ್ಯಂಜನಾಂತ ನಾಮಗಳು :—**

(೧) **राय** (**राजन्**—ಪು.—ರಾಜ)

| | ಏ. | ಬ. |
|---|---|---|
| ಪ್ರ. | **राय** | **रायाणो, राइणो** |
| ದ್ವಿ. | **रायं, रायाणं** | **रायाणो** |
| ತೃ. | **रन्ना, राइणा, राएण** | **राईहि—राईहिं** |
| ಪಂ. | **राइणो, रन्नो** | **राईहिन्तो** |
| ಷ. | **राइणो, रन्नो, रायस्स** | **राईण, राईणं, रायाणं** |
| ಸ. | **रायंसि** | **राईसु, राईसुं** |
| ಸಂ. | **राय, राया, रायं** | **रायाणो, राइणो** |

(೨) आय, अप्प, अत्ता. (आत्मन् पु.) ಆತ್ಮ. ¶

| | ಏ. | ಬ. |
|---|---|---|
| ಪ್ರ. | आया, अप्पा, अत्ता | अप्पाणो, अत्ताणो |
| ದ್ವಿ. | आयाणं, अप्पाणं, अत्ताणं | अप्पाणो, अत्ताणो |
| ತೃ. | अप्पणा, अत्तणा | अप्पाणेहिं, अत्ताणेहिं |
| ಪಂ. | आयओ, अत्तणो, अप्पओ | अप्पाणेहिंतो, अत्ताणेहिंतो |
| ಷ. | अप्पणो, अत्तणो | अप्पाणं, अत्ताणं |
| ಸ. | अप्पणि, अत्तणि | अप्पाणेसु अत्ताणेसु |
| ಸಂ. | आय, आया, अप्प, अप्पा, अत्त, अत्ता | अप्पाणो, अत्ताणो |

(೩) अरहन्त (अर्हत् पु.) ಪೂಜ್ಯ, ತೀರ್ಥಂಕರ. *

| | | |
|---|---|---|
| ಪ್ರ. | अरहं, अरहंते, अरहंतो, अरहा | अरहन्ता |
| ದ್ವಿ. | अरहन्तं | अरहन्ते |
| ತೃ. | अरहन्तेण, अरहन्तेणं, अरहया | अरहन्तेहि, अरहन्तेहिं |
| ಪಂ. | अरहओ | अरहन्तेहिन्तो |
| ಷ. | अरहन्तस्स; अरहओ | अरहन्ताण, अरहन्ताणं |
| ಸ. | अरहन्ते, अरहन्तंसि | अरहन्तेसु, अरहन्तेसुं |
| ಸಂ. | अरहं | अरहन्ता |

¶ ಡಾ. ಪ. ಲ. ವೈದ್ಯ ಮತ್ತು ಡಾ. ಘಾಟಗೆ ಇವರು ಕೊಟ್ಟಿರುವ ಅನಿಯಮಿತ ಶಬ್ದಗಳ ಎಲ್ಲರೂಪಗಳನ್ನು ಒಂದೆಡೆಗೆ ಕೂಡಿಸಿ ಕೊಡಲಾಗಿದೆ. ಡಾ. ಘಾಟಗೆಯವರು ಸಂಬೋಧನದ ರೂಪಗಳನ್ನು ಕೊಟ್ಟಿಲ್ಲ.

अद्धा (ಬೀದಿ); बंभा (ಬ್ರಹ್ಮ) ಮತ್ತು मुद्धा (ತಲೆ) ಈ ಶಬ್ದಗಳು आय ದಂತೆ ನಡೆಯುವವು.

* अन्त ಕೊನೆಗೆ ಬರುವ ಧಾತುಸಾಧಿತ ವಿಶೇಷಣಗಳೂ (गच्छन्त, पासन्त, होन्त, करिज्जन्त ಮುಂ.) 'ಉಳ್ಳ' ಎಂಬರ್ಥದ वन्त ಅಥವಾ मन्त ಎಂಬ ಪ್ರತ್ಯಯ ಹೊಂದಿದ धणवन्त, बुद्धिमन्त ಮೊದಲಾದ ನಾಮಗಳೂ ಸಾಮಾನ್ಯವಾಗಿ ಇದೇ ಪ್ರಕಾರ ನಡೆಯುವವು. भवन्त ಶಬ್ದದ ಸಂಬೋಧನ ಏಕವಚನವು भन्ते ಎಂದೂ भगवन्त ಶಬ್ದದ ದ್ವಿತೀಯಾ ಏಕವಚನವು भगवं, भयवं ಎಂದೂ ಆಗುವವು.

(೪) कत्ता (कर्तृ) ಮಾಡುವವ.*

| | ಏ. | ಬ. |
|---|---|---|
| ಪ್ರ. | कत्ता | कत्तारो, कत्ता |
| ದ್ವಿ. | कत्तारं | कत्तारो, कत्ता |
| ತೃ. | कत्तारेण | कत्तारेहिं |
| ಪಂ. | कत्ताराओ | कत्तारेहिंतो |
| ಷ. | कत्तुणो, कत्तारस्स | कत्ताराणं |
| ಸ. | कत्तारे | कत्तारेसुं |
| ಸಂ. | कत्ता | कत्तारो |

ಸಂಸ್ಕೃತದಲ್ಲಿಯು मनस्, वचस्, शिरस्, तेजस्, चेतस्, ಮುಂತಾದ ವ್ಯಂಜನಾಂತ ನಾಮಗಳು ಅಂತ್ಯ स् ಕಾರವು ಲೋಪವಾಗಿ अ ಕಾರಾಂತಗಳಂತೆ ನಡೆಯುತ್ತವೆ. ಆದರೆ ತೃತೀಯಾ ಏಕವಚನದಲ್ಲಿ ಮಾತ್ರ मणसा, वयसा, शिरसा, तेयसा, चेतसा ಎಂದು ಆಗುವವು. काय ಶಬ್ದವು ಅಕಾರಾಂತವೇ ಆಗಿದ್ದರೂ कायेन ಎಂದು ತೃತೀಯಾ ಏಕವಚನದಲ್ಲಿ ಆಗದೆ कायसा ಎಂದೇ ಆಗುತ್ತದೆ.

**ऋ ಕಾರಾಂತ ನಾಮಗಳು :—**

(೧) ಪುಲ್ಲಿಂಗ पिया (पितृ) ತಂದೆ

| | | |
|---|---|---|
| ಪ್ರ. | पिया | पियरो |
| ದ್ವಿ. | पियरं | पियरो, पियरे |
| ತೃ. | पिउणा | पिईहिं, पिऊहिं |
| ಪಂ. | पिउणो | पिईहिन्तो, पिऊहिन्तो |
| ಷ. | पिउणो, पिउस्स | पिईणं, पिऊणं |
| ಸ. | पियरि | पिईसुं–पिऊसु |
| ಸಂ. | पिया | पियरो. |

* **दाया** (दातृ–ಕೊಡುವವ, ದಾನಿ); **नेया** (नेतृ–ಒಯ್ಯುವವ, ಮುಂದಾಳು) **नाया** (ज्ञातृ–ತಿಳಿಯುವವ, ಜ್ಞಾನಿ); **गन्ता** (ಹೋಗುವವ) ಮುಂತಾದ ನಾಮಗಳು **कत्ता** ಶಬ್ದದಂತೆ ನಡೆಯುವವು.

**भाया** (भातृ), **जामाया** (जामातृ)–ಅಳಿಯ, **अम्मापिया** ಅಥವಾ **माया-पिया**-ತಾಯಿತಂದೆ ಮೊದಲಾದ ಶಬ್ದಗಳು **पिया** ದಂತೆ ನಡೆಯುವವು.

(೨) ಸ್ತ್ರೀಲಿಂಗ माया (मातृ)–ತಾಯಿ *

| | ಏ. | ಬ. |
|---|---|---|
| ಪ್ರ. | माया | मायरो |
| ದ್ವಿ. | मायारं | मायरो |
| ತೃ. | मायाए, माऊए | माईहिं–माऊहिं |
| ಪಂ. | माऊए | माईहिन्तो–माऊहिन्तो |
| ಷ. | मायाए, माऊए | माईणं–माऊणं |
| ಸ. | मायाए, माऊए | माईसु–माऊसुं |
| ಸಂ. | माया | मायरो. |

**ಶಬ್ದಸಂಗ್ರಹ**

अक्कम (ಧಾ.) ಆಕ್ರಮಿಸು
अणुजा (ಧಾ.) ಹಿಂಬಾಲಿಸು
अणुमन्न (ಧಾ.) ಮನ್ನಿಸು, ಒಪ್ಪು
अणुसंकम (ಧಾ.) ಹಿಂಬಾಲಿಸು, ಬೆನ್ನುಹತ್ತು
अत्तय (ಪು.) ಮಗ, ಆತ್ಮಜ
अंतिय (ಅ.) ಹತ್ತಿರ, ಸಮೀಪ
अधम्म (ಪು.) ಅಧರ್ಮ
अन्न (ವಿ.) ಅನ್ಯ, ಎರಡನೆಯ
अप्प (ವಿ.) ಅಲ್ಪ
अप्प (ಪು.) ಆತ್ಮ
अप्पघाय (ಪು.) ಆತ್ಮಘಾತ, ಆತ್ಮಹತ್ಯೆ
अम्मा (ಸ್ತ್ರೀ.) ತಾಯಿ
अम्मापिया (ಪು.) ತಾಯಿತಂದೆ
अरहन्त (ಪು.) ಅರ್ಹಂತ, ಶ್ರೇಷ್ಠ ಮನುಷ್ಯ
असाहु (ವಿ.) ಅಸಾಧು, ಕೆಟ್ಟ
आइ (ವಿ.) ಆದಿ, ಮೂಲ
आणा (ಸ್ತ್ರೀ.) ಆಜ್ಞೆ
आयरण (ನ.) ಆಚರಣ
आसदय (ಪು.) ಚೌಕಿ, ಮಂಚ
इब्भ (ಪು.) ವ್ಯಾಪಾರಿ
इसुयार (ಪು.) ಒಬ್ಬ ರಾಜನ ಹೆಸರು
इहलोय (ಪು.) ಈ ಲೋಕ
उवरि (ಅ.) ಮೇಲೆ

---

* धूया (ಸಂ दुहितृ) ಶಬ್ದವು ಮೂಲದಲ್ಲಿ ऋ ಕಾರಾಂತವಾಗಿದ್ದರೂ माया ಶಬ್ದದಂತೆ ನಡೆಯದೆ आ ಕಾರಾಂತ ಸ್ತ್ರೀಲಿಂಗ देवया ಶಬ್ದದಂತೆ ನಡೆಯುತ್ತದೆ. ಆದರೆ ದ್ವಿತೀಯಾ ಏಕವಚನದಲ್ಲಿ धूयर ಎಂದೂ ತೃತೀಯಾ ಬಹುವಚನದಲ್ಲಿ धूयराहिं ಎಂದೂ ಆಗುತ್ತವೆ.

एत्थ (ಅ.) ಇಲ್ಲಿ
एरिस (ವಿ.) ಈ ಪ್ರಕಾರದ
एव (ಅ.) ಅಂತೆ, ಮತ್ತು
कट्ठ (ನ.) ಕಷ್ಟ
कत्तार (ವಿ.) ಕರ್ತಾ, ಮಾಡುವವ
कम्म (ನ.) ಕರ್ಮ
काम (ಪು.) ಕಾಮ, ಇಚ್ಛೆ
काय (ಪು.) ಶರೀರ
कारुण्ण (ನ.) ಕಾರುಣ್ಯ, ದಯೆ
खीर (ನ.) ಹಾಲು, ಕ್ಷೀರ
गय (ಪು.) ಆನೆ, ಗಜ
गवेस (ಧಾ.) ಹುಡುಕು
गुरु (ಪು.) ಗುರು
गो (ಸ್ತ್ರೀ.) ಆಕಳು
चिरंजीव (ವಿ.) ಚಿರಂಜೀವ, ನಾಶವಿಲ್ಲದ
जग (ನ.) ಜಗತ್ತು
जलण (ಪು.) ಅಗ್ನಿ
जामाया (ಪು.) ಅಳಿಯ
तंत (ನ.) ತಂತ್ರ
तार (ಧಾ.) ದಾಟಿಸು
दंति (ಪು.) ಆನೆ
दायार (ವಿ.) ದಾನಿ, ಕೊಡುವವ
दिव्व (ನ.) ದಿವ್ಯ
देउलिया (ಸ್ತ್ರೀ.) ದೇವಾಲಯ
नंदण (ಪು.) ಮಗ
निग्गंथ (ಪು.) ನಿರ್ಗ್ರಂಥ
निन्द (ಧಾ.) ನಿಂದಿಸು
निमित्त (ನ.) ನಿಮಿತ್ತ, ಕಾರಣ
निवार (ಧಾ.) ನಿವಾರಿಸು
निव्विण्ण (ವಿ.) ಬಳಲಿದ
पडिनिक्खम (ಧಾ.) ದೀಕ್ಷೆಹೊಂದು
परिणाम (ಪು.) ಪರಿಣಾಮ
पसाय (ಧಾ.) ಅನುಗ್ರಹಮಾಡು
पुरिस (ಪು.) ಪುರುಷ, ಮನುಷ್ಯ
पुरिसायार (ಪು.) ಪುರುಷಧರ್ಮ, ಪುರುಷಾರ್ಥ
(ಸ್ತ್ರೀ.) ಪೂರ್ವಸ್ಥಿತಿ
(ಸ್ತ್ರೀ.) ಬುದ್ಧಿ
भगवई, भयवई (ಸ್ತ್ರೀ.) ಭಗವತಿ
भगवन्त (ಪು.) ಭಗವಂತ
मग्ग (ಪು.) ಮಾರ್ಗ, ಬೀದಿ
मण (ನ.) ಮನಸ್ಸು
मंत (ನ.) ಮಂತ್ರ
मंति (ಪು.) ಮಂತ್ರಿ
महिड्डिय (ವಿ.) ಮಹಾವೈಭವಶಾಲಿಯಾದ, ಐಶ್ವರ್ಯವುಳ್ಳ
माणुसी (ಸ್ತ್ರೀ.) ಮನುಷ್ಯಸಂಬಂಧಿಯಾದ
माव (ಧಾ.) ಅಳೆ, ಹೊಂದು
रिउ (ಪು.) ವೈರಿ
वक्क (ನ.) ವಾಕ್ಯ
वासुदेव (ಪು.) ಒಂದುಹೆಸರು
विस (ನ.) ವಿಷ
विसाण (ನ.) ಕೋಡು

विहल (ವಿ.) ವಿಫಲ
संघ (ಪು.) ಸಮೂಹ
सज्झाय (ಪು.) ಸ್ವಾಧ್ಯಾಯ
ससि (ಪು.) ಚಂದ್ರ
सामिणी (ಸ್ತ್ರೀ.) ಸ್ವಾಮಿನಿ, ಒಡತಿ
सिर (ನ.) ಶಿರ, ತಲೆ
सुगइ (ಸ್ತ್ರೀ.) ಸುಗತಿ, ಸದ್ಗತಿ
सुद्ध (ವಿ.) ಶುದ್ಧ
सुबाहुकुमार (ಪು.) ಒಂದು ಹೆಸರು
हु (ಅ.) ನಿಜವಾಗಿ

**ಅಭ್ಯಾಸ**

(೧) ಕೆಳಗಿನ ರೂಪಗಳನ್ನು ಗುರುತಿಸಿರಿ :—

भगवया, काहं, धूयरं, भन्ते, होहिन्ति, राइणा, सिज्झिहिइ, पासिस्सं कत्तार, भयवओ, दिस्स, भत्तुणो, मोच्छइ, अणुपरियट्टिस्सइ, आयओ पाविहिसि, कत्तुणो, मणसा, बलवन्ति, कम्मुणा.

(೨) ರೂಪಗಳನ್ನು ಕೊಡಿರಿ—

ದ್ವಿತೀಯಾ ಏಕವಚನ— भाउ, मुद्धा, बुद्धिमन्त
ಷಷ್ಠೀ ಏಕವಚನ— धूया, भवन्त, अप्प
ವಿಧ್ಯರ್ಥ ಉತ್ತಮ ಪುರುಷ ಏಕವಚನ— हो, चिन्त, ठा, सुण, दे
ಆಜ್ಞಾರ್ಥ ತೃತೀಯ ಪುರುಷ ಬಹುವಚನ— गा, ने, भिन्द, वन्द, भण

**ಭಾಷಾಂತರ**

(೧)ಕನ್ನಡಕ್ಕೆ ಪರಿವರ್ತಿಸಿರಿ :—

(१) कत्तारं एव अणुजाइ कम्मं। (२) भगवओ पसाएण अप्पाणं तारइस्सामि। (३) गोयमो समणं भगवं महावीरं वन्दइ नमंसइ य। (४) सुबाहू कुमारे समणस्स भगवओ महावीरस्स अंतिए धम्मं सुणित्था एवं वयासी—'सद्दहामि णं भन्ते निग्गन्थं पावयणं' (५) सेणियस्स राइणो पुत्तो धारिणीए अत्तओ कुमारो मेहो नाम आसि। (६) अप्पा एव अप्पणो मित्तो, अप्पा एव अप्पाणो रिऊ। (७) जइ ताव लोगो मं न जाणिस्सइ ता पुणो वि पुव्वट्ठिईए चोरिस्सामि। (८) अम्मो, निव्विण्णकामो हं पडिनिक्खमामि। (९) अरहन्ते वन्दिमो सिरसा। (१०) समणा मणसा वयसा कायसा अधम्मं न कुणन्ति। (११) जे वा दायारं निंदइ अप्पलाभे, से भिक्खू अकज्ज कुणइ। (१२) राया भणइ 'कहं अहं आसन्दस्स चउत्थो पाओ ? (१३) 'सामिणि, कहं एगहत्थपमाणयाए देउलियाए चउहत्थो देवो माउ'

त्ति। (१४) भयवईओ देवयाओ, एह, ममोवरिं पसाएह कारुण्णयाए वसुदेव-नंदणं। (१५)भज्जा य पुत्ता वि य नायओ य दायारमन्नं अणुसंकमन्ति। (१६) बुध्दीए पुरिसयारेण मंततंतेहि देवसंघेहि। न य केणइ इह भुवणे निवारइ दिव्व परिणामो ॥ (१७) न एरिसी माणुसी होइ अह माणुसी वि जइ होज्ज एरिसी ता कुणंति जं कट्ठं। के वि हु सग्गनिमित्तं तेसिं सव्वं पि तं विहलं। (१८) समणो अप्पणा न हिंसइ। हिंसं नाणुमन्नइ य। (१९) मणसा कायवक्केणं सुद्धं धम्मं समायरे। (२०) होज्जा जले वि जलणो, होज्जा खीरं पि गोविसाणाओ। अमयरसो वि विसाओ, न य हिंसाओ हवइ धम्मो॥ (२१) भयवं एत्थ मे खमे।

(೨) ಅರ್ಧಮಾಗಧಿಯಲ್ಲಿ ಭಾಷಾಂತರಿಸಿರಿ :—

(೧) ರಾಜನು ಭಗವಾನ್ ಮಹಾವೀರರ ಪ್ರವಚನವನ್ನು ಕೇಳಿದನು ಮತ್ತು ದೀಕ್ಷೆ ತೆಗೆದುಕೊಂಡನು. (೨) ಪಾಪಾಚರಣೆಯಿಂದ ಆತ್ಮಕ್ಕೆ ಸದ್ಗತಿಯು ಸಿಗುವದಿಲ್ಲ. (೩) ರಾಜಪುತ್ರನು ತಾಯಿಗೆ ಅಂದನು – " ಆ ಸುಂದರ ಕನ್ನಿಕೆಯೊಡನೆ ನನ್ನ ಮದುವೆಯಾಗದಿದ್ದರೆ ನಾನು ಆತ್ಮಹತ್ಯೆ ಮಾಡಿಕೊಳ್ಳುವೆನು" (೪) ಕರ್ಮಫಲವು ಈ ಜನ್ಮದಲ್ಲಿ ಸಿಗದಿದ್ದರೆ ಎರಡನೆಯ ಜನ್ಮದಲ್ಲಿ ಸಿಗುವದು. (೫) ನಾವು ಯಾವ ಎರಡನೆಯ ದಾನಿಯನ್ನು ಹುಡುಕಬೇಕು? (೬) ಬ್ರಹ್ಮದೇವನು ಈ ಜಗತ್ತಿನ ಆದಿಪುರುಷನಾಗಿದ್ದಾನೆ. (೭) ರಾಜನು ಅಳಿಯನಿಗೆ ಹತ್ತು ಸಾವಿರ ಕುದುರೆ, ಒಂದು ಸಾವಿರ ಆನೆ, ಮತ್ತು ನೂರು ರಥಗಳನ್ನು ಕೊಟ್ಟನು. (೮) ಬಾಲಕರು ತಾಯಿತಂದೆಗಳ ಮಾತನ್ನು ಕೇಳಬೇಕು. (೯) ರಾಜನ ಮಂತ್ರಿಯು ಗುಣವಂತನಿದ್ದಾನೆ. (೧೦) ಅರ್ಹಂತರಿಗೆ ನನ್ನ ನಮಸ್ಕಾರವು. (೧೧) ಇಷುಕಾರನು ತಾಯಿತಂದೆಗಳಿಗೆ ಅಂದನು — " ನಾನು ದೀಕ್ಷೆ ತೆಗೆದುಕೊಳ್ಳುತ್ತೇನೆ; ನನಗೆ ಒಪ್ಪಿಗೆ ಕೊಡಿರಿ " (೧೨) ಮಂತ್ರಿಯ ಹೆಣ್ಣುಮಕ್ಕಳು ಗವಳಿಗನಿಗೆ ಹಾಲು ಮತ್ತು ಮೊಸರು ಬೇಡಿದರು. (೧೩) ಬಾಲಕರು ತಾಯಿತಂದೆಗಳ ಮತ್ತು ಗುರುಗಳ ನಿಂದೆ ಮಾಡಬಾರದು. (೧೪) ಆತ್ಮವು ಅವಿನಾಶಿಯಾಗಿರುವದು. (೧೫) ಕರ್ಮವು ಕರ್ತೃವನ್ನು ಬಿಡುವದಿಲ್ಲ. (೧೬) ರಾಜನ ಕುದುರೆಗಳು ಅವಂತಿಕಾನಗರದ ಬೀದಿಯಿಂದ ಹೋದವು. (೧೭) ರಾತ್ರಿಯಲ್ಲಿ ಕಳ್ಳರು ನಗರ

ದಲ್ಲಿಯ ಶ್ರೀಮಂತ ವ್ಯಾಪಾರಿಯ ಮನೆಯಲ್ಲಿ ಕಳವು ಮಾಡಿದರು. (೧೮) ರಾತ್ರಿಯ ಕಾಲದಲ್ಲಿ ನಾವು ಬೆಳದಿಂಗಳಲ್ಲಿ ಅರಣ್ಯದಲ್ಲಿಯ ಮಾರ್ಗದಿಂದ ನಡೆದೆವು. (೧೯) ಸಾಧುವು ಮನಸ್ಸಿನಿಂದಕೂಡ ಯಾರಿಗೂ ಅಕಲ್ಯಾಣವನ್ನು ಚಿಂತಿಸಬಾರದು. (೨೦) ದೇಹ, ಮತ್ತು ಮನಸ್ಸುಗಳಿಂದ ನಾವು ಸ್ವಾಧ್ಯಾಯವನ್ನು ನಿಶ್ಚಯಿಸಿದೆವು.

## ಪಾಠ ೧೨

## ಪ್ರೇರಣಾರ್ಥಕ, ಕರ್ಮಣಿ ಮತ್ತು ನಾಮಧಾತುಗಳು

**ಪ್ರೇರಣಾರ್ಥಕ ಅಥವಾ ಪ್ರಯೋಜಕ ಧಾತುಗಳು :—**

ಯಾವದೊಂದು ಕ್ರಿಯೆಯನ್ನು ತಾನು ಸ್ವತಃ ಮಾಡದೆ ಬೇರೆಯವರಿಂದ ಮಾಡಿಸಲಾಯಿತು ಎಂದರೆ ಬೇರೆಯವರಿಗೆ ಪ್ರೇರಿಸಲಾಯಿತು ಎಂಬ ಅರ್ಥದಲ್ಲಿ ಪ್ರೇರಣಾರ್ಥಕ ಅಥವಾ ಪ್ರಯೋಜಕ ರೂಪಗಳನ್ನು ಉಪಯೋಗಿಸುವರು. ಉದಾ :— "ನಾನು ಊಟಕ್ಕೆ ಕುಳಿತೆನು" ಎಂಬ ವಾಕ್ಯದಲ್ಲಿ ಕರ್ತೃವಾದ 'ನಾನು' ಸ್ವತಃ ಊಟಕ್ಕೆ ಕೂಡ್ರುವ ಕೆಲಸವನ್ನು ಮಾಡಿದೆನು ಎಂದು ಅರ್ಥವಾದರೆ "ನಾನು ಅವನನ್ನು ಊಟಕ್ಕೆ ಕೂಡ್ರಿಸಿದೆನು" ಎಂಬ ವಾಕ್ಯದಲ್ಲಿ ಕರ್ತೃವು "ನಾನು" ಆದರೂ ಊಟಕ್ಕೆ ಕುಳಿತವನು ಬೇರೊಬ್ಬನು; ಅವನು ಕೂಡ್ರುವಂತೆ ಮಾಡಿದವನು ನಾನು; ಇಂತಹ ವಾಕ್ಯರಚನೆಯಲ್ಲಿ ಧಾತುವಿನ ಪ್ರೇರಣಾರ್ಥಕ ರೂಪವನ್ನು ಉಪಯೋಗಿಸುವರು. ಕನ್ನಡದಲ್ಲಿ ಮೂಲಧಾತುವಿಗೆ "ಇಸು" ಎಂಬ ಪ್ರತ್ಯಯ ಹಚ್ಚುವದರಿಂದ ಪ್ರೇರಣಾರ್ಥಕ ರೂಪಗಳಾಗುವವು. ಉದಾ :— ಮಾಡು + ಇಸು = ಮಾಡಿಸು, ಮಲಗು + ಇಸು = ಮಲಗಿಸು, ಮುಂ. ಅರ್ಧಮಾಗಧಿಯಲ್ಲಿಯೂ ಮೂಲಧಾತುವಿಗೆ ಪ್ರತ್ಯಯ ಹತ್ತಿ ಪ್ರೇರಣಾರ್ಥಕ ಅಥವಾ ಪ್ರಯೋಜಕ ಧಾತು ರೂಪಗಳನ್ನು ಮಾಡುತ್ತಾರೆ.

**ಪ್ರೇರಣಾರ್ಥಕದ ಪ್ರತ್ಯಯಗಳು**

(೧) **आ** ಕಾರಾಂತ ಧಾತುವಿಗೆ **वे** ಪ್ರತ್ಯಯ ಹತ್ತುವದು. ಉದಾ – **गा + वे = गावे**; ಇದೇ ಪ್ರಕಾರ **ठावे** , **दावे** , **ण्हावे** ಮುಂ.

(೨) अ ಕಾರಾಂತ ಧಾತುಗಳಿಗೆ **आवे** ಪ್ರತ್ಯಯ ಹಚ್ಚುವರು. ಉದಾ – **पास + आवे = पासावे**, ಇದೇ ಪ್ರಕಾರ **हसावे, करावे, रमावे,** ಮುಂ.

(೩) **ए, ओ** ಕಾರಾಂತ ಧಾತುಗಳಿಗೆ **आवे** ಪ್ರತ್ಯಯ ಬರುತ್ತದೆ. ಮತ್ತು ಆಗ आ ಕಾರಕ್ಕೆ **य** ಕಾರಾದೇಶವಾಗಿ ಅದು **यावे** ಎಂದಾಗುವದು. ಉದಾ — **ने + यावे = नेयावे**; ಇದೇ ಪ್ರಕಾರ **होयावे** ಮುಂ.

(೪) ಹಲವು ಕಡೆಗೆ ಮೂಲಧಾತುವಿಗೆ **ए** ಪ್ರತ್ಯಯವನ್ನು ಹಚ್ಚಿ ಮತ್ತು ಉಪಾಂತ್ಯ ಸ್ವರವು ಹ್ರಸ್ವವಿದ್ದರೆ ಅದನ್ನು ದೀರ್ಘಮಾಡಿ ಪ್ರಯೋಜಕ ಧಾತುವಿನಂತೆ ಉಪಯೋಗಿಸುವರು. ಉದಾ – **पड + ए = पडे > पाडे**; ಇದೇ ಪ್ರಕಾರ कर > **कारे**; मर > **मारे**; पडिलभ > **पाडिलाभे** ಮುಂ.

ಪ್ರೇರಣಾರ್ಥಕದ ಎಲ್ಲ ಪ್ರತ್ಯಯಗಳೂ **ए** ಕಾರಾಂತವಾಗಿರುವದರಿಂದ ಎಲ್ಲ ಪ್ರೇರಣಾರ್ಥಕ ಧಾತುಗಳು ೨ ನೆಯ ಗುಂಪಿನ ಧಾತುಗಳಂತೆ ನಡೆಯುವವು. ಮತ್ತು ಅವು ಎಲ್ಲ ಕಾಲ ಮತ್ತು ಅರ್ಥಗಳಲ್ಲಿಯೂ ನಡೆಯುವವು. ಅವುಗಳ ರೂಪಗಳು ಕೆಳಗಿನಂತೆ ಆಗುತ್ತವೆ.

**ವರ್ತಮಾನಕಾಲ** **पासावे**

| | | |
|---|---|---|
| ಉತ್ತಮ ಪುರುಷ. | **पासावेमि** | **पासावेमो** |
| ಮಧ್ಯಮ ಪುರುಷ. | **पासावेसि** | **पासावेह** |
| ತೃತೀಯ ಪುರುಷ. | **पासावेइ** | **पासावेन्ति** |

**ಭೂತಕಾಲ** *

| | | |
|---|---|---|
| ಎಲ್ಲ ಪುರುಷಗಳಲ್ಲಿ. | **पासावेत्थ, पासावेत्था** | **पासाविंसु** |

* ಸಂಕೇತಾರ್ಥಕ್ಕೆ ಬೇರೆ ಪ್ರತ್ಯಯಗಳಿಲ್ಲ.

ಭೂತಕಾಲದ **इत्थ, इत्था** ಪ್ರತ್ಯಯಗಳ ಹಿಂದಿನ **इ** ಕಾರವು ಲೋಪವಾಗುವದು. ಲೋಪ ಮಾಡದೆಯೂ ಈ ಪ್ರತ್ಯಯಗಳನ್ನು ಹಚ್ಚಬಹುದು. **ಡಾ. ವೈದ್ಯರು इ** ಕಾರದ ಲೋಪವನ್ನು ಹೇಳಿದ್ದಾರೆ. ಭವಿಷ್ಯತ್ಕಾಲದಲ್ಲಿ **स्स** ಇದು ಒತ್ತಕ್ಷರವಾಗಿರುವದರಿಂದ ಅಂತ್ಯ **ए** ಕಾರವು **इ** ಕಾರವಾಗಿರುವದು. **इहिइ** ಪ್ರತ್ಯಯ ಹಚ್ಚುವಾಗ ಅದರ ಹಿಂದಿನ **इ** ಕಾರವು ಲೋಪವಾಗುವದು. ವಿಧ್ಯರ್ಥ ತೃತೀಯ ಪುರುಷ ಏಕವಚನದಲ್ಲಿ **पासावे + ए** ಕೂಡಿ **पासावे** ಎಂದೇ ಆಗುವದು.

ತ್ಕಾಲ ೧ ನೆಯ ರೀತಿ.

| | | |
|---|---|---|
| ಉ. ಪು. | पासाविस्सामि पासाविस्सं | पासाविस्सामो |
| ಮ. ಪು. | पासाविस्ससि | पासाविस्सह |
| ತೃ. ಪು. | पासाविस्सइ | पासाविस्सन्ति |

ಭವಿಷ್ಯತ್ಕಾಲ ೨ ನೆಯ ರೀತಿ.

| | | |
|---|---|---|
| ಉ. ಪು. | पासावेहामि, पासावेहिमि | पासावेहामो, पासावेहिमो |
| ಮ. ಪು. | पासावेहिसि | पासावेहिह |
| ತೃ. ಪು. | पासावेविइ | पासावेहिन्ति |

ಅಜ್ಞಾರ್ಥ.

| | | |
|---|---|---|
| ಉ. ಪು. | पासावेमु | पासावेमो |
| ಮ. ಪು. | पासावे, पासावेसु, पासावेहि | पासावेह |
| ತೃ. ಪು. | पासावेउ | पासावेन्तु |

ವಿಧ್ಯರ್ಥ

| | | |
|---|---|---|
| ಉ. ಪು. | पासावेज्जा, पासावेज्जामि | पासावेज्जाम |
| ಮ. ಪು. | पासावेज्जा, पासावेज्जासि | पासावेज्जाह |
| ತೃ. ಪು. | पासावेज्जा, पासावे | पासावेज्जा |

**ಕರ್ಮಣಿ ರೂಪಗಳು —**

ಕರ್ಮಣಿ ಪ್ರಯೋಗದಲ್ಲಿ ರೂಪಗಳನ್ನು ಸಿದ್ಧಪಡಿಸುವಾಗ ಮೊದಲು ಧಾತುಗಳಿಗೆ **इज्ज** ಎಂಬ ಪ್ರತ್ಯಯವು ಹತ್ತುವದು. ಉದಾ – **हस + इज्ज = हसिज्ज**; ಅದೇ ಪ್ರಕಾರ **गच्छिज्ज, गाइज्ज, नेइज्ज** ಮುಂತಾದವುಗಳನ್ನು ತಿಳಿಯಬೇಕು. ಇದಲ್ಲದೆ ಕೆಲವು ಕರ್ಮಣಿ ರೂಪಗಳು ಸಂಸ್ಕೃತದಿಂದ ನೇರವಾಗಿ ಬರುವವು. ಅವುಗಳಲ್ಲಿ ಮುಖ್ಯವಾದವುಗಳನ್ನು ಕೆಳಗೆ ಕೊಟ್ಟಿದೆ.

**ಅನಿಯಮಿತ ಕರ್ಮಣಿ ರೂಪಗಳು** *

| | |
|---|---|
| कर > **कीर** (ಮಾಡು) | ने > **निज्ज** (ಒಯ್ಯು) |
| खा > **खिज्ज** (ತಿನ್ನು) | पा > **पिज्ज** (ಕುಡಿ) |

* **इज्ज** ಪ್ರತ್ಯಯಾಂತ ಹಾಗು ಎಲ್ಲ ಅನಿಯಮಿತ ರೂಪಗಳು **अ** ಕಾರಾಂತವಿರುವದರಿಂದ ಎಲ್ಲ ಧಾತುಗಳ ಕರ್ಮಣಿ ರೂಪಗಳು **अ** ಕಾರಾಂತ ವಾಗುವವು.

| | |
|---|---|
| खिव > **खिप्प** (ಒಗೆ) | बन्ध > **बज्झ** (ಕಟ್ಟು) |
| छिव > **छिप्प** (ಮುಟ್ಟು) | भिंद > **भिज्ज** (ಒಡೆ) |
| जाण > **नज्ज** (ತಿಳಿ) | भुंज > **भुज्ज** (ಉಪಭೋಗಿಸು) |
| डह > **डज्झ** (ಸುಡು) | मुह > **मुज्झ** (ಮೂರ್ಛೆಹೊಂದು) |
| तर > **तीर** (ಸಮರ್ಥವಾಗು) | मुंच > **मुच्च** (ಬಿಡು) |
| दे > **दिज्ज** (ಕೊಡು) | लह > **लब्भ** (ಸಿಗು) |
| रुंभ > **रुब्भ** (ಅಡ್ಡಿಮಾಡು) | विढव > **विढप्प** (ಗಳಿಸು, ಹೊಂದು) |
| वच > **वुच्च** (ಅನ್ನು) | हण > **हम्म** (ಕೊಲ್ಲು) |

ಮೇಲೆ ಕಂಸಗಳಲ್ಲಿ ಧಾತುಗಳ ಮೂಲಾರ್ಥವನ್ನು ಕೊಟ್ಟಿದೆ ಕರ್ಮಣಿ ರೂಪವನ್ನು ಕನ್ನಡದಲ್ಲಿ ತಿಳಿದುಕೊಳ್ಳಬೇಕು.

**ಸಾಧಿತ ಧಾತುಗಳು ಅಥವಾ ನಾಮಧಾತುಗಳು :—**

ಮೂಲ ಧಾತುಗಳಷ್ಟೇ ಅಲ್ಲದೆ ನಾಮಪದಗಳಿಂದಲೂ ಧಾತುಗಳನ್ನು ಮಾಡಿಕೊಳ್ಳುವ ರೀತಿಯು ಎಲ್ಲ ಭಾಷೆಗಳಲ್ಲಿ ಕಂಡು ಬರುವದು. ಪ್ರೀತಿಸು, ಸೊಗಯಿಸು, ಮೊದಲಾದ ರೂಪಗಳನ್ನು ನೋಡಬಹುದು. ಇಂತಹವುಗಳಿಗೆ ಸಾಧಿತ ಅಥವಾ ನಾಮಧಾತುಗಳೆನ್ನುವರು. ಸಂಸ್ಕೃತ ಪ್ರಾಕೃತಗಳಲ್ಲಿ ನಾಮ ಧಾತುಗಳನ್ನು ಮಾಡಿಕೊಳ್ಳುವ ರೀತಿಯು ವಿಶೇಷವಾಗಿರುವದು. ಇಂಗ್ಲೀಷ ದಲ್ಲಿಯೂ How is the staff of your department? ಎಂದು ಕೇಳುವದರ ಬದಲು How is your dapartment staffed? ಎಂದು ಕೇಳುವದುಂಟು. ಅದೇಪ್ರಕಾರ Energy ಎಂಬ

ಮತ್ತು ೧ ನೆಯ ಗುಂಪಿನಂತೆ ಎಲ್ಲ ಕಾಲದಲ್ಲಿಯೂ ಮತ್ತು ಎಲ್ಲ ಅರ್ಥದಲ್ಲಿಯೂ ನಡೆಯುತ್ತವೆ. ಸಂಕೇತಾರ್ಥರೂಪಗಳು ಸ್ವತಂತ್ರವಿಲ್ಲ. ಈ ರೂಪಗಳನ್ನು ನಡೆಸುವದು ಸುಲಭವಿರುವದರಿಂದ ಪೂರ್ತಿಯಾಗಿ ನಡೆಸಿ ತೋರಿಸಿಲ್ಲ ಭವಿಷ್ಯತ್‌ಕಾಲದಲ್ಲಿ ಅಥವಾ ವಿಧ್ಯರ್ಥದಲ್ಲಿ ಇವುಗಳನ್ನು ನಡೆಯಿಸುವಾಗ ಮೊದಲು ಕರ್ಮಣಿಯ ಪ್ರತ್ಯಯಗಳನ್ನು ಹಚ್ಚಿ, ಆಮೇಲೆ ಭವಿಷ್ಯತ್‌ಕಾಲದ ಅಥವಾ ವಿಧ್ಯರ್ಥದ ಪ್ರತ್ಯಯಗಳುನ್ನ ಹಚ್ಚಲಾಗುವದು ಉದಾ - **पास + इज्ज+इस्स=पासिज्जिस्स, पास+इज्ज+एज्जा = पासिज्जेज्जा** ಮುಂತಾದವು. ಇದರಲ್ಲಿ ಗೊಂದಲವಾಗುವದರಿಂದ ಮೊದಲು ಕರ್ಮಣಿ ರೂಪವನ್ನು ಸಿದ್ಧಪಡಿಸಿ ಆಮೇಲೆ ಮೂಲ ಕ್ರಿಯಾಪದದಂತೆ ನಡೆಸಬೇಕು.

ಅನಿಯಮಿತ ಕರ್ಮಣಿ ರೂಪದ ಪಟ್ಟಿಯು ಡಾ॥ ಘಾಟಗೆ ಇವರ Introduction to Ardhamagadhi, ಎಂಬ ಪುಸ್ತಕದ ೨ ನೆಯ ಆವೃತ್ತಿಯ ೧೩೪ ನೆಯ ಪುಟದಿಂದ ತೆಗೆದುಕೊಂಡಿದೆ.

ನಾಮದಿಂದ To energise. ಎಂದೂ Atom ದಿಂದ To atomise ಎಂದೂ ರೂಪಗಳಾಗುವವನ್ನು ನೋಡಬಹುದು. ಅರ್ಧಮಾಗಧಿಯಲ್ಲಿಯೂ ನಾಮಧಾತುಗಳು ಉಪಯೋಗದಲ್ಲಿರುವವು.

**ನಾಮಧಾತುಗಳ ಪ್ರತ್ಯಯಗಳು — ***

(೧)ಅಂತ್ಯ ಸ್ವರವನ್ನು ದೀರ್ಘವಾಗಿ ಮಾಡಿ 'य' ಪ್ರತ್ಯಯವನ್ನು ಹಚ್ಚುವದು. ಉದಾ — **सिंह + य = सिंहाय** ಸಿಂಹದಂತೆ ಆಚರಿಸು. **अमर + य = अमराय** ದೇವತೆಗಳಂತೆ ಆಚರಿಸು.

(೨) ನಾಮಪದಕ್ಕೆ **ए** ಪ್ರತ್ಯಯ ಹಚ್ಚಿ ಅದೇ ಅರ್ಥದ ಧಾತುರೂಪಗಳನ್ನು ಮಾಡುವದು. ಉದಾ — **आहार + ए = आहारे** ಊಟಮಾಡು. ಅವೇ ಪ್ರಕಾರ **निमन्ते, ण्हाणे, उच्चारे, फासे** ಮೊದಲಾದವುಗಳು.

(೩) ನಾಮಪದಕ್ಕೆ **आवे** ಪ್ರತ್ಯಯವನ್ನು ಹಚ್ಚುವದರಿಂದ ಧಾತುಗಳನ್ನು ಮಾಡುವದು. ಉದಾ — **सद्द + आवे = सद्दावे** ಕರೆ. **मुक्खावे, उक्कपावे, धीरावे** ಮುಂ.

(೪) ಯಾವ ಪ್ರತ್ಯಯವನ್ನೂ ಹಚ್ಚದೆ ಅನೇಕಸಲ ನಾಮವನ್ನು ಕ್ರಿಯಾಪದದಂತೆ ಉಪಯೋಗಿಸಬಹುದು. ಕನ್ನಡದಲ್ಲಿ ಓದು, ಹಾಡು ಮುಂತಾದವುಗಳು ನಾಮ ಮತ್ತು ಧಾತು ಎರಡೂ ಆಗಿರುವವು. ಉದಾ— **अप्पिण** (अर्पण) ಅರ್ಪಿಸು. **पच्चप्पिण** ತಿರುಗಿ ಕೊಡು ಮುಂ.

* ಪ್ರೇರಣಾರ್ಥಕದಲ್ಲಿಯೂ **ए, आवे** ಪ್ರತ್ಯಯಗಳು ಬರುವದರಿಂದ ಆ ರೂಪಗಳಿಗೂ ನಾಮರೂಪಗಳಿಗೂ ಹೋಲಿಕೆಯುಂಟಾಗಿ ಗೊಂದಲವಾಗಬಹುದಾಗಿದೆ. ಆದರೆ ಉಪಯೋಗದಲ್ಲಿ ಎರಡೂ ರೂಪಗಳ ಅರ್ಥ ವಿಶೇಷಗಳನ್ನು ಲಕ್ಷಿಸಬೇಕು. ನಾಮಧಾತುಗಳೂ ಎಲ್ಲ ಕಾಲ ಮತ್ತು ಅರ್ಥದಲ್ಲಿ **ए** ಕಾರಾಂತ ಧಾತುಗಳಂತೆ ನಡೆಯುವವು. ಕರ್ಮಣಿ ಮತ್ತು ಪ್ರೇರಣಾರ್ಥಕಗಳೂ ಈ ಧಾತುಗಳಿಂದ ಆಗುವವು. **सद्दावे** ಇದರ ಎಲ್ಲ ಮುಖ್ಯ ರೂಪಗಳನ್ನು ತೃತೀಯಪುರುಷ ಏಕವಚನದಲ್ಲಿ ತೋರಿಸಿದೆ. ಉದಾ— **सद्दावेइ** (ವ). **सद्दावित्था** (ಭೂ). **सद्दाविस्सइ** (ಭ). **सद्दावेउ** (ಆ.) **सद्दावेज्जा** (ವಿಧ್ಯರ್ಥ.) **सद्दाविज्जइ** (ಕರ್ಮಣಿ ವರ್ತಮಾನ.) **सद्दावेयावेइ** (ಪ್ರೇ. ವರ್ತಮಾನ.) ಕೊನೆಯದು ಕ್ವಚಿತ್ತಾಗಿ ಉಪಯೋಗಿಸಲ್ಪಡುವದು. ಉಳಿದ ರೂಪಗಳನ್ನು ಹೀಗೆಯೆ ಮಾಡಿಕೊಳ್ಳಬೇಕು.

## ಶಬ್ದಸಂಗ್ರಹ

**अओ** (ಅ.) ಆದ್ದರಿಂದ
**अट्ठावय** (ಪು.) ಅಷ್ಟಾಪದ, ಪರ್ವತದ ಹೆಸರು
**अणाह** (ವಿ.) ಅನಾಥ
**अप्पमत्त** (ವಿ.) ಅಪ್ರಮತ್ತ, ಜಾಗರೂಕ
**अम्मधाई** (ಸ್ತ್ರೀ.) ದಾಯಿ
**अलित्त** (ವಿ.) ಅಲಿಪ್ತ
**अहिणव** (ವಿ.) ಹೊಸ, ಅಭಿನವ
**इच्छा** (ಸ್ತ್ರೀ) ಇಚ್ಛೆ
**उक्कुरुडिया** (ಸ್ತ್ರೀ.) ತಿಪ್ಪೆ
**उग्गम** (ಧಾ.) ಮೂಡು, ಹುಟ್ಟು
**उज्झ** (ಧಾ.) ಒಗೆ, ಚೆಲ್ಲು
**उत्तर** (ನ.) ಉತ್ತರ
**उप्पील** (ಪು.) [ಮಹಾ]ಪೂರ, ಓಘ
**उल्लस** (ಧಾ.) ಆನಂದಪಡು
**उवलिप्प** (ಧಾ.) ಹತ್ತು, ಲೇಪಿಸು
**एगन्त** (ಪು.) ಏಕಾಂತ
**कंख** (ಧಾ.) ಇಚ್ಛಿಸು
**कप्पर** (ಪು.) ಒಂದು ಹೆಸರು
**कलुस** (ಧಾ.) ಕೆಡಿಸು, ಕಲುಷಿತಗೊಳಿಸು
**कुल** (ನ.) ಕುಲ
**कोव** (ಪು.) ಸಿಟ್ಟು, ಕೋಪ
**खल** (ಪು.) ದುಷ್ಟ ಮನುಷ್ಯ
**खिज्ज** (ಧಾ.) ದುಃಖಿತನಾಗು, ಬಳಲು
**चाव** (ಪು.) ಬಿಲ್ಲು
**जम** (ಪು.) ಯಮ
**जहा** (ಅ.) ಹೇಗೆ, ಯಾವಪ್ರಕಾರ
**जुवराय** (ಪು.) ಯುವರಾಜ
**जोण्हा** (ಸ್ತ್ರೀ.) ಬೆಳದಿಂಗಳು, ಜ್ಯೋತ್ಸ್ನೆ
**तहा, तहेव** (ಅ.) ಹಾಗೆ, ಆಪ್ರಕಾರ
**दुक्कर** (ವಿ.) ದುಷ್ಕರ, ಮಾಡಲು ಕಠಿಣ
**दुट्ठ** (ವಿ.) ದುಷ್ಟ
**देवदत्त** (ಸ್ತ್ರೀ) ಒಬ್ಬ ಸ್ತ್ರೀಯ ಹೆಸರು
**धम्मिय** (ವಿ.) ಧಾರ್ಮಿಕ
**धवल** (ಧಾ.) ಹೊಳೆ, ಪ್ರಕಾಶ ಹೊಂದು
**धूया** (ಸ್ತ್ರೀ.) ಮಗಳು
**नगर** (ನ.) ನಗರ, ಪಟ್ಟಣ
**नंतर** (ಅ.) ನಂತರ, ಆ ಮೇಲೆ
**नह** (ನ.) ಆಕಾಶ
**निप्पिवास** (ವಿ.) ಇಚ್ಛೆಯಿಲ್ಲದ
**पच्चूस** (ಪು.) ಬೆಳಗುಮುಂಜಾನೆ
**पर** (ವಿ.) ಎರಡನೆಯ, ಅನ್ಯ
**पलायण** (ನ.) ಪಲಾಯನ, ಓಡಿ ಹೋಗುವದು
**पसिण** (ಪು.) ಪ್ರಶ್ನೆ
**पांचाल** (ಪು.) ಒಂದು ದೇಶದ ಹೆಸರು
**पावि** (ಪು.) ಪಾಪಿ
**पुण्णिमा** (ಸ್ತ್ರೀ) ಹುಣ್ಣಿವೆ
**पोत्थग** (ನ.) ಪುಸ್ತಕ
**बालत्तण** (ನ.) ಬಾಲ್ಯ
**भूय** (ನ.) ಭೂತ, ಪ್ರಾಣಿ ಸಮುದಾಯ

**भोजण, भोयण** (ನ.) ಭೋಜನ ಊಟ
**महालय** (ವಿ.) ದೊಡ್ಡ, ಭವ್ಯ
**मालागार** (ಪು.) ತೋಟಿಗ
**मित्ति** (ಸ್ತ್ರೀ.) ಗೆಳೆತನ
**वच्च** (ಧಾ.) ಹೋಗು
**वण्ण** (ಪು.) ವರ್ಣ, ಬಣ್ಣ
**वयण** (ನ.) ವಚನ
**वर** (ಧಾ.) ವರಸು, ಆರಿಸು
**वारि** (ನ.) ನೀರು
**विट्टाल** (ಧಾ.) ದೂಷಿತವಾಗು
**वुत्तन्त** (ಪು.) ವೃತ್ತಾಂತ, ಸುದ್ದಿ
**वेर** (ನ.) ವೈರ
**स** (ವಿ.) ಸ್ವ, ಸ್ವಂತದ
**सक्ख** (ನ.) ಸಖ್ಯ, ಗೆಳೆತನ
(ವಿ.) ಸಿಟ್ಟಿಗೆದ್ದ
**संकुल** (ವಿ.) ತುಂಬಿದ
**सद्दाव** (ಧಾ.) ಕರೆ
**सप्प** (ಪು.) ಸರ್ಪ
**सयं** (ಅ.) ಸ್ವಯಂ, ಸ್ವತಃ
**सयंवर** (ಪು.) ಸ್ವಯಂವರ
**सरिस** (ವಿ.) ಸದೃಶ, ಸಮಾನ
**सावय** (ಪು.) ಶ್ವಾಪದ, ಹಿಂಸ್ರಪಶು
**सीह** (ಪು.) ಸಿಂಹ
**सुए, सुवे** (ಅ.) ನಾಳೆ
**सुयण** (ಪು.) ಸುಜನ, ಒಳ್ಳೆಮನುಷ್ಯ
**सूरुग्गम** (ಪು.) ಸೂರ್ಯೋದಯ
**हर** (ಧಾ.) ಒಯ್ಯು, ತೆಗೆದುಕೊಂಡು ಹೋಗು
**हरण** (ನ.) ಒಯ್ಯುವದು, ನಾಶ
**हुयासण** (ಪು.) ಅಗ್ನಿ

(೧) ಕೆಳಗಿನ ರೂಪಗಳನ್ನು ಗುರುತಿಸಿರಿ :—

**कीरउ, नज्जिस्सइ, पहावेह, भिज्जेज्जा, सिंहायइ, गेण्हाविस्सामो, आरभावेज्जा, पवेसिज्जन्ति, घाएमो, पिज्जन्ति, होज्जसु, मन्ने, पाविज्जए, वुच्चइ, अरिहा, सिरसा, भण्णान्ति, भवओ, वयसा, पुच्छिज्जन्ति**

(೨) ರೂಪಗಳನ್ನು ಕೊಡಿರಿ :—

ಕರ್ಮಣಿ ರೂಪ ಕೊಡಿರಿ— **दक्ख, बन्ध, लह, हण, गच्छ.**
ಪ್ರೇರಣಾರ್ಥಕ ರೂಪ ಕೊಡಿರಿ— **गेण्ह, छिंद, दा, कर, मर**
ನಾಮಧಾತು ಕೊಡಿರಿ— **सच्च, आहार, अप्प, उक्खड, वंत**
ಭವಿಷ್ಯತ್ಕಾಲ(ಪ್ರೇರಣಾರ್ಥಕ)ಉ.ಪು.ಏ— **भण, गा, हो**
ವರ್ತಮಾನಕಾಲ(ಕರ್ಮಣಿ)ತೃ.ಪು.ಬ.— **चिन्त, सद्दावे.**

## ಭಾಷಾಂತರ

(೧) ಕನ್ನಡಕ್ಕೆ ಪರಿವರ್ತಿಸಿರಿ :—

(१) खामोमि मे सव्वे जीवा, सव्वे जीवा खमन्तु मे, मित्ती मे सव्वभूएसु, वेरं मज्झ ण केणइ । (२) ते एवं वयासी–‘ अम्हे तव धूयं जुवरन्नो भारियत्ताए वरेमो, दिज्जउ देवदत्ता भारिया जुवरन्नो । (३) भो सणंकुमार, अन्नजन्नम्मि वि मह तुमं चेव नाहो होज्जसु । (४) अहं हिंसं न करेमि, न य कारावेमि । (५) कणयमंजरी पढमं जणयं भुंजावेइ, नंतरं सगिहं गच्छइ, भोयणं करेइ य । (६) चंदो धवलिज्जइ पुण्णिमाए अह पुण्णिमा वि चंदेण । (७) जहा पोमं जले उग्गमइ परं नोवलिप्पइ वारिणा । एवं अलित्तं कामेहिं तं वयं बूम माहणं । (८) मियादेवी हुंडं दारगं पासित्था; अम्मधाई सद्दावेइ, एवं वयासी–‘ गच्छह तुब्भे, एयं दारगं उक्कुरुडियाए एगन्ते उज्झाहि। (९) उवणिज्जइ जीवियमप्पमायं, वण्णं जरा हरइ नरस्स रायं, पांचालराया वयणं सुणाहि, मा कासि कम्माइं महालयाइं । (१०)पउमावई एवं चिन्तेइ-“न नज्जइ बहुदुट्ठसावयसंकुले भीसणे वणे किं पि हवइ । ता अप्पमत्ता हवामि” । (११) जस्स अत्थि मच्चुणा सक्खं, जस्स चत्थि पलायणं, जो जाणे न मरिस्सामि सो हु कंखे ‘ सुए सिया ’ । (१२) जेण कुलं कलुसिज्जइ सुयणा खिज्जन्ति उल्लसंति खला । मरणे वि हु सप्पुरिसा न तं आयरन्ति । (१३) इह लोए निप्पिवासस्स नत्थि किं चि वि दुक्करं । (१४) जण्हुकुमारं आणवेइ-निरुवेह अन्नं अट्ठावयसरिसं सेलं’ । (१५) निवो अणगारस्स पाए विणएण वन्दइ, भणइ य ‘ भगवं, एत्थ मे खमे ’ । (१६) राया पडिभासइ ‘ अभओ, मा भाहि ’ । (१७) जो कोइ कोवं करेज्ज सो कप्परो व्व सप्पो परभवे हवेज्ज । (१८) एयं अणाहं वग्घो सिंहो वा जइ भक्खेज्जा ता मे का गई । अओ सूरुग्गमं जाव रक्खामि एयं । पच्चूसे वच्चउ एसा सइच्छाए । (१९) देहि मम गामं एगं, अहं तुज्झ जं रुच्चइ गामं वा नगरं वा तं देमि । (२०) हुयासणो डहे सव्वं । जलुप्पीलो विणासए । सव्वस्स हरणं चापि करेइ संकुद्धो जमो ।

(೨) ಅರ್ಧಮಾಗಧಿಯಲ್ಲಿ ಭಾಷಾಂತರಿಸಿರಿ :—

(೧) ರಾಜನು ಮಂತ್ರಿಯನ್ನು ಕರೆದನು ಮತ್ತು — "ಸೇವಕರಿಂದ ಸೈನ್ಯದ ಮಾಹಿತಿಯನ್ನು ತರಿಸು" ಎಂದು ಆಜ್ಞೆ ಮಾಡಿದನು. (೨) ಈ ಕೆಲಸವನ್ನು ನಾನು ಸ್ವತಃ ಮಾಡುವದಿಲ್ಲ ಅಥವಾ ಬೇರೆಯವರಿಂದ ಮಾಡಿಸುವದಿಲ್ಲ. (೩) ನನ್ನ ಹಿರಿಯರು ನನ್ನಿಂದ ಬಾಲ್ಯದಲ್ಲಿಯೆ ಧಾರ್ಮಿಕ ಪುಸ್ತಕಗಳನ್ನು ಓದಿಸಿದರು. (೪) ಸ್ವತಃ ಹಿಂಸೆ ಮಾಡಬಾರದು ಮತ್ತು ಎರಡನೆಯವರಿಗೆ ಮಾಡಗೊಡಬಾರದು. (೫) ಸೈನ್ಯದಿಂದ ಶತ್ರುಗಳ ಮನೆಗಳು ಸುಡಲ್ಪಡುತ್ತವೆ. (೬) ದುಷ್ಟರಿಂದ ಸಜ್ಜನರಿಗೆ ಪೀಡೆಯು ಕೊಡಲ್ಪಡುತ್ತದೆ. (೭) ಸಿಂಹಸೇನ ರಾಜಕುಮಾರನು ತನ್ನ ಮಿತ್ರರನ್ನು ಕರೆದನು ಮತ್ತು "ನನ್ನ ಸಂಗಡ ತೋಟದೊಳಗೆ ಬನ್ನಿರಿ" ಎಂದು ವಿನಂತಿ ಮಾಡಿದನು. (೮) ಯಕ್ಷನು ರಾಜಕುಮಾರಿಯನ್ನು ಒಯ್ದನು ಮತ್ತು ದೇವತೆಯ ಪಾದಗಳಿಗೆ ನಮಸ್ಕರಿಸುವಂತೆ ಮಾಡಿದನು. (೯) ಜ್ಞಾನಿಗಳು ಸ್ವತಃ ಸುಳ್ಳು ಹೇಳುವದಿಲ್ಲ ಮತ್ತು ಎರಡನೆಯವರಿಗೆ ಹೇಳಗೊಡುವದಿಲ್ಲ. (೧೦) ನಿಜ ಶಾಸ್ತ್ರದ ಅರ್ಥವನ್ನು ತಿಳಿಯಬೇಕು ಮತ್ತು ಆ ಪ್ರಕಾರ ಆಚರಿಸಬೇಕು. (೧೧) ಅಜಿತಶತ್ರು ರಾಜನು ಹೊಸ ದೇವಾಲಯಗಳನ್ನು ಕಟ್ಟಿಸಿದನು. (೧೨) ಶಿಕ್ಷಕರು ಬಾಲಕರಿಂದ ಪ್ರಶ್ನೆಗಳ ಉತ್ತರಗಳನ್ನು ದೊರಕಿಸಿದರು. (೧೩) ತಾಯಿಯು ಮಕ್ಕಳನ್ನು ನಮಸ್ಕಾರ ಮಾಡಹಚ್ಚುತ್ತಾಳೆ. (೧೪) ರಾಜಕನ್ಯೆಯು ತೋಟಿಗನಿಂದ ತೋಟದಿಂದ ಹೂಗಳನ್ನು ತರಿಸಿದಳು. (೧೫) ಸೀತೆಯ ಸ್ವಯಂವರದಲ್ಲಿ ರಾಮನಿಂದ ಶಿವಧನುಸ್ಸು ಮುರಿಯಲ್ಪಟ್ಟಿತು. (೧೬) ಯಜ್ಞದ ಕಾಲದಲ್ಲಿ ಅನೇಕ ಬ್ರಾಹ್ಮಣರಿಗೆ ಊಟಕ್ಕೆ ಹಾಕುತ್ತಾರೆ. (೧೭) ಬೆಳದಿಂಗಳಿಂದ ಆಕಾಶವು ಉಜ್ವಲಗೊಳಿಸಲ್ಪಡುತ್ತದೆ. (೧೮) ಪಾಪಿಜನರಿಂದ ಗಂಗಾನದಿಯು ದೂಷಿತಗೊಳಿಸಲ್ಪಡಬಹುದೆ? (೧೯) ರಾಜನು ಅಕ್ಷಯಕುಮಾರನ ಮನೆಯನ್ನು ರತ್ನ ಹೊನ್ನುಗಳಿಂದ ತುಂಬಿಸಿದನು. (೨೦) ಸ್ವರ್ಗದಿಂದ ಅಮೃತವು ತರಲ್ಪಟ್ಟರೆ ಬಾಲಕನಿಗೆ ಜೀವವು ತಿರುಗಿ ಬರುವದು.

## ಪಾಠ. ೧೩

## ಕೃದಂತಗಳು (ಧಾತುಸಾಧಿತ)–ವರ್ತಮಾನಕಾಲವಾಚಕ, ಕರ್ತರಿ ಮತ್ತು ಕರ್ಮಣಿ.

ಸಂಸ್ಕೃತ ಮತ್ತು ಪ್ರಾಕೃತಗಳಲ್ಲಿ ಕ್ರಿಯಾಪದಕ್ಕಿಂತಲೂ ಕೃದಂತ ಅಥವಾ ಧಾತುಸಾಧಿತಗಳನ್ನು ಹೆಚ್ಚಾಗಿ ಉಪಯೋಗಿಸುವರು. ಧಾತುಗಳಿಗೆ ಆಖ್ಯಾತ ಪ್ರತ್ಯಯಗಳನ್ನು ಹಚ್ಚುವದರಿಂದ ಕ್ರಿಯಾಪದಗಳೂ, ಇತರ ಪ್ರತ್ಯಯಗಳಿಂದ ಧಾತುಸಾಧಿತ ಅಥವಾ ಕೃದಂತಗಳೂ ಆಗುವವು. ಇವು ನಾಮ, ವಿಶೇಷಣ, ಅಥವಾ ಅವ್ಯಯಗಳಾಗುವವು. ಮೊದಲಿನವೆರಡು ವಿಭಕ್ತಿ ಪ್ರತ್ಯಯಗಳನ್ನು ಹೊಂದುವವು. ಇದರಿಂದ ಧಾತುಸಾಧಿತಗಳನ್ನು **ವಿಕಾರಿ** ಮತ್ತು **ಅವಿಕಾರಿ** ಎಂದು ಎರಡು ಭಾಗವಾಗಿ ಮಾಡಬಹುದು. ಮೊದಲನೆಯದರಲ್ಲಿ ಮೂರು ಪ್ರಕಾರಗಳೂ, ಎರಡನೆಯದರಲ್ಲಿ ಎರಡು ಪ್ರಕಾರಗಳೂ ಇರುವವು. ಅವುಗಳನ್ನು ಕೆಳಗೆ ತೋರಿಸಿದೆ.

**ಕೃದಂತ ಅಥವಾ ಧಾತುಸಾಧಿತಗಳು**

| **ವಿಕಾರಿ** | **ಅವಿಕಾರಿ** |
|---|---|
| (೧) ವರ್ತಮಾನಕಾಲವಾಚಕ | (೧) ಪೂರ್ವಕಾಲವಾಚಕ |
| (೨) ಭೂತಕಾಲವಾಚಕ | (೨) ಹೇತ್ವರ್ಥಕ |
| (೩) ವಿಧ್ಯರ್ಥದರ್ಶಕ | |

ಇದಲ್ಲದೆ ಭವಿಷ್ಯತ್‌ಕಾಲವಾಚಕ ಕೃದಂತಗಳು ಅಲ್ಲಲ್ಲಿ ಕಂಡುಬಂದರೂ ಅರ್ಧಮಾಗಧಿಯಲ್ಲಿ ಅವುಗಳ ಉಪಯೋಗವು ವಿಶೇಷವಿಲ್ಲ. ವಿಕಾರಿ ಕೃದಂತಗಳು ವಿಶೇಷಣಗಳಂತೆ ಉಪಯೋಗವಾಗುವದರಿಂದ ಅವು ಮುಂದಿನ ವಿಶೇಷ್ಯ ನಾಮದ ಲಿಂಗ ವಚನ ವಿಭಕ್ತಿಗಳನ್ನು ಅನುಸರಿಸುವವು. ಇದಲ್ಲದೆ ಭೂತಕಾಲವಾಚಕ ಮತ್ತು ವಿಧ್ಯರ್ಥ ಕೃದಂತಗಳನ್ನು ಕ್ರಿಯಾಪದಗಳ ಸ್ಥಾನದಲ್ಲಿಯೂ ಉಪಯೋಗಿಸುವರು. ಮೊದಲು ಕೃದಂತಗಳು ಹೇಗೆ ಸಿದ್ಧವಾಗುವವೆಂಬದನ್ನು ವಿಚಾರಿಸಿ ಆಮೇಲೆ ಅವುಗಳ ಉಪಯೋಗವನ್ನು ಹೇಳಲಾಗುವದು.

## ವರ್ತಮಾನಕಾಲವಾಚಕ ಕೃದಂತ ಅಥವಾ ಧಾತುಸಾಧಿತ ವಿಶೇಷಣ—

ವರ್ತಮಾನ ಕೃದಂತ ವಿಶೇಷಣಗಳನ್ನು ಕನ್ನಡದಲ್ಲಿಯೂ ಹೆಚ್ಚಾಗಿ ಬಳಸುವರು ಆದರೆ ಅವು ಮುಂದಿನ ವಿಶೇಷ್ಯ ನಾಮದಂತೆ ಬದಲಾಗುವದಿಲ್ಲ. ಉದಾ— ಆಡುವ ಹುಡುಗ, ಹಾಡುವ ಹುಡುಗೆ, ಹಾರುವ ಹಕ್ಕಿ ಮುಂ. ಆದರೆ ಅರ್ಧಮಾಗಧಿಯಲ್ಲಿ ಕೃದಂತವು ಮುಂದಿನ ನಾಮದಂತೆ ಬದಲಾಗುವ ದೆಂಬದನ್ನು ಮೇಲೆ ತೋರಿಸಿದೆ. ವರ್ತಮಾನ ಕೃದಂತ ವಿಶೇಣಗಳು **ಕರ್ತರಿ** ಮತ್ತು, **ಕರ್ಮಣಿ** ಎಂದು ಎರಡು ಪ್ರಕಾರವಾಗಿರುವವು. ಕನ್ನಡದಲ್ಲಿ 'ಕರ್ಮಣಿ' ಕೃದಂತದ ಉಪಯೋಗವು ಕಡಿಮೆ. ಕರ್ತರಿ ಕೃದಂತವನ್ನೇ ಕರ್ಮಣಿ ಅರ್ಥದಲ್ಲಿ ಉಪಯೋಗಿಸುವರು. ಉದಾ— ಓದುವ ಪುಸ್ತಕ ಎಂದರೆ ಓದಲ್ಪಡುವ ಪುಸ್ತಕವೆಂದು ಅರ್ಥ. ಮಾರುವ ಮನೆ-ಮಾರಲ್ಪಡುವ ಮನೆ ಎಂದು ಅರ್ಥ.

**अन्त** ಮತ್ತು **माण** ಇವು ವರ್ತಮಾನ ಕೃದಂತ ಪ್ರತ್ಯಯಗಳು. ಕರ್ತರಿ, ಕರ್ಮಣಿ ಎರಡಕ್ಕೂ ಇವು ಎರಡೂ ಪ್ರತ್ಯಯಗಳನ್ನು ಉಪಯೋಗಿ ಸುವರು. ಇವುಗಳನ್ನು ಹಚ್ಚುವಾಗ ಆಗುವ ಬದಲಾವಣೆಗಳನ್ನು ಕೆಳಗೆ ತೋರಿಸಿದೆ.

**ಕರ್ತರಿ ಕೃದಂತಗಳು—**

(೧) **अ** ಕಾರಾಂತ ಧಾತುಗಳಿಗೆ **अन्त, माण** ಇವುಗಳಲ್ಲಿ ಬೇಕಾದುದನ್ನು ಹಚ್ಚಬಹುದು. ಇವಕ್ಕೆ ಯಾವ ವಿಕಾರಗಳೂ ಆಗುವದಿಲ್ಲ ಉದಾ—**हस+अन्त =हसन्त, हस + माण = हसमाण,** ಅದೇ ಪ್ರಕಾರ **गच्छन्त, गच्छमाण; चिट्ठन्त, चिट्ठमाण** ಮುಂ.

(೨) **अ** ಕಾರಾಂತವಲ್ಲದ ಧಾತುಗಳಿಗೆ **माण** ಪ್ರತ್ಯಯವು ಬರುವದಿಲ್ಲ. ಆದರಿಂದ **गामाण, होमाण, नेमाण** ಇತ್ಯಾದಿ ರೂಪಗಳು ಕಂಡುಬರುವದಿಲ್ಲ.

(೩) **आ** ಕಾರಾಂತ ಧಾತುಗಳಿಗೆ **अन्त** ಪ್ರತ್ಯಯ ಹಚ್ಚುವಾಗ ಅದು **न्यत** ಎಂದಾಗುವದು. ಉದಾ— **गा+अन्त=गायन्त, ठायन्त, वायन्त** ಮುಂ.

(೪) **ए, ओ** ಕಾರಾಂತ ಧಾತುಗಳಿಗೆ **अन्त** ಪ್ರತ್ಯಯ ಹಚ್ಚುವಾಗ ಅದರ **अ** ಲೋಪವಾಗುವದು. ಉದಾ— **ने + अन्त = नेन्त, हो + अन्त = होन्त, दे + अन्त = देन्त** ಮುಂ.

(ಆ) ಎರಡನೆಯ ವರ್ಗದ **कर** ಮೊದಲಾದ ಧಾತುಗಳಿಗೂ, **ए, आवे** ಮೊದಲಾದ ಪ್ರತ್ಯಯಗಳು ಬಂದಿರುವ ಧಾತುಗಳಿಗೂ **अन्त, माण** ಎರಡೂ ಪ್ರತ್ಯಯಗಳನ್ನು ಹಚ್ಚಬಹುದು. **माण** ಪ್ರತ್ಯಯವನ್ನು ಹಚ್ಚುವಾಗ ಯಾವ ಬದಲಾವಣೆಯೂ ಆಗುವದಿಲ್ಲ. ಉದಾ- **फुरे + माण = फुरेमाण; करे+माण=करेमाण; भक्खे + माण = भक्खेमाण; नेयावे + माण =नेयावेमाण;** ಮುಂ. ಆದರೆ **अन्त** ಪ್ರತ್ಯಯ ಹಚ್ಚುವಾಗ अ ಕಾರವು ಲೋಪವಾಗಿ ಕೇವಲ **न्त** ಮಾತ್ರ ಹತ್ತುವದು. ಉದಾ- **करे+अन्त=करेन्त; पासे+अन्त= पासेन्त: भक्खे+अन्त=भक्खेन्त;** ಮುಂ.

## ವರ್ತಮಾನ ಕರ್ಮಣಿ ಕೃದಂತಗಳು –

ಧಾತುಗಳಿಗೆ ಮೊದಲು **इज्ज** ಪ್ರತ್ಯಯವು ಬರುವದು. ಆ ಮೇಲೆ **अन्त** ಅಥವಾ **माण** ಪ್ರತ್ಯಯವು ಬರುವದು. ಕೆಲವು ಧಾತುಗಳು **इज्ज** ಪ್ರತ್ಯಯ ವಿಲ್ಲದೆ ಕರ್ಮಣಿ ರೂಪಗಳನ್ನು ಹೊಂದುವವು. ಆಗ **अन्त** ಅಥವಾ **माण** ಹಚ್ಚಿದರೆ ಸಾಕು. ಉದಾ – **हस + इज्ज + अन्त = हसिज्जन्त** ಅಥವಾ **हसिज्जमाण**. ಅದೇ ಪ್ರಕಾರ **पासिज्जन्त, पासिज्जमाण; नेइज्जन्त, नेइज्जमाण; गाइज्जन्त, गाइज्जमाण;** कर > **कीर** ಕರ್ಮಣಿ ರೂಪ. **कीर+अन्त=कीरन्त** ಅಥವಾ **कीरमाण**. ಅದೇ ಪ್ರಕಾರ तर > **तीर; तीरन्त, तीरमाण** ಮುಂ.

ಕೃದಂತ ವಿಶೇಷಣಗಳು ವಿಶೇಷ್ಯನಾಮದ ಲಿಂಗವನ್ನು ಅನುಸರಿಸುವವು. ಪುಲ್ಲಿಂಗ, ನಪುಂಸಕಲಿಂಗಗಳಲ್ಲಿ ಅವು अ ಕಾರಾಂತ ನಾಮ (**नर, कम्म**) ಗಳಂತೆಯೂ ಸ್ತ್ರೀಲಿಂಗದಲ್ಲಿ **ई** ಪ್ರತ್ಯಯ ಹೊಂದಿ **ई** ಕಾರಾಂತ ಸ್ತ್ರೀಲಿಂಗ (**पुहवी**) ನಾಮಗಳಂತೆಯೂ ನಡೆಯುವವು. **ई** ಪ್ರತ್ಯಯ ಹಚ್ಚಲು ಅವು **गच्छन्ती, गच्छमाणी, पासन्ती, पासिज्जन्ती, करेन्ती, कीरमाणी,** ಈ ಪ್ರಕಾರ ಆಗುವವು.*

* ಭೂತಕೃದಂತಗಳು ಸ್ತ್ರೀಲಿಂಗದಲ್ಲಿ **आ** ಕಾರಾಂತ ಸ್ತ್ರೀಲಿಂಗ ನಾಮಗಳಂತೆ ನಡೆಯುವವು. ಆದರೆ ವರ್ತಮಾನಕೃದಂತಗಳು **ई** ಕಾರಾಂತ ಸ್ತ್ರೀಲಿಂಗಗಳಂತೆ ನಡೆಯುವವು. **गच्छन्ती** ಎಂಬಲ್ಲಿ ಕೊನೆಯ ಸ್ವರವು ದೀರ್ಘ **ई** ಇರುವದೆಂಬದನ್ನು ನೆನಪಿನಲ್ಲಿಡಬೇಕು. ಇಲ್ಲವಾದರೆ **गच्छन्ति** ಎಂಬುದು ವರ್ತಮಾನಕಾಲ ತೃ. ಪು. ಬಹುವಚನ ರೂಪವಾಗುವದು.

**ಉಪಯೋಗ** –(೧) ವಿಶೇಷಣವಂತೆ :—

ಕರ್ತರಿ ಅಥವಾ ಕರ್ಮಣಿ ವರ್ತಮಾನ ಕೃದಂತಗಳ ಉಪಯೋಗವು ವಿಶೇಷವಾಗಿ ವಿಶೇಷಣಗಳಂತೆಯೇ ಆಗುವದು. ಆಗ ಅವು ಮುಂದಿನ ವಿಶೇಷ್ಯ ನಾಮದ ಲಿಂಗ ವಚನ ವಿಭಕ್ತಿಗಳನ್ನು ಅನುಸರಿಸುವವು. ಉದಾ —

**ಕರ್ತರಿ** –

**पाढसालाए गच्छमाणो कुमारो** ಶಾಲೆಗೆ ಹೋಗುವ ಬಾಲಕನು.

**गायन्ती कुमारी** ಹಾಡುತ್ತಿರುವ ಹುಡುಗಿಯು

**गुरूवं हसन्त बालग** ನಗುತ್ತಿರುವ ಸುಂದರನಾದ ಬಾಲಕನನ್ನು

**ಕರ್ಮಣಿ** –

**वायसेण निज्जमाणो मूसिगो** ಕಾಗೆಯಿಂದ ಒಯ್ಯಲ್ಪಡುವ ಇಲಿಯು.

**साहुगा पाविज्जन्ती भिक्खा** ಸಾಧುವಿನಿಂದ ದೊರಕಿಸಲ್ಪಡುವ ಭಿಕ್ಷೆಯು

**सन्तुट्ठमणसा दिज्जमाणं दाणं** ಸಂತುಷ್ಟಮನಸ್ಸಿನಿಂದ ಕೊಡಲ್ಪಡುವ ದಾನವು *

ಹೆಚ್ಚಿನ ಉದಾಹರಣೆಗಳು :—

(೧) **अह सो तत्थ निज्जन्ती दिस्स पाणे भयद्दुए** ।

(೨) **चीवराइं विसारन्ती जहा जाय त्ति पासिया** ।

(೩) **जाई कुलं च सीलं च रक्खमाणी तयं वए** ।

(೪) **नन्दीसरदीवं वच्चन्तेहि वाणमन्तरीहि चम्पाए कुमारनन्दी पंचसयमहिलापरिवारो उवललन्तो दिट्ठो** ।

(೨) **ಸಂಕೇತಾರ್ಥ** –

ಸಂಕೇತಾರ್ಥದಲ್ಲಿ ಬೇರೆ ಪ್ರತ್ಯಯಗಳಿಲ್ಲವೆಂಬದನ್ನು ಹಿಂದೆ ಹೇಳಿದೆ **अन्त** ಪ್ರತ್ಯಯಾಂತ ರೂಪವನ್ನೇ ಉಪಯೋಗಿಸುವರು ಅದು ಪ್ರಥಮಾ ವಿಭಕ್ತಿಯಲ್ಲಿದ್ದು ಕರ್ತೃವನ್ನು ವಿಶೇಷಿಸುವದು ಉದಾ —

೧ **तं जइ णं मोग्गरपाणिजक्खे सन्निहिए होन्ते से णं किं ममं एयारूवं आवइं पाविज्जमाणं पासन्ते?** ಆ ಮೋಗ್ಗರಪಾಣಿ ಯಕ್ಷನು ಇಲ್ಲಿ ಸನ್ನಿಹಿತನಾಗಿರುತ್ತಿದ್ದರೆ ನಾನು ಇಂತಹ ಆಪತ್ತನ್ನು ಹೊಂದಿರುವದನ್ನು ನೋಡುತ್ತಿದ್ದನೆ ?

---

* ಕರ್ಮಣಿ ಉಪಯೋಗದಲ್ಲಿ ಕರ್ತೃವು ತೃತೀಯಾ ವಿಭಕ್ತಿಯಲ್ಲಿದ್ದು ಕೃದಂತವು ಕರ್ಮವನ್ನು ಅನುಸರಿಸುವದನ್ನು ಲಕ್ಷಿಸಬೇಕು. ಪ್ರಯೋಗ ವಿಚಾರದಲ್ಲಿ ಇದನ್ನು ವಿವರಿಸಲಾಗುವದು.

೨. जइ घरे दीवे होन्तो, तो चोरो धणं न हरन्तो - ಮನೆಯಲ್ಲಿ ದೀಪ ವಿರುತ್ತಿದ್ದರೆ ಕಳ್ಳನು ಧನವನ್ನು ಅಪಹರಿಸುತ್ತಿದ್ದಿಲ್ಲ.

೩. को होज्ज गई पहियाणं, जं से वडपायवे न होन्तो। ಆ ಆಲದ ಗಿಡವು ಇರದಿದ್ದರೆ ದಾರಿಕಾರರ ಗತಿಯು ಏನಾಗುವದು ?

ಸಂಕೇತಾರ್ಥದಲ್ಲಿ जइ तो ಎಂಬ ಅವ್ಯಯಗಳೂ ಅಥವಾ 'ज' ಸಂಬಂಧಾರ್ಥಕ ಸರ್ವನಾಮದ ರೂಪಗಳೂ ಬರುವವೆಂಬುದನ್ನು ಲಕ್ಷಿಸಬೇಕು.

## (೩) ಬೇರೆ ಉಪಯೋಗಗಳು

೧. ಕರ್ತೃವು ಒಂದು ಕ್ರಿಯೆಯೊಡನೆ ಮತ್ತೊಂದು ಕ್ರಿಯೆಯನ್ನು ಮಾಡುವವನು ಎಂಬಲ್ಲಿ ವರ್ತಮಾನ ಕೃದಂತವನ್ನು ಉಪಯೋಗಿಸುವರು. ಉದಾ– पुरओ जुगमायाए पेहमाणो महिं चरे। ಮುಂದೆ ನಾಲ್ಕುಮೊಳ ನೋಡುತ್ತ ನೆಲದ ಮೇಲೆ ನಡೆಯಬೇಕು.

೨. ಮಿಶ್ರವಾಕ್ಯದಲ್ಲಿ ಉಪವಾಕ್ಯದ ಕ್ರಿಯಾಪದದ ಸ್ಥಾನದಲ್ಲಿ ವಿಶೇಷಣದಂತೆ ಉಪಯೋಗಿಸಬಹುದು. ಉದಾ– धम्मं कुणमाणस्स सफला जन्ति राईओ। ಧರ್ಮವನ್ನು ಆಚರಿಸುವವನ ರಾತ್ರಿಗಳು ಸಫಲವಾಗುವವು.

## ಶಬ್ದಸಂಗ್ರಹ

अद्धा (ಅ.) ಸಲುವಾಗಿ
अणुराग (ಪು.) ಪ್ರೇಮ
अणुहव (ಧಾ.) ಅನುಭವಿಸು
अद्धाण (ನ.) ಮಾರ್ಗ, ಪ್ರವಾಸ
अन्न (ನ.) ಅನ್ನ
अफल (ವಿ.) ನಿಷ್ಫಲ, ವ್ಯರ್ಥ
अमोह (ವಿ.) ತಪ್ಪದೆ, ವ್ಯರ್ಥವಾಗದ
अवस्सं (ಅ.) ಅವಶ್ಯವಾಗಿ
अहि (ಪು.) ಸರ್ಪ
आरक्खग (ಪು.) ಆರಕ್ಷಕ, ಪೋಲೀಸ
आवेक्ख (ಧಾ.) ನಿರೀಕ್ಷಿಸು, ಕಾಳಜಿ ತೆಗೆದುಕೊಳ್ಳು
इण (ಅ.) ನಿಶ್ಚಯಾರ್ಥಸೂಚಕ
उरग (ಪು.) ಸರ್ಪ, ಹಾವು
ओरुज्झ (ಧಾ.) ತಡೆ, ಪೀಡಿಸು
कयविक्कय (ಪು.) ಕ್ರಯವಿಕ್ರಯ
कुंभ (ಪು.) ಕೊಡ
कुलाल (ಪು.) ಕುಂಬಾರ
केसि (ಪು.) ಒಂದು ಹೆಸರು
कोदंड (ಪು.) ಬಿಲ್ಲು
गस (ಧಾ.) ತಿನ್ನು
गह (ಪು.) ಗ್ರಹ
गामाणुगामं (ಅ.ಸ.) ಗ್ರಾಮದಿಂದ ಗ್ರಾಮಕ್ಕೆ

**गुणमाला** (ಸ್ತ್ರೀ.) ಒಬ್ಬ ಸ್ತ್ರೀಯ ಹೆಸರು
**घड** (ಪು.) ಕೊಡ, ಪಾತ್ರೆ
**चडफड** (ಧಾ.) ಚಡಪಡಿಸು
**जंबुय** (ಪು.) ನರಿ
**जीविय** (ನ.) ಜೀವಿತ, ಆಯುಷ್ಯ
**झर** (ಧಾ.) ಸೋರು, ಒಸರು
**डस** (ಧಾ.) ಕಚ್ಚು, ಕಡಿ
**तारिस** (ವಿ.) ಅಪ್ರಕಾರದ
**तेल्ल** (ನ.) ಎಣ್ಣೆ
**दवाणल** (ಪು.) ಕಾಡ್ಗಿಚ್ಚು
**दिण** (ಪು.) ದಿವಸ
**दुह** (ನ.) ದುಃಖ
**दुहि** (ವಿ.) ದುಃಖಿ
**दुहिया, धूया** (ಸ್ತ್ರೀ.) ಮಗಳು
**दोस** (ಪು.) ದೋಷ
**निवड** (ಧಾ.) ಬೀಳು
**पइ** (ಅ.) ಪ್ರತಿ, ಪ್ರತ್ಯೇಕ
**पइट्ठा** (ಸ್ತ್ರೀ.) ಪ್ರತಿಷ್ಠೆ, ಮುಕ್ತಿ ಯಿಂದ ಸಂಸಾರದ ಬಿಡುಗಡೆ
**पइदिण** (ನ.) ಪ್ರತಿದಿನ
**पओयण** (ನ.) ಉಪಯೋಗ, ಪ್ರಯೋಜನ
**पंजली** (ಸ್ತ್ರೀ.) ಬೊಗಸೆ
**पड** (ಧಾ.) ಬೀಳು
**पमाय** (ಧಾ.) ತಪ್ಪುಮಾಡು
**परिरक्ख** (ಧಾ.) ರಕ್ಷಿಸು
**पवज्ज** (ಧಾ.) ಹೋಗು
**पह** (ಪು.) ಬೀದಿ, ರಸ್ತೆ
**पहिय** (ಪು.) ಪಥಿಕ, ದಾರಿಕಾರ
**पाण** } **पाणि** } (ಪು.) ಪ್ರಾಣಿ
**पायव** (ಪು.) ಗಿಡ
**पाहेय** (ನ.) ದಾರಿಯಬುತ್ತಿ
**पिण्ड** (ಪು.) ಪಿಂಡ, ಉಂಡೆ
**पुरओ** ಮುಂದೆ, ಎದುರಿಗೆ
**पेर** (ಧಾ.) ಪ್ರೇರಿಸು
**बिडाल** (ಪು.) ಬೆಕ್ಕು
**भंग** (ಪು.) ಭಂಗ, ನಾಶ
**भुज्जो** (ಅ.) ಪುನಃ, ಮತ್ತೆ ಮತ್ತೆ
**भुयंग** (ಪು.) ಹಾವು
**मणोहारि** (ವಿ.) ಮನೋಹರ, ಸುಂದರ
**मणोरम** (ವಿ.) ಸುಂದರ
**मन्त** (ಧಾ.) ಆಲೋಚಿಸು
**महन्त** (ಪು.) ದೊಡ್ಡಮನುಷ್ಯ
**मायावित्त** (ನ.) ಕಪಟದಕೃತಿ
**मुणमुण** (ಧಾ.) ಗುಣಗುಟ್ಟು
**मुय** (ಧಾ.) ಬಿಡು, ಒಗೆ
**मोक्खमग्गी** (ವಿ.) ಮೋಕ್ಷಮಾರ್ಗದ
**मोह** (ಪು.) ಮೋಹ
**रइ** (ಸ್ತ್ರೀ.) ರತಿ, ಪ್ರೇಮ
**री** (ಧಾ.) ಹೋಗು
**रुव, रुय** (ಧಾ.) ಅಳು
**लालप्प** (ಧಾ.) ಒದರು, ಅಳು
**वट्ट** (ಧಾ.) ಇರು
**वराअ, वराग, वराय** (ಪು.) ನೀಚ ಮನುಷ್ಯ

वाणिय, वणिय (ಪು.) ಬಣಜಿಗ ವ್ಯಾಪಾರಿ
विक्कीण (ಧಾ.) ಮಾರು
विचार, वियार (ಧಾ.) ವಿಚಾರ ಮಾಡು
विजय (ಪು.) ಒಂದು ಹೆಸರು
सरण (ನ.) ಶರಣ, ಆಶ್ರಯ

सवत्ति (ಸ್ತ್ರೀ.) ಸವತಿ
सिप्पि (ಪು.) ಶಿಲ್ಪಿ
सिरि (ನ.) ವೈಭವ, ಐಶ್ವರ್ಯ
सुहदायग (ವಿ.) ಸುಖದಾಯಕ
सुहि (ವಿ.) ಸುಖಿ
सेय (ವಿ.) ಬಿಳಿಯ
हर (ಪು.) ಕಳ್ಳ

**ಅಭ್ಯಾಸ**

(೧) ಕೆಳಗಿನ ರೂಪಗಳನ್ನು ಗುರುತಿಸಿರಿ :—

**जन्ती, पुच्छिज्जमाणा, समाणे, पेरिज्जन्तं, वाहिज्जमाणं, भण्णमाणी, हम्ममाणेहिं, पडन्तस्स, कारावेन्तो, वारिज्जन्तेहिं, परिब्भमन्तेहिन्तो, आणिज्जन्तं, दिसन्ता, उग्गाहन्तीहिं, सन्तो, दीसन्ती, कीरन्त, डज्झमाणं, गच्छन्तेण, रुयन्ती.**

(೨) ರೂಪಗಳನ್ನು ಕೊಡಿರಿ :—

[ಅ] ವರ್ತಮಾನ ಕರ್ತರಿ ಕೃದಂತ ವಿಶೇಷಣಗಳು :—

**का, अणुहव, दे, आरुह, वन्द, हो, लिह, गिण्ह, रम, बे.**

[ಆ] ವರ್ತಮಾನ ಕರ್ಮಣಿ ಕೃದಂತ ವಿಶೇಷಣಗಳು :—

**खा, मुंच, जाण, रुंभ, वय, डह, कर, पविस, हो, ने.**

(೧) ಕನ್ನಡಕ್ಕೆ ಪರಿವರ್ತಿಸಿರಿ :—

**(१) अधम्मं कुणमाणस्स अफला जन्ति राईओ । (२) पेरिज्जन्तो उ पुराकम्मेहिं केहि वि वराओ सुहमिच्छन्तो दुल्लहजणाणुराए जणो पडइ । (३) जइ हं अन्धो न होन्तो तो दिणयरं पासन्तो । (४) गामाणुगामं रीयन्ते से महाजसे विप्पे वाणारसीए बहिया मणोरमे उज्जणे आगच्छइ । (५) केसिमेवं बुवन्तं गोयमो इणमब्बवी । (६) मच्चुणा गसिज्जमाणं जीवियं को रक्खइ ? (७) एवं मन्तन्ताणं मन्तीणं निवो तत्थ आगच्छित्था । (८) विजओ राया गुणमालाए सह रज्जसिरिं अणुहवन्तो गमेइ कालं । (९) एवमेवं**

लालप्पमाणं हरा हरन्ति त्ति कहं पमाए। (१०) चउत्थो तं ठागं रक्खन्तो पइदिणं एगं अन्नपिण्डं मुयन्तो गमेइ कालं। (११) सवत्तीओ चिन्तन्ति–'राया इमीए सिप्पियदुहियाए गुणदोसे न वियारेइ, रज्जकज्जाइं नावेक्खइ, इमीए मायावित्तेहि विणासिज्जन्तं दव्वं पि न गणइ। (१२) जो महन्तं अद्धाणं अपाहेओ पवज्जइ, गच्छन्तो सो दुही होई, परं सपाहेओ गच्छन्तो सुही होइ। (१३) को होज्ज गई पहियाणं जंसि वडपायवं न होन्तो। (१४) कीणन्तो कइओ होई, विक्कीणन्तो य वाणिओ, कयविक्कयम्मि वट्टन्तो भिक्खू न भवइ तारिसो। (१५) जहा चन्दं गहाईया चिट्ठन्ते पजलीउडा, वन्दमाणा नमंसन्ता उत्तमं मणहारिणो। (१६) संपइ एस पावकारी अणिच्छमाणीए वि मे अवस्स सीलभंगं करिस्सइ। (१७) जहा वयं धम्मं अयाणमाणा पावं पुरा अकासि मोहा। ओरुज्झमाणा परिरक्खयन्ता तं नेव भुज्जो समायरामो। (१८) जरामरणकम्माणं डज्झमाणाणं पाणिणं, धम्मो दीवो पइट्ठा य गई सरणमुत्तमं। (१९) ताओ रायं भणन्ति 'एसा मज्झण्हे किं पि मुणमुणन्ती चिट्ठइ दिणे दिणे कं चि वेलं। (२०) अमोहाहिं पडन्तीहिं गिहंसि न रइं लभे।

(೨) ಅರ್ಧಮಾಗಧಿಯಲ್ಲಿ ಭಾಷಾಂತರಿಸಿರಿ :—

(೧)ತೋಟದಲ್ಲಿ ಆಡ್ಡಾಡುತ್ತಿರುವಾಗ ರಾಜಪುತ್ರಿಗೆ ಸರ್ಪವು ಕಚ್ಚಿತು. (೨) ಧರ್ಮದ ಬುತ್ತಿಯು ಸಂಗಡ ಇರುವ ಮೋಕ್ಷಮಾರ್ಗಿಯಾದ ಜೀವದ ಪ್ರವಾಸವು ಸುಖಕರವಾಗುವದು. (೩) ನದಿಯ ದಂಡೆಯ ಮೇಲೆ ಚಡಪಡಿಸುತ್ತಿರುವ ಕಪ್ಪೆಯನ್ನು ತಿನ್ನುತ್ತಿರುವ ಒಂದು ಬೆಕ್ಕನ್ನು ವಿಜಯಘೋಷನು ನೋಡಿದನು. (೪) ನಾವು ನೋಡುತ್ತಿರುವಾಗಲೆ ಎಲ್ಲ ಸಗರ ಪುತ್ರರು ಒಂದೇ ಕಾಲಕ್ಕೆ ಮರಣ ಹೊಂದಿದರು. (೫) ಹೂವಿಗೆ ವಾಸವಿರದಿದ್ದರೆ ದೇವರಿಗೆ ಅದನ್ನು ಅರ್ಪಿಸಬೇಡ. (೬) ಒದರುತ್ತಿರುವ ನರಿಯು ಆನೆಯನ್ನು ನೋಡಿತು. (೭) ಆಕಾಶದಿಂದ ಬೀಳುತ್ತಿರುವ ಚಿಕ್ಕೆಯನ್ನು ನಾನು ನೋಡಿದೆನು. (೮) ಬಿಲ್ಲು ಇರದಿದ್ದರೆ ಬಾಣದಿಂದೇನು ಪ್ರಯೋಜನ? (೯) ರಾಜನು ಪಟ್ಟಣದ ಹೊರಗೆ ಬರುತ್ತಿರುವಾಗ ನೀರು ತರುತ್ತಿರುವ ಸ್ತ್ರೀಯರು ಎದುರಿಗೆ ಬಂದರು. (೧೦) ಕಳ್ಳನು ಮನೆಯಲ್ಲಿ ಪ್ರವೇಶಿಸುತ್ತಿರುವದನ್ನು ನಾನು ನೋಡಿದೆನು. (೧೧) ಎಣ್ಣೆಯ ಪಾತ್ರೆಯು ಸೋರುತ್ತಿರಲು ಅದನ್ನು

ಹಾಗೆಯೆ ಒಯ್ಯುತ್ತಿರುವ ಒಬ್ಬ ಮನುಷ್ಯನನ್ನು ಸಾಧುವು ನೋಡಿದನು. (೧೨)ಊರಿಂದೂರಿಗೆ ತಿರುಗುತ್ತ ಭಗವಂತರಾದ ಮಹಾವೀರರು ಕೋಸಂಬೀ ನಗರಕ್ಕೆ ಬಂದರು. (೧೩) ಜನರು ನಮಸ್ಕಾರ ಮಾಡುತ್ತಿರುವಾಗ ಸಾಧುವು ಧರ್ಮವನ್ನು ಹೇಳುತ್ತಿದ್ದನು. (೧೪) ಹಣವನ್ನು ಕಳವು ಮಾಡುತ್ತಿರುವಾಗ ಪೋಲೀಸರು ಅವನನ್ನು ಹಿಡಿದರು. (೧೫) ಅರಣ್ಯದಲ್ಲಿ ಪ್ರವೇಶಿಸಿದಮೇಲೆ ಒಂದು ಬಿಳಿಯ ಮನೆಯಿಂದ ಅಳುತ್ತಿರುವ ಸ್ತ್ರೀಯ ದನಿಯನ್ನು ಅವನು ಕೇಳಿದನು. (೧೬) ಆಶ್ರಮಕ್ಕೆ ತಿರುಗಿ ಹೋಗುತ್ತಿರುವ ಸಾಧುವಿಗೆ ರಾಜನು ನಮಸ್ಕಾರ ಮಾಡಿದನು. (೧೭) ರಾಮನು ವನಕ್ಕೆ ಹೋಗಲು ದಶರಥನು ಮರಣ ಹೊಂದಿದನು. (೧೮) ಅಗಡದತ್ತನು ನಗರದಲ್ಲಿರಲು ನಮಗೆ ಯಾವ ಅಂಜಿಕೆಯಿದೆ? (೧೯)ಅರಣ್ಯಕ್ಕೆ ಉರಿಹತ್ತಲು ಶ್ವಾಪದಗಳು ಓಡಿ ಹೋದವು. (೨೦) ಚಕ್ರವರ್ತಿಯಾದ ಸಣಂಕುಮಾರನು ಸುನಂದಾ ರಾಣಿಯೊಡನೆ ಸುಖದಿಂದ ಕಾಲಕಳೆದನು.

# ಪಾಠ ೧೪

## ಭೂತಕಾಲವಾಚಕ ಧಾತಸಾಧಿತ (ಕೃದಂತ) ಗಳು.

ವರ್ತಮಾನಕಾಲವಾಚಕ ಕೃದಂತಗಳಂತೆಯೆ ಭೂತಕಾಲವಾಚಕ ಕೃದಂತಗಳು ಕರ್ತರಿ ಮತ್ತು ಕರ್ಮಣಿ ಎಂದು ಎರಡು ವಿಧವಾಗಿವೆ. ಕರ್ಮಣಿ ಭೂತಕಾಲವಾಚಕ ಧಾತುಸಾಧಿತದ ಉಪಯೋಗವೇ ವಿಶೇಷವಾಗಿರುವದು. ಕರ್ತರಿ ಭೂತ ಕೃದಂತವು ಕ್ವಚಿತ್ತಾಗಿ ಉಪಯೋಗಿಸಲ್ಪಡುವದು. ಈ ಭೂತಕೃದಂತಗಳ ಉಪಯೋಗವು ವಿಶೇಷಣದಂತೆಯೂ, ಕ್ರಿಯಾಪದ ದಂತೆಯೂ ಆಗುವದು. ಆದರೆ ಕ್ರಿಯಾಪದದ ಸ್ಥಾನದಲ್ಲಿ ಬಂದರೂ ಅವು ವಿಶೇಷಣಗಳೇ ಆಗಿರುವವೆಂಬದನ್ನು ಲಕ್ಷಿಸಬೇಕು. ವಿಶೇಷಣಗಳಾದಾಗ ವಿಶೇಷ್ಯದ ಲಿಂಗ ವಚನ ವಿಭಕ್ತಿಗಳನ್ನು ಅನುಸರಿಸುವವು. ಕ್ರಿಯಾಪದದ ಸ್ಥಾನದಲ್ಲಿ ಬಂದಾಗ ವಿವಿಧ ಪ್ರಯೋಗಗಳಲ್ಲಿ ಬೇರೆ ಬೇರೆ ರೀತಿಯಿಂದ ಉಪಯೋಗವಾಗುವದು.

**ಭೂತ ಕರ್ಮಣಿ ಕೃದಂತಗಳು** —

**ಇಯ** ಇದು ಭೂತಕಾಲವಾಚಕ ಕರ್ಮಣಿ ಧಾತುಸಾಧಿತ (ಕೃದಂತ) ವಿಶೇಷಣದ ಪ್ರತ್ಯಯವಾಗಿರುವದು. ಮೂರೂ ವರ್ಗದ ಧಾತುಗಳಿಗೂ

ಹತ್ತುವದು. ಧಾತುವಿಗೆ ಯಾವ ವ್ಯತ್ಯಾಸವೂ ಆಗುವದಿಲ್ಲ. ಉದಾ :— **पास+इय=पासिय, हस+इय=हसिय, गा+इय=गाइय, ने+इय=नेइय, हो+इय =होइय** ಮುಂ.*

ಭೂತಕಾಲವಾಚಕ ಕರ್ಮಣಿ ಕೃದಂತಗಳನ್ನು ಕ್ರಿಯಾಪದಗಳ ಸ್ಥಾನದಲ್ಲಿಯಾಗಲಿ ವಿಶೇಷಣದಂತೆಯಾಗಲಿ ಉಪಯೋಗಿಸಿದಾಗ ಅವು ಪುಲ್ಲಿಂಗ ನಪುಂಸಕಲಿಂಗಗಳಲ್ಲಿ **अ** ಕಾರಾಂತ ನಾಮಗಳಂತೆ (**नर, कम्म**) ನಡೆಯುತ್ತವೆ. ಸ್ತ್ರೀಲಿಂಗದಲ್ಲಿ '**आ**' ಪ್ರತ್ಯಯವನ್ನು ಹಚ್ಚಿ **आ** ಕಾರಾಂತ ಸ್ತ್ರೀಲಿಂಗ ನಾಮಗಳಂತೆ (**देवया**) ನಡೆಸುತ್ತಾರೆ.

## ಕ್ರಿಯಾಪದದ ಸ್ಥಾನದಲ್ಲಿ ಉಪಯೋಗ —

ಭೂತ ಕರ್ಮಣಿ ಕೃದಂತ ವಿಶೇಷಣವು ಕರ್ಮಣಿ ವಾಕ್ಯದಲ್ಲಿಯೆ ಉಪಯೋಗಿಸಲ್ಪಟ್ಟರೂ ಉಪಯೋಗವು ಅನೇಕ ವಿಧವಾಗಿರುವದು. ಕ್ರಿಯಾಪದವು ಸಕರ್ಮಕ ಅಥವಾ ಅಕರ್ಮಕವಿರುವದರಮೇಲಿಂದ ಭೂ. ಕ. ಕೃ. ವಿಶೇಷಣದ ಉಪಯೋಗದ ರೀತಿಯೂ ಬೇರೆ ಬೇರೆಯಾಗುವದು. ಭೂತಕಾಲದಲ್ಲಿ ಕ್ರಿಯಾಪದವನ್ನು ಇಡುವದರ ಬದಲು ಭೂ. ಕ. ಕೃ. ವಿಶೇಷಣಗಳನ್ನು ಉಪಯೋಗಿಸುವರು.

* ಆದರೆ ಹಲವು ಭೂತ ಕರ್ಮಣಿ ಕೃದಂತ ರೂಪಗಳು ಸಂಸ್ಕೃತದಿಂದ ನೇರವಾಗಿ ತದ್ಭವ ನಿಯಮಗಳಿಗೆ ಅನುಸರಿಸಿ ತೆಗೆದುಕೊಳ್ಳಲ್ಪಟ್ಟಿವೆ. ಅವುಗಳಿಗೆ ಸಂಸ್ಕೃತದಿಂದ ಬಂದ ಧಾತುಸಾಧಿತಗಳೆನ್ನಬಹುದು. ಅವುಗಳಲ್ಲಿ ಮುಖ್ಯವಾದವುಗಳನ್ನು ಮುಂದೆ ಕೊಟ್ಟಿದೆ. (ಡಾ. ಘಾಟಗೆ. ವ್ಯಾಕರಣ. ಪು. ೧೦೯)

| | | |
|---|---|---|
| गम > **गय** | कर > **कय, कड** | जाण > **नाय** |
| आरभ > **आरद्ध** | छिंद > **छिन्न** | बंध > **बध्द** |
| लह > **लद्ध** | पय > **पक्क** | गा > **गीय** |
| नस > **नट्ठ** | पाव > **पत्त** | तर > **तिण्ण** |
| सुण > **सुय** | चव > **चुय** | हण > **हय** |
| डह > **दड्ढ** | दे > **दिन्न** | ने > **नीय** |
| मर > **मय, मड** | पास > **दिट्ठ** | पविस > **पविट्ठ** |
| चिट्ठ > **ठिय** | वय > **वुत्त** | |

(೧) **ಕ್ರಿಯಾಪದವು ಸಕರ್ಮಕವಿದ್ದರೆ–**

ಕರ್ತೃವು **ತೃತೀಯೆಯಲ್ಲಿ,** ಕರ್ಮವು **ಪ್ರಥಮೆಯಲ್ಲಿ,** ಮತ್ತು ಭೂ. ಕ. ಕೃ. ವಿಶೇಷಣವು **ಕರ್ಮಪದದ ಲಿಂಗ ವಚನ ವಿಭಕ್ತಿಗಳ**ನ್ನನುಸರಿಸುವದು. ಉದಾ–

**वग्घेण मओ हत्थी दिट्ठो**– ಹುಲಿಯಿಂದ ಸತ್ತ ಆನೆಯು ನೋಡಲ್ಪಟ್ಟಿತ್ತು.

**निवेण पया रक्खिया**– ರಾಜನಿಂದ ಪ್ರಜೆಗಳು ರಕ್ಷಿಸಲ್ಪಟ್ಟರು.

**बालाए पुप्फाणि गहियाणि**– ಬಾಲಿಕೆಯಿಂದ ಹೂಗಳು ತೆಗೆದು–ಕೊಳ್ಳಲ್ಪಟ್ಟವು.

(೨) **ಕ್ರಿಯಾಪದವು ಸಕರ್ಮಕವಿದ್ದು, ಕರ್ಮವು ಅಧ್ಯಾಹೃತವಿದ್ದರೆ. ಅಥವಾ ಮುಂದಿನ ಇಡಿಯ ವಾಕ್ಯವೇ ಕರ್ಮವಾಗಿದ್ದರೆ–**

ಕರ್ತೃವು ತೃತೀಯೆಯಲ್ಲಿ, ಮತ್ತು ಭೂತ ಕರ್ಮಣಿ ಕೃದಂತ ವಿಶೇಷಣವು **ನಪುಂಸಕಲಿಂಗ ಪ್ರಥಮಾ ಏಕವಚನದಲ್ಲಿ** ಇರುವವು. ಉದಾ–

**मुणिणा भणियं**– ಸಾಧುವಿನಿಂದ ಹೇಳಲ್ಪಟ್ಟಿತು. **तेण चिन्तियं**– ಅವನಿಂದ ಆಲೋಚಿಸಲ್ಪಟ್ಟಿತು. **देवीए पडिसुयं**– ದೇವಿಯಿಂದ ಕೇಳಲ್ಪಟ್ಟಿತು. **तेहिं नायं "जहा ईइसे न होन्ति"** ಈ ಪ್ರಕಾರ ಆಗುವದಿಲ್ಲವೆಂಬದು ಅವರಿಂದ ತಿಳಿಯಲ್ಪಟ್ಟಿತು.

(೩) **ಕ್ರಿಯಾಪದವು ಅಕರ್ಮಕವಾಗಿದ್ದರೆ–**

ಕರ್ತೃವು **ಪ್ರಥಮೆಯಲ್ಲಿ**ದ್ದು ಭೂ. ಕ. ಕೃ ವಿಶೇಷಣವು **ಕರ್ತೃವಿನ ಲಿಂಗ ವಚನ ವಿಭಕ್ತಿಗಳನ್ನು ಅನುಸರಿಸುವದು.** ಉದಾ–

**राया मओ** ರಾಜನು ಸತ್ತನು. **सीया उज्जाणं गया**– ಸೀತೆಯು ಉದ್ಯಾನಕ್ಕೆ ಹೋದಳು. **राया नयराओ पत्थिओ**– ರಾಜನು ನಗರದಿಂದ ಹೊರಟನು.

**ವಿಶೇಷಣಗಳಂತೆ ಉಪಯೋಗ–**

ಭೂ. ಕ. ಕೃ. ವಿಶೇಷಣವು ವಿಶೇಷಣದಂತೆ ಉಪಯೋಗವಾದಾಗ ಮುಂದಿನ ವಿಶೇಷ್ಯದ ಲಿಂಗ ವಚನ ವಿಭಕ್ತಿಗಳನ್ನನುಸರಿಸುವದು. ಉದಾ–

೧. **सियालेण मारियं जीवं सीहो न भक्खइ**– ನರಿಯಿಂದ ಕೊಲ್ಲಲ್ಪಟ್ಟ ಪ್ರಾಣಿಯನ್ನು ಸಿಂಹವು ತಿನ್ನುವದಿಲ್ಲ.

೨. **मायाए अणुसासिया कन्ना पइगिहे सुहेण नन्दन्ति** – ತಾಯಿಯಿಂದ ಉಪದೇಶಿಸಲ್ಪಟ್ಟ ಕನ್ಯೆಯರು ಪತಿಗೃಹದಲ್ಲಿ ಸುಖದಿಂದ ಇರುತ್ತಾರೆ.

೩. **लयाओ पडियाइं पुप्फाइं कुमारी गुण्हइ** – ಬಳ್ಳಿಯಿಂದ ಬಿದ್ದ ಹೂಗಳನ್ನು ಕುಮಾರಿಯು ತೆಗೆದುಕೊಳ್ಳುತ್ತಾಳೆ.

**ಇತರ ಉಪಯೋಗ –**

**अस** ಅಥವಾ **भू** ಧಾತುವಿನ ರೂಪಗಳೊಡನೆ ಪೂರ್ಣ ಭೂತಕಾಲದ ಅರ್ಥದಲ್ಲಿ ಉಪಯೋಗಿಸುವರು. ಉದಾ – **तत्तो चुओ जण्हुसुओ जाओ सि तुमं** – ಅಲ್ಲಿಂದ ಚ್ಯುತನಾದ ಮೇಲೆ ನೀನು ಜಹ್ನುಪುತ್ರನಾಗಿ ಹುಟ್ಟಿದಿ.

**ಕರ್ತರಿ –**

ಭೂತ ಕರ್ಮಣಿ ಕೃದಂತಗಳಿಗೆ **वन्त** ಪ್ರತ್ಯಯ ಹಚ್ಚಲು ಭೂತ ಕರ್ತರಿ ಕೃದಂತಗಳಾಗುವವು. ಉದಾ – **पास+इय+वन्त=पासियवन्त, हसिय+वन्त=हसियवन्त** ಮುಂ. ಇವುಗಳನ್ನು ಪ್ರಯೋಗ ಬದಲಿಸುವಾಗ ಕರ್ಮಣಿ ಕೃದಂತಗಳ ಸ್ಥಾನದಲ್ಲಿ ಉಪಯೋಗಿಸುವರು. ಅದನ್ನು ಪ್ರಯೋಗ ಪ್ರಕರಣದಲ್ಲಿ ವಿವರಿಸಲಾಗುವದು. *

## ಶಬ್ದಸಂಗ್ರಹ

**अक्खाणय** (ನ.) ಕತೆ
**अक्खाय** (ಭೂ.ಕೃ.ವಿ.) ಹೇಳಲ್ಪಟ್ಟ
**अच्चब्भुय** (ವಿ.) ಅತ್ಯದ್ಭುತ
**अच्छरा** (ಸ್ತ್ರೀ.) ಅಪ್ಸರೆ
**अजिय** (ಪು.) ಒಂದು ಹೆಸರು
**अणाइय** (ವಿ.) ಅನಾದಿಯಾದ
**अणुदियहं** (ಅ.) ಪ್ರತಿ ದಿವಸ
**अणुसास** (ಧಾ.) ಉಪದೇಶಿಸು
**अत्थगिरि** (ಪು.) ಅಸ್ತಾಚಲ
**अदाणभय** (ನ.) ಕೊಡದಿರುವ ಭೀತಿ
**अद्दाय** (ಪು.) ಕನ್ನಡಿ
**अंध** (ವಿ.) ಕುರುಡ
**अन्तेउर** (ನ.) ಅಂತಃಪುರ
**अन्नया** (ಅ.) ಒಮ್ಮೆ
**अभिण्ण** (ವಿ.) ಅಭಿನ್ನ, ಒಂದೇ ಬಗೆಯ
**अभिवाय** (ಧಾ.) ನಮಸ್ಕರಿಸು
**अय** (ಪು.) ಆಡು

* **वन्त** ಪ್ರತ್ಯಯವನ್ನು ಭೂತಕರ್ಮಣಿ ಕೃದಂತ ವಿಶೇಷಣಕ್ಕೆ ಹಚ್ಚುತ್ತಾರೆ. ಆದರೆ ಕರ್ಮಣಿ ರೂಪಕ್ಕೆ ಹಚ್ಚುವದಿಲ್ಲ.

अह (ನ.) ದಿವಸ
अहेसर (ಪು.) ಸೂರ್ಯ
अहो (ಅ.) ಕೆಳಗೆ
आउ (ನ.) ಆಯುಷ್ಯ
आउल (ವಿ.) ವ್ಯಾಕುಲ
आउलिहूय (ಭೂ ಕ.ಕೃ.ವಿ.) ಗಾಬರಿಯಾದ
आगय (ಭೂ.ಕೃ.ವಿ.) ಬಂದ
आयण्ण (ಧಾ.) ಕೇಳು
आसाय (ಧಾ.) ರುಚಿನೋಡು
आहय (ಭೂ.ಕ.ಕೃವಿ.) ಕೊಲ್ಲಲ್ಪಟ್ಟ
उद्देस (ಪು.) ಪ್ರದೇಶ
उब्भन्त (ವಿ.) ಭ್ರಾಂತ
उम्मत्त (ವಿ.) ಉನ್ಮತ್ತ
उवगम (ಧಾ.) ಸಮೀಪಕ್ಕೆ ಹೋಗು
एत्थन्तरम्मि (ಅ.) ಅಷ್ಟರಲ್ಲಿ
एवमाइ, एमाइ(ಅ.) ಈ ಪ್ರಕಾರವಾಗಿ
ओइण्ण (ಭೂ.ಕೃವಿ.) ಇಳಿದ
कइवय (ವಿ.) ಕೆಲವು
कणकतेय (ಪು.) ಒಂದುಹೆಸರು
कंबल (ನ.) ಕಂಬಳಿ
कसिण (ವಿ.) ಕೃಷ್ಣ. ಕಪ್ಪು
कीलत्थं (ಅ.) ಆಟಕ್ಕಾಗಿ
कुच्छि (ಸ್ತ್ರೀ.) ಕುಕ್ಷಿ, ಹೊಟ್ಟೆ
कुंडिण (ಪು.) ಒಂದುಊರಹೆಸರು
कुबेर (ಪು.) ಕುಬೇರ, ಒಬ್ಬದೇವ
कूव (ಪು.) ಬಾವಿ
कोऊहल (ನ.) ಕುತೂಹಲ

खज्ज (ನ.) ಖಾದ್ಯ, ತಿನಸು
खित्त (ಭೂ.ಕ.ಕೃ.ವಿ.) ಒಗೆಯಲ್ಪಟ್ಟ
खिव (ಧಾ.) ಒಗೆ
गब्भ (ಪು.) ಗರ್ಭ, ಹೊಟ್ಟೆ, ಜೀವ
गब्भिण (ವಿ.) ಗರ್ಭಧರಿಸಿದ
गय (ಭೂ.ಕೃ.ವಿ.) ಹೋದ
चरण, चलण (ಪು.ನ.) ಪಾದ
चित्तगय (ಪು.)ಒಂದು ಹೆಸರು
चित्ता (ಪು.) ಒಂದು ನಕ್ಷತ್ರ, ಚಿತ್ರಾ
चुय (ಭೂ ಕೃ.ವಿ.) ಬಿದ್ದ
छड्ड (ಧಾ.) ಒಗೆ, ಬಿಡು
छाय (ಧಾ.) ಮುಚ್ಚು, ಆವರಿಸು
जहा तहा (ಅ.) ಹೇಗೆ-ಹಾಗೆ
जाय (ಭೂ.ಕೃ.ವಿ.) ಆದ, ನಡೆದ, ಹುಟ್ಟಿದ
जायग (ಪು.) ಯಾಚಕ, ಭಿಕ್ಷುಕ
जिणघर (ನ.) ಜಿನ ಮಂದಿರ
जीवावे (ಧಾ.) ಬದುಕಿಸು
जुगबाहु (ಪು) ಒಂದು ಹೆಸರು
जेट्ठ (ವಿ.) ಹಿರಿಯ
जोणि (ಪು.ಸ್ತ್ರೀ.) ಯೋನಿ, ಜನ್ಮ
झत्ति (ಅ.) ಕೂಡಲೆ, ತೀವ್ರ
ठिय (ಭೂ.ಕೃ.ವಿ) ಇಟ್ಟ, ಉಳಿದ
तणय (ಪು.) ಮಗ
तम (ನ.) ಕತ್ತಲೆ
तित्थयर (ಪು.) ತೀರ್ಥಂಕರ
तिरिक्ख (ಪು.) ತಿರ್ಯಕ್,ಪಶುಪಕ್ಷಿ

तोड (ಧಾ.) ಮುರಿ, ಒಡೆ
दृट्ठ (ಭೂ. ಕೃ.ವಿ.) ಕಡಿದ, ಕಚ್ಚಿದ
दढसत्ति (ಪು.) ದೃಢಶಕ್ತಿ, ಒಂದು ಹೆಸರು
दरिद्द (ಪು.) ಬಡವ
दिअ (ಪು.) ದ್ವಿಜ, ಬ್ರಾಹ್ಮಣ
दिसा (ಸ್ತ್ರೀ.) ದಿಶೆ, ದಿಕ್ಕು
धणवन्त (ವಿ.) ಧನವಂತ
धन्न (ನ.) ಧಾನ್ಯ
नमी (ಪು.) ಒಬ್ಬರಾಜನಹೆಸರು
नरय (ಪು.) ನರಕ
नियर (ಪು.)ಸಮೂಹ, ರಾಶಿ
निवह (ಪು.) ಗುಂಪು, ಸಮೂಹ
नीहर (ಧಾ.) ಹೊರಗೆತೆಗೆ, ಬರು, ಆಕ್ರಂದನಮಾಡು
पच्छन्न (ಭೂ.ಕೃ.ವಿ.) ಅಡಗಿದ, ಗುಪ್ತ
पडियागय (ಭೂ.ಕೃ.ವಿ.) ತಿರುಗಿ ಬಂದ
पत्त (ಭೂ.ಕೃ.ವಿ.) ಬಂದ, ಮುಟ್ಟಿದ
पमोय (ಪು.) ಆನಂದ, ಪ್ರಮೋದ
परिवुड (ಭೂ.ಕೃ.ವಿ.) ಸುತ್ತುವರಿಯಲ್ಪಟ್ಟ
पवर (ವಿ.) ಪ್ರವರ, ಶ್ರೇಷ್ಠ
पविट्ठ (ಭೂ.ಕೃ.ವಿ.) ಪ್ರವೇಶಿಸಿದ
पसूअ (ಭೂ.ಕೃ.ವಿ.) ಪ್ರಸೂತ,ಹಡೆದ
पाण (ನ.) ಪಾನ, ಕುಡಿಯುವಿಕೆ, ಕುಡಿಯುವದು
पिट्ठ (ನ.) ಬೆನ್ನು
बंभलोग (ಪು.) ಬ್ರಹ್ಮಲೋಕ ಸ್ವರ್ಗದ ಒಂದು ಭಾಗ
बोक्कड (ಪು.) ಟಗರು, ಹೋತು
भग्ग (ಭೂ.ಕೃ.ವಿ.) ಭಗ್ನ, ಮುರಿದ
भव (ಪು.) ಜನ್ಮ
भाउ (ಪು.) ಬಂಧು
भाग (ಪು.) ಭಾಗ, ಪಾಲು
भीमरह (ಪು.) ಒಂದು ಹೆಸರು
भूय, हूय (ಭೂ.ಕೃ.ವಿ.) ಆದ
मंगल (ವಿ.) ಮಂಗಲ
मय (ಭೂ.ಕೃ.ವಿ.) ಸತ್ತ
मयहर (ಪು.) ಗ್ರಾಮದ ಮುಖ್ಯಸ್ಥ, ಗೌಡ
मयहरिया(ಸ್ತ್ರೀ.)ಪ್ರಮುಖಳಾದ ಸ್ತ್ರೀ
महक्कंद (ಪು.) ದೊಡ್ಡ ದನಿಯಿಂದ ಅಳುವದು
मही (ಸ್ತ್ರೀ.) ಭೂಮಿ
माणुस (ಪು.) ಮನುಷ್ಯ
मास (ಪು.) ತಿಂಗಳು
मुद्दा (ಸ್ತ್ರೀ.) ಮುದ್ರೆ
मूढ (ವಿ.) ಮೂಢ, ಮೂರ್ಖ
मूलं (ಅ.) ಹತ್ತಿರ, ಬಳಿಯಲ್ಲಿ
रुट्ठ (ಭೂ.ಕೃ.ವಿ.) ಸಿಟ್ಟಿಗೆದ್ದ
लोल (ಧಾ.) ಹೊರಳಾಡು
वयण (ನ.) ವದನ, ಮುಖ
वसग (ವಿ.) ವಶವಾದ
वाड (ಪು.) ಬಲಿ
वासव (ಪು.) ಇಂದ್ರ, ಒಂದುಹೆಸರು

**विजया** (ಸ್ತ್ರೀ.) ವಿಜಯಾ, ಒಂದು ಹೆಸರು
**विमुक्क** (ಭೂ.ಕೃ.ವಿ.) ಬಿಡಲ್ಪಟ್ಟ
**विमोह** (ಧಾ.) ಮೋಹಗೊಳಿಸು
**विविह** (ವಿ.) ಅನೇಕ ಪ್ರಕಾರದ
**विसयसुह** (ನ.) ವಿಷಯ ಸುಖ, ಸಂಸಾರಸುಖ
**वोल** (ಧಾ.) ಹೋಗು, ತಿರುಗಾಡು
**संधयार** (ವಿ.) ಕತ್ತಲೆಯುಳ್ಳ
**संनिरुध्द** (ಭೂ.ಕೃ.ವಿ.) ತಡೆಯಲ್ಪಟ್ಟ
**संपत्त** (ಭೂ.ಕೃ.ವಿ.) ಬಂದ
**संभव** (ಧಾ.) ಸಂಭವಿಸು, ಆಗು
**सम** (ವಿ.) ಸಮಾನ
**सयं** (ಅ.) ಕೂಡ, ಸಂಗಡ
**समाण, सन्त** (ವ.ಕೃ.ವಿ.) ಇರುವ
**समुप्पन्न** (ಭೂ.ಕೃ.ವಿ.) ಉಂಟಾದ, ಆದ
**संमुहं** (ಅ.) ಎದುರಿಗೆ
**संविहाण** (ನ.) ಸಂವಿಧಾನ, ಘಟನೆ
**संवेग** (ಪು.) ಸಂಸಾರದಲ್ಲಿಅನಾಸಕ್ತಿ, ಮೋಕ್ಷದ ಇಚ್ಛೆ
**संसय** (ಪು.) ಸಂಶಯ
**साणुराग** } **साणुराय** } (ವಿ.) ಪ್ರೇಮವುಳ್ಳ
**साहस्सी** (ಸ್ತ್ರೀ.) ಒಂದು ಸಾವಿರ
**सिग्घं** (ಅ.) ಶೀಘ್ರ
**सिविया** (ಸ್ತ್ರೀ.) ಪಲ್ಲಕ್ಕಿ
**सिविर** (ನ.) ಶಿಬಿರ
**सुमिण** } **सुविण** } (ನ.) ಕನಸು, ಸ್ವಪ್ನ
**सुय** (ಭೂ.ಕೃ.ವಿ.) ಕೇಳಿದ
**सुहेसि** (ವಿ.) ಸುಖ ಇಚ್ಛಿಸುವ
**हरिस** (ಪು.) ಹರ್ಷ, ಆನಂದ
**हरिसभर** (ಪು.) ಹರ್ಷತುಂಬಿದ
**हव्वं** (ಅ.) ಶೀಘ್ರ, ಬೇಗ
**हार** (ಪು.) ಹಾರ, ಮಾಲೆ
**हाहारव** (ಪು.) ಹಾಹಾದನಿ
**हियय** (ನ.) ಹೃದಯ
**हिरण्ण** (ನ.) ಬಂಗಾರ

**ಅಭ್ಯಾಸ**

(೧) ರೂಪಗಳನ್ನು ಗುರುತಿಸಿರಿ :—

**ओइण्णं, उववन्ना, छूडा, हिण्डिया, अणुट्ठियं, पडिवन्नं, अणुरत्ता, पडिबुध्दा, दिन्नं, पाडियं, कीरिया, मुकेहिं, पुच्छिया, दिट्ठवन्ता, रया, मुणिओ, ठियं, कयवन्तो, गहिओ, जाओ.**

(೨) ರೂಪಗಳನ್ನು ಕೊಡಿರಿ :—

[ಅ] ಭೂತಕಾಲವಾಚಕ ಕರ್ಮಣಿ ಕೃದಂತ ವಿಶೇಷಣಗಳು.

**हो, फुर, पाल, ने, बंध, हण, गा, पेच्छ, चिट्ठ, दुण्डावे.**

[ಬ] ಭೂತಕಾಲ ಕರ್ತರಿ ಕೃದಂತ ಪರೀಕ್ಷಣಗಳು.

सक्क, बे, मुण, वण्ण, पा, सद्दावे, नंद, तिगिच्छ, आमन्ते, छिंद.

(೧) ಕನ್ನಡಕ್ಕೆ ಪರಿವರ್ತಿಸಿರಿ :—

(१) कुंडिणे नयरे भीमरहो राया, तस्स सयलअंतेउरप्पहाणा पुप्फदंती देवी, ताणं विसयसुहमणुहवन्ताणं समुप्पन्ना सयलतेलोक्कअलंकारभूया धूया। (२) दढसत्तिणा चिन्तियं 'इमो मम तणओ वासवेण विणासिओ, वासवो वि कणयतेएण वावाइज्जमाणेण वि वासवेण कणयमाला विणासिया।' (३) तेण भणियं 'अम्हे दरिद्दिणो, कहं विवाहमंगलं रन्नो य पूयं करेमो?' कहियं एयं राइणो तेणावि धणधन्नहिरण्णाइणा भराविय चित्तंगयस्स भवणं। (४) अन्नया वसन्तमासे जुगबाहू मयणरेहाए सह उज्जाणे कीलत्थं उवगओ। खज्जभोयणपाणखित्तस्स अत्थगिरीओ वोलीणो अहेसरो। छाइओ तमनियरेण भुवणभागो। तओ जुगबाहू तम्मि चेव उज्जणे ठिओ। (५) देव, इमं तुह कुबेरपुरविहवअहियधणनिवहं नयरं कइवयदिणाण मज्झे चोरस्स वि मन्दिरं जायं। (६) तीए कुच्छिपसूओ पुत्तो नामेण अगडदत्तो त्ति, अणुदियहं सो पवरं वड्ढन्तो जोव्वणं पत्तो। (७) एत्थन्तरम्मि आगओ एगो पुरिसो तं उद्देसं, आयण्णिओ तस्स सद्दो कुमारेण जहा। अहिणा दट्ठो रायपुत्तो, जो तं जीवावेइ, सो जं चेव पत्थेइ तं चेव दिज्जइ त्ति। (८) सुयाणि मे पंच, महव्वयाणि, नरएसु दुक्खं च तिरिक्खजोणिसु। (९) से चुए बंभलोगाओ-माणुसं भवमागए। अप्पणो य परेसिं च आउं जाणे जहातहा। (१०) अन्नया चेडिं ण्हाया भणइ-'पोत्ताइं आणेहि'। तीए रत्तगाणि आणियाणि, रुट्ठाए अद्दाएण आहया। 'जिणघरं पविसन्तीए रत्तगाणि देसि' त्ति, मया चेडी। (११)उज्जाणं सम्पत्तो ओइण्णो उत्तमाओ सीयाओ साहस्सीहिं परिवुडो अह निक्खमइ उ चित्ताहिं। (१२) कस्स अट्ठे इमे पाणा एए सव्वे सुहेसिणो वाडेहिं पंजरेहिं च सन्निरुध्दा य अच्छहिं। (१३) विजयाए चोद्दसमहासुमिणसूइओ पुत्तो उववन्नो अजिओ त्ति नाम बीयतित्थयरो। (१४) पत्तो से जोव्वणं, परिणाविओ उत्तमनरिन्ददुहियाओ। (१५) सिविरे हाहारवगब्भिणो महक्कन्दो जाओ। विमुक्ककेसाओ भग्गवलयाओ तोडियहारलयाओ महीए लोलन्ति। (१६) तओ नवकारं अणुसरन्ती पविट्ठा एगदिसाए, जाव दूरं

गया ताव दिट्ठो एगो तावसो, तस्स मूलं गया, अभिवाइओ सो। (१७) एव-माइ अणुसासिया. संवेगमुवगया ताणं चेव मूले पव्वइया। पुच्छियाए वि दिक्खा अट्टाणभएण गब्भो न अक्खाओ। पच्छा णाए मयहरियाए सब्भाओ कहिओ। पच्छन्नं धरिया पसूया समाणी सह नाममुद्दाए कंबलरयणेण य सुसाणे छड्डेइ। (१८) तओ हरिसभरुब्भन्तहियओ नीहरिओ नयराओ। नमी वि पडियागओ संमुहं, निवडिओ चलणेसु जेट्ठभाउणो. माहापसोएण पवेसिओ नयरं। (१९) एवं कणयमंजरीए सो राया कोऊहलभूएहिं एरिस-क्खाणएहिं छम्मासे जाव विमोहिओ। पच्छा तीए उवरि अईव साणुराओ जाओ। तीए चेव समं कालं गमेइ। (२०) एवं तेसिं मन्तन्ताणं समागओ एगो दिओ, भणियं च तेण 'किमेवं आउलीहूया? मुञ्चह विसायं, अओ नत्थि संसारे किं चि सुहं असुहं वा अच्चब्भुयमत्थि। भणियं च-कालम्मि अणाईए जीवाणं विविहकम्मवसगाणं तं नत्थि संविहाणं संसारे जं न संभवइ।'

(೨) ಅರ್ಧಮಾಗಧಿಯಲ್ಲಿ ಭಾಷಾಂತರಿಸಿರಿ :—

(೧) ಕಾಂಚನಪುರವೆಂಬ ಒಂದು ಪಟ್ಟಣವಿತ್ತು. ಅಲ್ಲಿ ವಿಕ್ರಮನೆಂಬ ಒಬ್ಬ ರಾಜನು ರಾಜ್ಯಭಾರ ಮಾಡುತ್ತಿದ್ದನು. ಅವನ ಅಂತಃಪುರದಲ್ಲಿ ಐದು ನೂರು ಜನ ಸ್ತ್ರೀಯರಿದ್ದರು. ಅದೇ ಊರಲ್ಲಿ ನಾಗದತ್ತನೆಂಬ ಶ್ರೀಮಂತ ವ್ಯಾಪಾರಿ ಇದ್ದನು. ಅವನಿಗೆ ವಿಷ್ಣುಶ್ರೀ ಎಂಬ ಹೆಂಡತಿ ಇದ್ದಳು. ಅವಳ ಸೌಂದರ್ಯವು ಅಪ್ಸರೆಯರಿಗಿಂತಲೂ ಅಧಿಕವಾಗಿತ್ತು. ಒಮ್ಮೆ ವಿಕ್ರಮನು ಅವಳನ್ನು ನೋಡಿದನು. ಅವನು ಅವಳನ್ನು ಅಪಹರಿಸಿ ಅಂತಃಪುರದಲ್ಲಿ ತಂದನು. ವಿಷ್ಣುಶ್ರೀಯ ವಿರಹದಿಂದ ನಾಗದತ್ತನು ಹುಚ್ಚನಾದನು. "ಚಂದ್ರವದನೆಯೆ, ನನಗೆ ಒಮ್ಮೆಯಾದರೂ ದರ್ಶನ ಕೊಡು" ಎಂದು ಅವನು ವ್ಯಾಕುಲನಾಗಿ ಒದರುತ್ತ ಬೀದಿಗಳಲ್ಲಿ ತಿರುಗುತ್ತಿದ್ದನು.

(೨) ಒಂದು ಕತ್ತಲೆಯ ರಾತ್ರಿಯಲ್ಲಿ ಒಬ್ಬ ಕುರುಡ ಭಿಕ್ಷುಕನು ಒಂದು ಕೈಯಲ್ಲಿ ದೀವಿಗೆಯನ್ನೂ ಇನ್ನೊಂದು ಕೈಯಲ್ಲಿ ಒಂದು ಕೊಡವನ್ನೂ ತೆಗೆದುಕೊಂಡು ನಡೆದಿದ್ದನು. ಅದನ್ನು ನೋಡಿ ಒಬ್ಬನು ಅಂದನು – 'ಮೂರ್ಖನೆ, ನಿನಗೆ ದೀವಿಗೆಯೇಕೆ? ನಿನಗೆ ಹಗಲು–ಇರುಳುಗಳು ಸಮಾನವಾಗಿರುವವು.' ಅದನ್ನು ಕೇಳಿ ಆ ಕುರುಡ ಭಿಕ್ಷುಕನು ವಿನಯಪೂರ್ವಕ ಅಂದನು–"ದೊಡ್ಡ

ಮನುಷ್ಯರೆ, ನೀವು ತಿಳಿದಷ್ಟು ಮೂರ್ಖನು ನಾನು ಅಲ್ಲ. ದೀವಿಗೆಯನ್ನು ನನ್ನ ಸಲುವಾಗಿ ಜೊತೆಗೆ ತೆಗೆದುಕೊಂಡಿಲ್ಲ. ನಿಮ್ಮ ಸಲುವಾಗಿಯೆ ತೆಗೆದು ಕೊಂಡಿದ್ದೇನೆ. ಕುರುಡನಾದ ನಾನು ನಡೆದಿದ್ದೇನೆ ಎಂಬುದು ನಿಮ್ಮಂತಹರಿಗೆ ತಿಳಿಯಲಿ ಎಂದು ದೀವಿಗೆಯನ್ನು ಒಯ್ಯುತ್ತಿದ್ದೇನೆ."

(೩)ಒಮ್ಮೆ ಒಂದು ನರಿಯು ಆಡ್ಡಾಡುತ್ತಿರುವಾಗ ಒಂದು ಭಾವಿಯಲ್ಲಿ ಬಿದ್ದಿತು. ಅದಕ್ಕೆ ಮೇಲೆ ಬರಲು ಆಗಲಿಲ್ಲ. ಇಷ್ಟರಲ್ಲಿ ಅಲ್ಲಿಗೆ ಒಂದು ಹೋತು ಬಂದಿತು; ಮತ್ತು ನರಿಗೆ ಅಂದಿತು—ಎಲೊ ನರಿಯೆ, ಭಾವಿಯಲ್ಲಿ ನೀರು ಇದೆಯೋ?" ಕೂಡಲೆ ನರಿಯು ಅಂದಿತು—"ಸಂಶಯವೇಕೆ? ಕೆಳಗೆ ಜಿಗಿ ಮತ್ತು ರುಚಿ ನೋಡು. ಇಂಥ ಸಿಹಿನೀರನ್ನು ನಾನು ಮೊದಲೆಂದೂ ನೋಡಿಯೆ ಇಲ್ಲ." ನರಿಯ ಈ ಮಾತುಗಳು ಆ ಮೂರ್ಖ ಹೋತಿಗೆ ನಿಜವೆನಿಸಿದವು; ಮತ್ತು ಅದು ಭಾವಿಯಲ್ಲಿ ಜಿಗಿಯಿತು. ನರಿಯು ಹೋತಿನ ಬೆನ್ನಮೇಲೆ ಹತ್ತಿ ಭಾವಿಯ ಮೇಲಕ್ಕೆ ಜಿಗಿಯಿತು.

## ಪಾಠ ೧೫

## ಧಾತುಸಾಧಿತಗಳು–ವಿಧ್ಯರ್ಥ ಕರ್ಮಣಿ ಕೃದಂತ ವಿಶೇಷಣ, ಭೂತಕೃದಂತ (ಲ್ಯಬಂತ) ಮತ್ತು ಹೇತ್ವರ್ಥಕ (ತುಮಂತ) ಅವ್ಯಯುಗಳು.

ವರ್ತಮಾನ ಮತ್ತು ಭೂತ ಕೃದಂತಗಳಂತೆ ವಿಧ್ಯರ್ಥದಲ್ಲಿ ಕರ್ತರಿ, ಕರ್ಮಣಿ ಎಂದು ಎರಡು ಪ್ರಕಾರಗಳಿಲ್ಲ. **ಕರ್ಮಣಿ**ಯೊಂದೇ ಇರುವದು. ವಿಧ್ಯರ್ಥ ಕರ್ಮಣಿ ಕೃದಂತವು ವಿಶೇಷಣವಾಗಿ ಕ್ರಿಯಾಪದದ ಸ್ಥಾನ ದಲ್ಲಿಯೂ ಉಪಯೋಗಿಸಲ್ಪಡುವದು.

**ವಿಧ್ಯರ್ಥ ಕರ್ಮಣಿ ಕೃದಂತ ವಿಶೇಷಣ**—

ಧಾತುಗಳಿಗೆ **णिज्ज, इयव्व** ಅಥವಾ **यव्व** ಎಂಬ ಪ್ರತ್ಯಯುಗಳನ್ನು ಹಚ್ಚುವದರಿಂದ **ವಿಧ್ಯರ್ಥ ಕರ್ಮಣಿ ಕೃದಂತ**ಗಳಾಗುವವು. ಮೊದಲಿನ

ವೆರಡು ಪ್ರತ್ಯಯಗಳು अ ಕಾರಾಂತ ೧ ಮತ್ತು ೨ ನೆಯ ವರ್ಗದ ಧಾತು ಗಳಿಗೂ ಮೂರನೆಯದು अ ಕಾರಾಂತೇತರ ೨ ನೇಯ ವರ್ಗದ ಧಾತು ಗಳಿಗೂ ಹತ್ತುವದು. ಉದಾ :—

(೧) पास+णिज्ज=पासणिज्ज, पास+इयव्व=पासियव्व, हस+णिज्ज=हसणिज्ज, हस+इयव्व=हसियव्व

(೨) करे+णिज्ज=करणिज्ज, करे+इयव्व=करेयव्व.

(೩) गा+यव्व=गायव्व, ने+यव्व=नेयव्व, हो+यव्व=होयव्व.

**ಉಪಯೋಗ – ವಿಶೇಷಣದಂತೆ.**

ವಿಧ್ಯರ್ಥ ಕರ್ಮಣಿ ಕೃದಂತ ವಿಶೇಷಣವು ವಿಶೇಷಣದಂತೆ ಉಪ ಯೋಗಿಸಲ್ಪಡುವದು. ಆಗ ಅದು ವಿಶೇಷ್ಯದ ಲಿಂಗ ವಚನ ವಿಭಕ್ತಿಗಳನ್ನು ಅನುಸರಿಸುವದು. ಉದಾ —

**वन्दिणिज्जो आयरिओ** – ವಂದನೀಯ ಅಥವಾ ಪೂಜ್ಯ ಆಚಾರ್ಯನು.
**नायव्वाइं तत्ताइं** – ತಿಳಿಯಲ್ಪಡತಕ್ಕ ತತ್ವಗಳು.
**दंसणिज्जा कला** – ತೋರಿಸಲ್ಪಡತಕ್ಕ ಕಲೆಯು.

---

* ಇದಲ್ಲದೆ ಕೆಲವು ವಿಧ್ಯರ್ಥ ಕರ್ಮಣಿ ಕೃದಂತಗಳು ಸಂಸ್ಕೃತದಿಂದ ನೇರ ವಾಗಿ ಬಂದಿವೆ. ಅವುಗಳನ್ನು ಕೆಳಗೆ ಕೊಟ್ಟಿದೆ. [ಡಾ. ಘಾಟಗೆ ವ್ಯಾಕರಣ ಪು.೮೮]

| | | |
|---|---|---|
| **कज्ज**–(कार्य) | **गेज्झ**–(गेण्ह) | **भेज्ज**–(भिद) |
| **पेज्ज**–(पेय) | **घेत्तव्व**–(गेण्ह) | **भोत्तव्व**–(भुंज) |
| **देज्ज**–(देय) | **चज्ज**–(चय) | **मोत्तव्व**–(मुंच) |
| **वज्ज**–(वर्ज्य) | **दट्ठव्व**–(पास) | **रोत्तव्व**–(रुय) |
| **कायव्व**–(कर्तव्य) | **देज्ज**–(दे) | **वच्च**–(वय) |
| **गन्तव्व**–(गन्तव्य) | **दोज्ज**–(दुह) | **वज्ज**–(वज्ज) |
| **दायव्व**–(दातव्य) | **नेज्ज**–(ने) | **वज्झ**–(वह) |
| **आणप्प**–(आज्ञाप्य) | **नेय**–(जाण) | **विण्णप्प**–(विण्णव) |
| **खज्ज**–(खाद्य) | **बोज्झ**–(बुज्झ) | **वोज्झ**–(वह) |
| **गुज्झ**–(गुह्य) | **पुज्ज**–(पूय) | **वोत्तव्व**–(वय) |
| **भव्व**–(भव्य) | **सोयव्व**–(सुण) | |

## ಕ್ರಿಯಾಪದದಂತೆ

(ಅ) ಸಕರ್ಮಕವಿದ್ದರೆ ಕರ್ಮವು ಪ್ರಥಮೆಯಲ್ಲಿಯೂ, ಕರ್ತೃವು ತೃತೀಯೆಯಲ್ಲಿಯೂ ಇದ್ದು, ವಿ. ಕ. ಕೃ. ವಿಶೇಷಣವು ಕರ್ಮದ ಲಿಂಗ ವಚನ ವಿಭಕ್ತಿಗಳನ್ನು ಅನುಸರಿಸುವದು. ಉದಾ:— **सव्वेहिं धम्मकहा नायव्वा**– ಎಲ್ಲರಿಂದ ಧರ್ಮಕತೆಯು ತಿಳಿಯಲ್ಪಡತಕ್ಕದ್ದು. **कोहेण, लोहेण, हासेण वा भएण, अणगारेहिं मुसा भासा न भासियव्वा।** ಸಿಟ್ಟಿನಿಂದ ಆಶೆಯಿಂದ, ವಿನೋದದಿಂದ, ಅಥವಾ ಅಂಜಿಕೆಯಿಂದಾದರೂ ಸಂನ್ಯಾಸಿಗಳಿಂದ ಸುಳ್ಳು ಮಾತು ಆಡಲ್ಪಡತಕ್ಕದ್ದಲ್ಲ. **जणेहिं चत्तं धणं भूवेण न घेत्तव्वं।** ಜನರಿಂದ ಬಿಡಲ್ಪಟ್ಟ ದುಡ್ಡು ರಾಜನಿಂದ ತೆಗೆದುಕೊಳ್ಳಲ್ಪಡತಕ್ಕದ್ದಲ್ಲ.

(ಆ) ಅಕರ್ಮಕವಿದ್ದರೆ ಕರ್ತೃವು ತೃತೀಯೇಯಲ್ಲಿದ್ದು ವಿಧ್ಯರ್ಥ ಕರ್ಮಣಿ ಕೃದಂತವು ನಪುಂಸಕ ಪ್ರಥಮಾ ಏಕವಚನದಲ್ಲಿ ಉಪಯೋಗಿಸಲ್ಪಡುವದು. ಉದಾ—**संझासमए कुमारीहिं न हिण्डियव्वं**। ಸಂಧ್ಯಾ ಸಮಯದಲ್ಲಿ ಕುಮಾರಿಯರು ತಿರುಗಾಡತಕ್ಕದ್ದಲ್ಲ. **तेण गच्छियव्वं**–ಅವನು ಹೋಗತಕ್ಕದ್ದು. *

## ಇತರ ಉಪಯೋಗ

ವಿಧ್ಯರ್ಥ ಕ್ರಿಯಾಪದದ ಬದಲಾಗಿ ವಿಧ್ಯರ್ಥ ಕರ್ಮಣಿಕೃದಂತವನ್ನು ಉಪಯೋಗಿಸುವದುಂಟು. ಉದಾ :— **पाणा न हन्तव्वा** – ಪ್ರಾಣಿಗಳು ಕೊಲ್ಲಲ್ಪಡಬಾರದು.

## ಕೃದಂತ ಅವ್ಯಯುಗಳು ಅಥವಾ ಅವಿಕಾರಿ ಧಾತುಸಾಧಿತಗಳು–

**ಪೂರ್ವಕಾಲವಾಚಕ (ಭೂತ) ಕೃದಂತ ಅವ್ಯಯ ಮತ್ತು ಹೇತ್ವರ್ಥಕ** ಅವ್ಯಯ ಇವು ಎರಡೇ ಕೃದಂತ ಅವ್ಯಯುಗಳು ಅರ್ಧಮಾಗಧಿಯಲ್ಲಿ ಹೆಚ್ಚು ಉಪಯೋಗದಲ್ಲಿರುವವು. ನಡೆದ ಎರಡು ಕ್ರಿಯೆಗಳಲ್ಲಿ ಒಂದು ಮುಗಿದಮೇಲೆ ಇನ್ನೊಂದು ನಡೆಯುವದು ಅಥವಾ ನಡೆಯಿತು ಎಂಬ ಅರ್ಥವಿದ್ದಲ್ಲಿ ಮೊದಲನೆಯ ಕ್ರಿಯೆಯು ಮುಗಿದದ್ದನ್ನು ಹೇಳಲು ಭೂತಕೃದಂತ ಅವ್ಯಯವನ್ನೂ, ಎರಡನೆಯ ಕ್ರಿಯೆಯು ನಡೆಯಲು ಉದ್ದೇಶವನ್ನು ಹೇಳುವಲ್ಲಿ ಹೇತ್ವರ್ಥಕ ಅವ್ಯಯವನ್ನೂ ಉಪಯೋಗಿಸುವರು. ಕನ್ನಡದಲ್ಲಿ ಭೂ. ಕೃ.

---

* ಭೂತಕಾಲವಾಚಕ ಧಾತುಸಾಧಿತ ವಿಶೇಷಣಗಳಂತೆ ಮೂರನೆಯ ಬಗೆಯ ಉಪಯೋಗವು ಇವುಗಳಿಗೆ ಇಲ್ಲ.

ಅವ್ಯಯಕ್ಕೆ ಇ, ಡು, ಪ್ರತ್ಯಯಗಳೂ, ಹೇ. ಅವ್ಯಯಕ್ಕೆ ಅ, ಅಲು, ಅಲಿಕ್ಕೆ ಎಂಬ ಪ್ರತ್ಯಯಗಳೂ ಬರುವವು.

**ಭೂತಕೃದಂತ ಅವ್ಯಯದ ಪ್ರತ್ಯಯಗಳು.*** [ ಇವಕ್ಕೆ ಸಂಸ್ಕೃತದಲ್ಲಿ '**ಕ್ತ್ವಾಂತ**' ಅವ್ಯಯ ಅಥವಾ '**ಲ್ಯಬಂತ**' ಅವ್ಯಯವೆನ್ನುವರು. ]

(೧) अ ಕಾರಾಂತ ಧಾತುಗಳಿಗೆ **इऊण** ಪ್ರತ್ಯಯ ಬರುವದು. ಉದಾ-- **पास + इऊण = पासिऊण. हसिऊण. गच्छिऊण** ಮುಂ.

(೨) अ ಕಾರಾಂತೇತರ ಧಾತುಗಳಿಗೆ **ऊण** ಹಚ್ಚಬೇಕು. ಉದಾ- **गा+ऊण=गाऊण, नेऊण. होऊण** ಮುಂ.

(೩) ಎಲ್ಲ ಧಾತುಗಳಿಗೆ **इत्ता, एत्ता** ಹಚ್ಚಬೇಕು :- **पास+इत्ता=पासित्ता,** ಅದೇಪ್ರಕಾರ **पासेत्ता, गाइत्ता, नेइत्ता. होइत्ता.**

(೪) ಎಲ್ಲ ಧಾತುಗಳಿಗೆ **इत्ताणं, एत्ताणं** ಹಚ್ಚಬೇಕು :- **हस+इत्ताणं= हसित्ताणं,** ಅದೇಪ್ರಕಾರ **हसेत्ताणं, करेत्ताणं, लहेत्ताणं**

(೫) ಎಲ್ಲ ಧಾತುಗಳಿಗೆ **इत्तु, एत्तु** ಹಚ್ಚಬೇಕು :- **साह + इत्तु = साहित्तु, साहेत्तु, जाणेत्तु, हसित्तु.**

(೬) ಕೆಲವು ಧಾತುಗಳಿಗೆ **ए** ಪ್ರತ್ಯಯ ಹತ್ತುವದು. ಉದಾ- **उट्ठाए, समायाए, परिन्नाए** ಮುಂ.

---

* ಇದಲ್ಲದೆ ಅನೇಕ ರೂಪಗಳು ಸಂಸ್ಕೃತದಿಂದ ನೇರವಾಗಿ ಬರುವವು. **ए** ಮತ್ತು **त्तु** ಪ್ರತಯ ಹೊಂದಿದ ರೂಪಗಳೂ ಅಪವಾದಾತ್ಮಕ ರೂಪಗಳೆಂದೇ ಎಣಿಸಬಹುದು. ಸಂಸ್ಕೃತದಿಂದ ಬಂದ ಕೆಲವು ರೂಪಗಳನ್ನು ಕೆಳಗೆ ಕೊಟ್ಟಿದೆ.

ಅನಿಯಮಿತ ಭೂ. ಕೃ. ಅವ್ಯಯಗಳು —

| | | |
|---|---|---|
| श्रुत्वा > **सोच्चा** | त्यक्त्वा > **चिच्चा** | भुक्त्वा < **भोच्चा** |
| हित्वा > **हिच्चा** | कृत्वा > **किच्चा** | दृष्टवा > **पेच्छिय** |
| ज्ञात्वा > **नच्चा** | गृहीत्वा > **गहाय, गहिय** | स्थित्वा > **ठिच्चा** |
| अभिगम्य > **अभिगम्म** | निशम्य > **निसम्म** | प्रतिज्ञाय > **पडिन्नाय** |

ಇವಲ್ಲದೆ **दट्ठूण, हन्तूण, गन्तूण, लध्दूण, मोत्तूण, भोत्तूण, घेत्तूण, सोऊण** ಮೊದಲಾದ ರೂಪಗಳೂ ಇರುವವು. ಇವುಗಳಲ್ಲಿ **ऊण** ಪ್ರತ್ಯಯವಿದ್ದರೂ ಮೂಲ ಧಾತುವಿನಲ್ಲಿ ಬದಲಾವಣೆಯಾಗಿರುವದರಿಂದ ಅನಿಯಮಿತ ರೂಪಗಳೆನ್ನಬಹುದು.

[ಡಾ. ಘಾಟಗೆ ವ್ಯಾಕರಣ. ಪ್ರ. ಆ. ಪುಟ. ೭೬]

(೭) ಕೆಲವು ಧಾತುಗಳಿಗೆ **ट्टु** ಪ್ರತ್ಯಯ ಹತ್ತುವದು. (ಇಂಥ ಪ್ರಕಾರಗಳು ಬಹಳ ಕಡಿಮೆ ಇವೆ) :— **साहट्टु, अवहट्टु, कट्टु** ಮುಂ.

ಅನೇಕಸಲ **इय** ಪ್ರತ್ಯಯ ಹಚ್ಚುವದರಿಂದಲೂ ಭೂತಕೃದಂತ ಅವ್ಯಯಗಳಾಗುತ್ತವೆ. ಉದಾ– **पास+इय=पासिय**. ಇಲ್ಲಿ ಒಂದು ಮಾತನ್ನು ವಿಶೇಷವಾಗಿ ಲಕ್ಷಿಸಬೇಕು. ಭೂತ ಕರ್ಮಣಿ ಕೃದಂತ ವಿಶೇಷಣದ ಪ್ರತ್ಯಯವೂ **इय** ಇರುವದು. ಉದಾ– **पास+इय=पासिय** ಎರಡೂ ರೂಪಗಳು ಒಂದೇಯಾಗಿದ್ದರೂ ಮೊದಲನೆಯದು **ಅವಿಕಾರಿ** ಎಂದರೆ ಮುಂದೆ ಯಾವ ಬಗೆಯ ಪ್ರತ್ಯಗಳನ್ನೂ ಹೊಂದದ ಅವ್ಯಯವಾಗಿರುತ್ತದೆ. ಎರಡನೆಯದು **ವಿಕಾರಿ** ಎಂದರೆ ವಿಭಕ್ತಿ ಪ್ರತ್ಯಯವೇ ಮೊದಲಾದ ಪ್ರತ್ಯಯಗಳನ್ನು ಹೊಂದುವದಾಗಿರುತ್ತದೆ. ಇದರಿಂದ ಕೇವಲ **पासिय** ಎಂದು ಉಪಯೋಗವಾದಾಗ ಭೂ. ಕೃ. ಅವ್ಯಯವೆಂದೂ, **पासियं, पासिया,** ಮೊದಲಾದ ರೂಪಗಳು ಬಂದಾಗ ಭೂ.ಕ.ಕೃ. ವಿಶೇಷಣವೆಂದೂ ಸಹಜವಾಗಿ ಗುರುತಿಸಬಹುದು.

ಪದಾಂತ್ಯದಲ್ಲಿರುವ **ऊण, चा, इय, य, ट्टु** ಮೊದಲಾದ ಪ್ರತ್ಯಯಗಳಿಂದ ಸುಲಭವಾಗಿ ಭೂತಕೃದಂತ ಅವ್ಯಯವನ್ನು ಗುರುತಿಸಬಹುದು.

**ಉಪಯೋಗ–**

(೧) ಒಂದೇ ಕರ್ತೃವಿನಿಂದ ಒಂದಾದ ಮೇಲೊಂದು ಹೀಗೆ ಅನೇಕ ಕ್ರಿಯೆಗಳು ಮಾಡಲ್ಪಡುತ್ತಿದ್ದರೆ ಮೊದಲು ನಡೆದ ಕ್ರಿಯೆಗಳನ್ನು ಹೇಳುವ ಧಾತುಗಳನ್ನು ಭೂ. ಕೃ. ಅವ್ಯಯಗಳಾಗಿ ಉಪಯೋಗಿಸಲಾಗುವದು.

ಉದಾ– [ಅ] **सालाए गच्छिऊण कुमारा सिलोगाणि पढन्ति** । ಸಾಲೆಗೆ ಹೋಗಿ ಬಾಲಕರು ಶ್ಲೋಕಗಳನ್ನು ಅನ್ನುತ್ತಾರೆ.

[ಆ] **सो कस्स वि अम्बवच्छस्स छायाए गन्तूण सुत्तो** । ಅವನು ಯಾವುದೊ ಒಂದು ಹೂವಿನ ಗಿಡದ ನೆರಳಲ್ಲಿ ಹೋಗಿ ಮಲಗಿದನು.

[ಇ] **भोगे भोच्चा वमित्ता य लहुभूयविहारिणो ।**
**आमोयमाणा गच्छन्ति दिया कामकमा इव ॥**

(೨) ಕ್ವಚಿತ್ತಾಗಿ ಕ್ರಿಯಾಪದದಂತೆ ಉಪಯೋಗವಾಗುವದು.
ಉದಾ– **तं विज्जं परिजाणिय** । — ಆ ವಿದ್ಯೆಯನ್ನು ತಿಳಿಯುವರು.

**ಹೇತ್ವರ್ಥಕ ಕೃದಂತ ಅವ್ಯಯ**– [ಸಂಸ್ಕೃತದಲ್ಲಿ ' ತುಮಂತ ' ಅವ್ಯಯವೆನ್ನುವರು.]

(೧) अ ಕಾರಾಂತ ಧಾತುಗಳಿಗೆ **इउं** ಪ್ರತ್ಯಯವೂ, अ ಕಾರಾಂತೇತರ ಧಾತುಗಳಿಗೆ **उं** ಪ್ರತ್ಯಯವೂ ಹತ್ತುವವು. ಉದಾ– **पास + इउं = पासिउं, करिउं; गा + उं = गाउं.** ಅದೇ ಪ್ರಕಾರ, **नेउं, होउं** ಮುಂ.

(೨) ಎಲ್ಲ ಧಾತುಗಳಿಗೂ **इत्तए, एत्तए** ಪ್ರತ್ಯಯಗಳೂ ಬರುವವು. ಉದಾ– **कर + इत्तए = करित्तए.** ಅದೇ ಪ್ರಕಾರ **गच्छित्तए, नेइत्तए, पासेत्तए** ಮುಂ.

* ಭೂ. ಕೃ. ಅವ್ಯಯದ **इत्ता, एत्ता, इत्ताण, एत्ताण, इत्तु, एत्तु** ಮೊದಲಾದ ಪ್ರತ್ಯಯಗಳಿಗೂ, ಹೇತ್ವರ್ಥಕ ಅವ್ಯಯದ **इत्तए, एत्तए** ಮೊದಲಾದ ಪ್ರತ್ಯಯಗಳಿಗೂ ಇರುವ ಅಂತರವನ್ನೂ ಲಕ್ಷಿಸಬೇಕು.

**ಉಪಯೋಗ**—

(೧) ಕ್ರಿಯೆಯ ಉದ್ದೇಶವನ್ನು ತೋರಿಸಲು ಹೇತ್ವರ್ಥಕ ಕೃದಂತ ಅವ್ಯಯವನ್ನು ಉಪಯೋಗಿಸುವರು. ಉದಾ–

[ಅ] **सो गच्छिउं इच्छइ ।** ಅವನು ಹೋಗಲು ಇಚ್ಛಿಸುತ್ತಾನೆ.

[ಆ] **चोरो धणं हरित्तए नयरं पविट्ठो ।** ಕಳ್ಳನು ಧನವನ್ನು ಅಪಹರಿಸುವದಕ್ಕಾಗಿ ನಗರವನ್ನು ಪ್ರವೇಶಿಸಿದನು.

[ಇ] **वन्तं इच्छसि आवाउं सेयं ते मरणं भवे ।** ಕಾರಿಕೆಯನ್ನು ಕುಡಿಯಲು ಇಚ್ಛಿಸುವ ನಿನಗೆ ಮರಣವು ಶ್ರೇಯಸ್ಕರವು.

---

ಅನಿಯಮಿತ ಹೇತ್ವರ್ಥಕ ಅವ್ಯಯಗಳು— (ಡಾ. ಘಾಟಗೆ. ವ್ಯಾಕರಣ ಪು. ೮೦)

| | | |
|---|---|---|
| दे > **दाउं** | वह > **वोढुं** | ने > **नेउं** |
| छिन्द > **छेत्तुं** | पिव > **पाउं, पायए** | भिन्द > **भेत्तुं,** |
| भुंज > **भोत्तुं, भोत्तए** | **पिवित्तए** | कर > **काउं** |
| मुंच > **मोत्तुं** | सुण > **सोउं** | रुव > **रोत्तुं** |
| जिण > **जेउं** | सुव > **सोत्तुं** | हण > **हन्तुं** |
| खण > **खन्तुं** | गच्छ > **गन्तुं** | लह > **लध्दुं** |
| जाण > **जाउं** गेण्ह > **घेत्तुं** | वय > **वोत्तुं** | वस > **वत्थए** |

(೨) ಒಮ್ಮೊಮ್ಮೆ ಭೂ. ಕೃ. ಅವ್ಯಯವನ್ನು ಹೇತ್ವರ್ಥಕ ಅವ್ಯಯ ದಂತೆ ಉಪಯೋಗಿಸುವರು. ಉದಾ–

[ಅ] **न तुज्झ भोगे चइऊण बुद्धी।** ನಿನಗೆ ಭೋಗಗಳನ್ನು ಬಿಡಲು ಇಚ್ಛೆಯಿಲ್ಲ.

[ಆ] **थोवं लद्धुं न खिसए।** ಸ್ವಲ್ಪ ಸಿಗಲು ನಿಂದೆಮಾಡಬಾರದು.

**ಶಬ್ದಸಂಗ್ರಹ**

**अक्खित्त** (ಭೂ.ಕ.ಕೃವಿ.) ಆಕರ್ಷಿಸಲ್ಪಟ್ಟ
**अंग** (ಪು.ನ.) ಶರೀರ
**अंगअ** (ವಿ.) ಶರೀರ ಧರಿಸಿದ
**अंगुली** (ಸ್ತ್ರೀ.) ಬೆರಳು
**अच्चय** (ವಿ.) ಪೂಜಾರಿ
**अडवी** (ಸ್ತ್ರೀ) ಅರಣ್ಯ, ಅಡವಿ
**अद्धिइ** (ಸ್ತ್ರೀ) ಅಧೈರ್ಯ, ಗಾಬರಿ
**अन्नभव** (ಪು.) ಬೇರೆ ಜನ್ಮ
**अप्प** (ಪು.) ಸ್ವಂತ
**अभिणव** (ವಿ.) ಹೊಸ
**अभिभूय** (ಭೂ.ಕ.ಕೃ.ವಿ.) ಪೀಡಿತ
**अवत्था** (ಸ್ತ್ರೀ.) ಅವಸ್ಥೆ
**अवयर** (ಧಾ.) ಇಳಿ
**अवसाण** (ನ.) ಕೊನೆ, ಮರಣ
**अहिव** (ಪು.) ರಾಜ, ಅಧಿಪತಿ
**अहो** (ಅ.) ಆಶ್ಚರ್ಯ, ದುಃಖ ಮುಂತಾದ್ದನ್ನು ಸೂಚಿಸುವ ಅವ್ಯಯ
**आगंतूण** (ಭೂ.ಕೃ.ಅ.) ಬಂದು
**आढत्त** } **आरद्ध** } (ಭೂ.ಕ.ಕೃ.ವಿ.) ಆರಂಭಿಸಲ್ಪಟ್ಟ
**आमोय** (ಧಾ.) ಆನಂದಪಡು
**उसभ** (ಪು.) (ಪು.) ಋಷಭ ತೀರ್ಥಂಕರ
**इत्थिलोलुय** } (ವಿ.) ಸ್ತ್ರೀಲಂಪಟ
(ವಿ.) ಒಂಟಿಯಾದ, ಒಬ್ಬನೆ, ಒಬ್ಬಳೆ
**एत्थेव** (ಅ.) ಇಲ್ಲಿಯೆ
**कट्टु** (ಭೂ.ಕೃ.ಅ.) ಮಾಡಿ
**कंठ** (ಪು.) ಕುತ್ತಿಗೆ
**कडय** (ನ.) ಸೈನ್ಯದ ಬೀಡು, ಶಿಬಿರ
**कण्ण** (ಪು.) ಕಿವಿ
**कन्तार** (ನ.) ಅಡವಿ
**कामकम** (ಪು.) ಇಚ್ಛೆಯಂತೆ ಸಂಚರಿಸುವ
**कायव्व** (ವಿ.ಕ.ಕೃ.ವಿ.) ಕರ್ತವ್ಯ
**कीडक्खइय** (ಭೂ.ಕ.ಕೃವಿ.) ಹುಳ ತಿಂದ
**कुसुमसर** (ಪು.) ಕುಸುಮಶರ, ಮದನ
(ವಿ.) ಕುರೂಪಿ, ಕುಬ್ಜ
**गुलिया** (ಸ್ತ್ರೀ.) ಗುಳಿಗೆ
**घण** (ವಿ.) ಘನ, ದಟ್ಟ

**चंद्राणण** (ಪು.) ಒಬ್ಬ ತೀರ್ಥಂಕರನ ಹೆಸರು

**चइत्ता** (ಭೂ.ಕೃ.ಅ.) ಬಿಟ್ಟು

**चर** (ಧಾ.) ಆಚರಿಸು

**चित्तलय** (ವಿ.) ಚಿತ್ರಿತ

**चेयण** (ಪು.) ಚೇತನ, ಚೈತನ್ಯ

**चेयणा** (ಸ್ತ್ರೀ.) ಚೇತನಾ

**चोय** (ಧಾ.) ನುಗಿಸು, ನಡೆಸು

**जणवय** (ಪು.) ದೇಶ

**जंप** (ಧಾ.) ಮಾತಾಡು

**जागर** (ಧಾ.) ಎಚ್ಚರಾಗು

**जोग**<br>**जोग्ग** } (ವಿ.) ಯೋಗ್ಯ, ಉಚಿತ

**जोयणा** (ಸ್ತ್ರೀ.) ಯೋಜನೆ

**ठव** (ಧಾ.) ಇಡು, ಸ್ಥಾಪಿಸು

**ठाइऊण** (ಭೂ.ಕೃ.ಅ.) ಇಟ್ಟು,

**तर** (ಧಾ.) ಸಮರ್ಥನಾಗು

**तुरय** (ಪು.) ಕುದುರೆ

**दड्ढ** (ಭೂ.ಕ.ಕೃ.ವಿ.) ಸುಡಲ್ಪಟ್ಟ

**दुच्चर** (ವಿ.) ಆಚರಿಸಲು ಕಠಿಣ

**धरणी** (ಸ್ತ್ರೀ.) ಭೂಮಿ

**धरणिवट्ठ** (ನ.) ನೆಲ

**नट्ठ** (ಭೂ.ಕ.ಕೃ.ವಿ.) ನಷ್ಟ, ಕಳೆದ

**नंदिकुमार** (ಪು.) ಒಂದು ಹೆಸರು

**नाऊण** (ಭೂ.ಕೃ.ಅ.) ತಿಳಿದು

**नाण** (ನ.) ಜ್ಞಾನ

**निद्ध** (ವಿ.) ಸ್ನಿಗ್ಧ, ನುಣುಪಾದ

**निमित्तमेत्तं** (ಅ.) ನಿಮಿತ್ತಮಾತ್ರ

**नियय** (ವಿ.) ತನ್ನ, ಸ್ವಂತದ

**नेहालु** (ವಿ.) ಸ್ನೇಹದ, ಪ್ರೀತಿಯ

**पंचसेल** (ಪು.) ಒಂದು ಹೆಸರು

**पच्चक्ख** (ಧಾ.) ಬಿಟ್ಟುಬಿಡು

**पडिच्छ** (ಧಾ.) ಸ್ವೀಕರಿಸು

**पयट्ट** (ಭೂ.ಕ.ಕೃ.ವಿ.) ಪ್ರವೃತ್ತ, ನಡೆದ, ಹೊರಟ

**पयत्त** (ಪು.) ಪ್ರಯತ್ನ

**परिच्चय** (ಧಾ.) ಬಿಡು, ತ್ಯಜಿಸು

**पलव** (ಧಾ.) ಅಳು, ಪ್ರಲಾಪಿಸು

**पलाव** (ಪು.) ಪ್ರಲಾಪ

**पव्व** (ನ.) ಗಂಟು

**पसज्ज** (ಧಾ.) ಆಸಕ್ತನಾಗು

**पसत्थ** (ವಿ.) ಪ್ರಶಸ್ತ

**पहार** (ಪು.) ಪ್ರಹಾರ, ಹೊಡೆತ

**पहावइ, पभावइ** (ಸ್ತ್ರೀ) ಪ್ರಭಾವತಿ, ಒಂದು ಹೆಸರು

**पहासा** (ಸ್ತ್ರೀ.) ಒಂದು ಹೆಸರು

**पोल्लय** (ವಿ.) ಪೊಳ್ಳು

**भत्त** (ಪು.) ಅನ್ನ

**भोच्चा** (ಭೂ.ಕೃ.ಅ.) ಉಪಭೋಗಿಸಿ

**मत्थय** (ನ.) ಮಸ್ತಕ

**मणिप्पभ** (ಪು.) ಒಂದು ಹೆಸರು

**महापउम** (ಪು.) ಒಂದು ಹೆಸರು

**मुक्क** (ಭೂ.ಕ.ಕೃ.ವಿ.) ಬಿಡಲ್ಪಟ್ಟ

**मुच्छा** (ಸ್ತ್ರೀ.) ಮೂರ್ಛೆ

**मूलदेव** (ಪು.) ಒಂದು ಹೆಸರು

**मोत्तूण** (ಭೂ.ಕೃ.ಅ.) ಬಿಟ್ಟು

**रज्जु** (ಸ್ತ್ರೀ.) ಹಗ್ಗ
**रोय** (ಧಾ.) ಸೇರು, ರುಚಿಸು
**रोव** (ಧಾ.) ಅಳು
**लक्खणजुय** (ವಿ.) ಲಕ್ಷಣಯುತ
**लट्ठि** (ಸ್ತ್ರೀ.) ಬಡಿಗೆ, ಲಾಠಿ
**लहुभूय** (ಪು.) ಗಾಳಿ
**लाभ, लाह** (ಪು.) ಲಾಭ
**वंक** (ವಿ.) ವಕ್ರ, ಡೊಂಕ
**वज्ज** (ಧಾ.) ವರ್ಜಿಸು, ಬಿಡು
**वत्थव्व** (ವಿ.) ವಾಸ್ತವ್ಯ, ಇರಬೇಕಾದ
**वड्ढमाण** (ವ. ಕೃ. ವಿ.) ಬೆಳೆಯುತ್ತಿರುವ
**वड्ढमाण** (ಪು.) ವರ್ಧಮಾನ, ಮಹಾವೀರ
**वत्तव्व** (ವಿ.ಕ.ಕೃ.ವಿ.) ವಕ್ತವ್ಯ, ಹೇಳತಕ್ಕ
**वम** (ಧಾ.) ಕಾರು
**वरिसेण** (ಪು.) ಒಬ್ಬ ತೀರ್ಥಂಕರನ ಹೆಸರು
**वस** (ಧಾ.) ಇರು
**वसन्त**, **वसमाण** (ವ. ಕೃ. ವಿ.) ಇರುವ
**वायग** (ವಿ.) ವಾದಕ, ಬಾರಿಸುವವ
**वादण**, **वायण** (ನ.) ಬಾರಿಸುವದು, ವಾದನ
**वाम** (ವಿ.) ಎಡದ
**वाहण** (ನ.) ವಾಹನ
**विज्जुमालि** (ಪು.) ಒಂದು ಹೆಸರು
**वित्थर** (ಧಾ.) ಹಬ್ಬು, ಪಸರಿಸು
**वित्थरिय** (ಭೂ.ಕ.ಕೃ.ವಿ.) ವಿಸ್ತರಿತ, ಹಬ್ಬಿದ
**विदेह** (ಪು.) ವಿದರ್ಭದೇಶ
**वियाण** (ಧಾ.) ತಿಳಿ
**विहल** (ವಿ.) ವಿಹ್ವಲ, ದುಃಖಿತ
**विहारी** (ವಿ.) ವಿಹರಿಸುವವ
**वुत्त** (ಭೂ.ಕ.ಕೃ.ವಿ.) ಅಂದ, ಹೇಳಿದ
(ವಿ.ಕ.ಕೃವಿ.) ತಿಳಿಯಲು ಯೋಗ್ಯ
**वेरग्ग** (ನ.) ವೈರಾಗ್ಯ
**सक्क** (ಪು.) ಇಂದ್ರ
**संजोग**, **संजोय** (ಪು.) ಸಂಯೋಗ
**समत्थ** (ವಿ.) ಸಮರ್ಥ
**सम्माण** (ಪು.) ಸನ್ಮಾನ
**समुद्धर** (ಧಾ.) ಉದ್ಧರಿಸು
**सर** (ಪು.) ಸ್ವರ
**सामित्त** (ನ.) ಸ್ವಾಮಿತ್ವ
**सिंहासण** (ನ.) ಸಿಂಹಾಸನ
**सुवण्णगुलिया** (ಸ್ತ್ರೀ.) ಒಂದು ಹೆಸರು
**सोऊण** (ಭೂ.ಕೃ.ಅ.) ಕೇಳಿ
**सोगारिय** (ವಿ.) ಶೋಕಾಕುಲಿತ, ದುಃಖಿತ
**हासा** (ಸ್ತ್ರೀ.) ಒಂದು ಹೆಸರು

**ಅಭ್ಯಾಸ**

(೧) ಕೆಳಗಿನ ರೂಪಗಳನ್ನು ಗುರುತಿಸಿರಿ :—

उवक्खडावेत्ता, कायव्वं, कट्टु, वमिच्चा, वहणिज्जो, निमीलित्तए, कुज्जा, ठवित्ता, आभोएऊण, हसियव्वो, दंसणिज्जं, गन्तुं, दट्ठूण, अवहट्टु, चइउं, पीलणिज्जो, सोच्चा, वेयणिज्जं, वियाणिऊण, गच्छित्तए.

(೨) ರೂಪಗಳನ್ನು ಕೊಡಿರಿ :–

(೧) ವಿಧ್ಯರ್ಥ ಕರ್ಮಣಿ ಕೃದಂತ ವಿಶೇಷಣ – ने, दंड, सद्दावे, हू, परिक्ख, जाण, गा.

(೨) ಭೂತ ಕೃದಂತ ಅವ್ಯಯ – वड्ढ, झिया, ने, पक्खिव, भुंज, पा, मुण.

(೩) ಹೇತ್ವರ್ಥಕ ಕೃದಂತ ಅವ್ಯಯ:– वह, गा, दे, नम, किण, मुच.

(೨) ಕನ್ನಡಕ್ಕೆ ಪರಿವರ್ತಿಸಿರಿ :—

(१) मेहो समणस्स भगवओ माहावीरस्स अन्तिए पव्वइउं इच्छइ। (२) मयणरेहाए नाऊण मरणावत्थं जुगबाहु-कण्णमूले ठाइऊण भत्तुणो महुरं निउणं वयणं भणिउं पयत्ता। (३) वंका, कीडक्खइया, चित्तलया, पोलया य दड्ढा य, लट्ठी य उब्भसुक्का वज्जेयव्वा पयत्तेणं। (४) भोगे भोच्चा वमित्ता य लहुभूयविहारिणो, आमोयमाणा गच्छन्ति दिया कामकमा इव। (५) जे समत्था समुद्धत्तुं परमप्पाणमेव य, न ते तुमं वियाणासि, अह जाणासि तो भण। (६) घणवद्धमाणपव्वा निद्धा वण्णेण एगवण्णा य। एमाइ लक्खणजुया परमत्थलट्ठी मुणेयव्वा। (७) विमाणाओ अवयरिऊण मणिप्पभेण मयणरेहाए य काऊण पूयं वन्दियाओ उसभ-वद्धमाणचंदाणण-वरिसेणाभिहाणाओ जिणिन्दपडिमाओ। (८) 'एसा य कणयमाला मम विरहे अद्धिइं करिस्सइ। ता जहा एक्कलिया न भवइ तहा कायव्वं' त्ति जंपिऊण गओ सुरो। (९) अह चोइऊण तुरए रज्जुं गहिऊण वामहत्थेणं, नीहरिउं नयरीए संपत्तो नियकडयम्मि। (१०) विजओ गीयं सोऊण कन्नगं पासिउं पयट्टो। अक्खित्तो तीए रूवसद्देहिं मोत्तूण कुसुमच्चयं कुसुमसरपरवसो पविट्ठो कयलि-हरं। (११) तेण भणियं—'जो एयं दण्डगं गेण्हिस्सइ, सो राया

होहिइ। किन्तु पडिच्छियव्वं जाव अन्नाणि चत्तारि अंगुलाइं वड्ढेइ। ताहे जोगो' त्ति। (१२) जं जेण कयं कम्मं अन्नभवे इहभवे वसन्तेणं तं तेण वेइयव्वं निमित्तमेत्तं परो होइ। (१३) सोऊण इमं राया विज्जुप्पहारहओ नट्ठचेयणो सिंहासणाओ मुच्छाविहलंगओ निवडिओ धरणिविट्ठे। मुच्छावसाणे सोगारियमणो मुक्ककण्ठं रोविऊण पलावे काउं आढत्तो। (१४) अन्नया एगा महिला आगन्तूण कुमारसमीवं भणिउं पयत्ता, जहा। 'अत्थि तए सह किं पि वत्तव्वं' तेण वुत्तं 'भण'। (१५) अडवीमज्झे य वच्चन्तो भणिया य तेण साहुणो। 'वज्जह तुब्भे, वित्थरियं कन्तारं, अहयं महादुक्खेण अभिभूओ, न तरामि गन्तुं; एत्थेव भत्तं पच्चक्खामि'। (१६) अहो असारया संसारस्स, अणिच्चया जीवलोयस्स, खणभंगुरत्तणं पियसंजोगस्स, धम्मो चेवेत्थ सरणं, त्ति कट्टु वेरग्गमुवगओ। (१७) चइत्ता भारहं वासं, चइत्ता बलवाहणं, चइत्ता उत्तमे भोए महापउमे तवं चरे। (१८) तं बिन्ति अम्मापियरो 'सामण्णं पुत्त दुच्चरं, गुणाणं तु सहस्साइं धारेयव्वाइं साहुणा'। (१९) महापउमो राया जीवलोयस्स असारत्तं मुणिऊण नन्दिकुमारं विदेहजणवयस्स सामित्ते ठाविऊण, संजमसिरिं पाविऊण वरनाणदंसणलाभं च लध्दुं तिलोयमत्थयं गओ। (२०) जया सव्वं परिच्चज्ज गन्तव्वमवसस्स ते। अणिच्चे जीवलोगम्मि किं रज्जम्मि पसज्जसि॥

(೩) ಅರ್ಧಮಾಗಧಿಯಲ್ಲಿ ಭಾಷಾಂತರಿಸಿರಿ :—

(೧) ಒಮ್ಮೆ ಇಂದ್ರನ ಆಜ್ಞೆಯಂತೆ ಪಂಚಸೇಲದ್ವೀಪದಲ್ಲಿ ವಾಸಿಸುವ ಇಬ್ಬರು ದೇವತೆಗಳು ನಂದೀಸರ ದ್ವೀಪಕ್ಕೆ ತೀರ್ಥಯಾತ್ರೆಗೆ ಹೊರಟರು. ಅವರ ಪತಿಯಾದ ವಿಜ್ಜುಮಾಲಿಯು ಪಂಚಸೇಲಕ್ಕೆ ಅಧಿಪತಿಯಾಗಿದ್ದನು. ಆದರೆ ಅವನು ಚ್ಯುತನಾದನು. ಆಗ ಅವರು ತಾವು ಮತ್ತೊಬ್ಬ ಪತಿಯನ್ನು ಆರಿಸಬೇಕೆಂದು ಇಚ್ಛಿಸಿದರು. ಅವರು ಹೋಗುತ್ತಿರುವಾಗ ಮಾರ್ಗದಲ್ಲಿ ಕುಮಾರ ನಂದಿಯನ್ನು ನೋಡಿದರು. ಅವನ ಅಂತಃಪುರದಲ್ಲಿ ಐದುನೂರು ಜನ ಸ್ತ್ರೀಯರಿದ್ದರು. ಆ ದೇವತೆಯರು ತಮ್ಮ ಮನಸ್ಸಿನಲ್ಲಿ ಅಂದರು—"ಈ ಮನುಷ್ಯನು ಸ್ತ್ರೀಲೋಲನಾಗಿದ್ದಾನೆ. ಇವನನ್ನೇ ಮೋಹಿಸಿ ನಾವು ವಶಮಾಡಿಕೊಂಡು ಪತಿಯಾಗಿ ಮಾಡಿಕೊಳ್ಳೋಣ." ಹೀಗೆ

ವಿಚಾರಿಸಿ ಅವರು ಅಸನ ಮುಂದೆ ಬಂದು ನಿಂತರು. ಅವರ ಸೌಂದರ್ಯ ನೋಡಿ ಕುಮಾರನಂದಿಯು ಬಹಳ ಸಂತಷ್ಟನಾದನು ಮತ್ತು ಅವರಿಗೆ ಅಂದನು-" ನೀವು ಯಾರು? " ಅವರು ಅಂದರು-" ನಾವು **ಹಾಸಾ ಪಹಾಸಾ** ಎಂಬ ದೇವತೆಗಳು. ನಮ್ಮ ಕೂಡ ನಿನಗೆ ಕೆಲಸವಿದ್ದರೆ ನೀನು ಪಂಚಸೇಲ ದ್ವೀಪಕ್ಕೆ ಬರಬೇಕು " ಹೀಗೆ ಹೇಳಿ ಅವರು ಅದೃಶ್ಯರಾದರು.

(೨) ಹಿಂದಕ್ಕೆ ಚಂಪಾನಗರನದಲ್ಲಿ ಉದಯನನೆಂಬ ರಾಜನು ರಾಜ್ಯ ಭಾರ ಮಾಡುತ್ತಿದ್ದನು. ಅವನು ಬ್ರಾಹ್ಮಣ ತಾಪಸ ಭಕ್ತನಾಗಿದ್ದನು. ಅವನಿಗೆ ಪ್ರಭಾವತಿಯೆಂಬ ಹೆಂಡತಿಯಿದ್ದಳು. ಅವಳು ಜಿನಪ್ರತಿಮೆಯನ್ನು ಪೂಜಿಸುತ್ತಿದ್ದಳು. ರಾಜಮಂದಿರದಲ್ಲಿ ಅವಳು ಜಿನಪ್ರತಿಮೆಯನ್ನು ಸ್ಥಾಪಿಸಿದ್ದಳು. ದೇವದತ್ತೆ ಎಂಬ ಒಬ್ಬ ಕುಬ್ಜೆಯಾದ ದಾಸಿಯು ಅವಳ ಸೇವೆ ಮಾಡುತ್ತಿದ್ದಳು. " ನನ್ನ ಮೈಬಣ್ಣವು ಬಂಗಾರದಂತೆಯಾಗಲಿ " ಎಂದು ಇಚ್ಛಿಸಿ ದೇವದತ್ತೆಯು ಒಮ್ಮೆ ಒಂದು ಗುಳಿಗೆಯನ್ನು ತಿಂದಳು. ಆಗ ಅವಳ ಇಚ್ಛೆಯಂತೆ ಆವಳು ಒಬ್ಬ ಸುಂದರಸ್ತ್ರೀಯಾದಳು. ಅವಳ ಗೂನು ಇಲ್ಲದಂತಾಯಿತು. ಮತ್ತು ಅವಳಿಗೆ " ಸುವರ್ಣಗುಲಿಕಾ " ಎಂದು ಹೆಸರು ಆಯಿತು.

(೩) ಉಜ್ಜಯನೀ ನಗರದಲ್ಲಿ ಪ್ರಸಿದ್ಧಳಾದ ಒಬ್ಬ ವೇಶ್ಯೆಗೆ ದೇವದತ್ತೆ ಎಂಬ ಬಹು ಸುಂದರ ಮಗಳಿದ್ದಳು. ಅವಳು ಬಹಳ ಪ್ರೇಮವುಳ್ಳ ಸ್ವಭಾವದವಳಾಗಿದ್ದಳು. ಅವಳಿಗೆ ವಿವಿಧ ಕಲೆಗಳಲ್ಲಿ ಬಹಳ ಅಭಿರುಚಿಯಿತ್ತು. ಆದರೆ ಉಜ್ಜಯನೀ ನಗರದಲ್ಲಿಯ ಒಬ್ಬ ಪುರುಷನೂ ಅವಳ ಮನಸ್ಸಿಗೆ ಬರಲಿಲ್ಲ. ಇದನ್ನು ಕೇಳಿ ಮೂಲದೇವನು ಒಂದುದಿನ ಬೆಳಗು ಮುಂಜಾನೆ ಅವಳ ಮನೆಯ ಹತ್ತಿರ ಹೋದನು; ಮತ್ತು ವೀಣೆಯನ್ನು ಬಾರಿಸಹತ್ತಿದನು. ಅದರ ಸ್ವರಯೋಜನೆಯು ಮಧುರವಾಗಿತ್ತು. ವೀಣೆಯನ್ನು ಕೇಳಿ ದೇವದತ್ತೆ ಇವಳಿಗೆ ಎಚ್ಚರಿಕೆಯಾಯಿತು. ಅವಳಿಗೆ ಅವನ ವೀಣಾವಾದನವು ಬಹಳ ರುಚಿಸಿತು ಮತ್ತು ಆಗ ಅವಳು ತನ್ನ ದಾಸಿಯಿಂದ ಅವನನ್ನು ಕರೆಯಿಸಿ ಅವನಿಗೆ ಬಹಳ ಮರ್ಯಾದೆಮಾಡಿದಳು.

## (ವಿಕಾರಿ ಧಾತುಸಾಧಿತಗಳು)— ೧ ಕೃದಂತ ವಿಶೇಷಣಗಳು—(ರೂಪಸಿದ್ಧಿ)

| ವರ್ತಮಾನಕಾಲವಾಚಕ | | ಭೂತಕಾಲವಾಚಕ | | ವಿಧ್ಯರ್ಥ ಕರ್ಮಣಿ |
|---|---|---|---|---|
| ಕರ್ತರಿ | ಕರ್ಮಣಿ | ಕರ್ಮಣಿ | ಕರ್ತರಿ | |
| **अ** ಕಾರಾಂತ + **अन्त**, **माण**<br>,, ೨ ನೇ ವರ್ಗ + **अन्त**, **माण**<br>**आ** ಕಾರಾಂತ + **यन्त**<br>**ए**, **ओ** ಕಾರಾಂತ + **न्त**<br>* **माण** ಪ್ರತ್ಯಯವು ೩ ನೇವರ್ಗದ ಧಾತುಗಳಿಗೆ ಹತ್ತುವದಿಲ್ಲ.<br>ಪುಲ್ಲಿಂಗದಲ್ಲಿ **नर** ಶಬ್ದದಂತೆ.<br>ನಪುಂಸಕದಲ್ಲಿ **कम्म** ಶಬ್ದದಂತೆ.<br>ಸ್ತ್ರೀಲಿಂಗದಲ್ಲಿ**ई**ಪ್ರತ್ಯಯ ಕೂಡಿಸಿ **पुहवी** ಶಬ್ದದಂತೆ. ಧಾತು +**अन्त** ಅಥವಾ **माण** + **ई**.<br>ಮುಖ್ಯ ಉಪಯೋಗ ವಿಶೇಷಣ ಮತ್ತು ಸಂಕೇತಾರ್ಥದಲ್ಲಿ. | ಧಾತು + **इज्ज** + **अन्त** ಅಥವಾ **माण.** ಸಂಸ್ಕೃತ ದಿಂದಾದ ಕರ್ಮಣಿ ರೂಪಕ್ಕೆ **अन्त** ಅಥವಾ **माण.** ಮೂರೂ ಲಿಂಗ ಗಳಲ್ಲಿ ವರ್ತ. ಕರ್ತರಿ ಕೃದಂತ ವಿಶೇಷಣದಂತೆ ನಡೆಯುವದು. ಕರ್ಮಣಿ ಪ್ರಯೋಗದಲ್ಲಿ ಕ್ವಚಿ ತ್ತಾಗಿ ಉಪಯೋಗಿಸ ಲ್ಪಡುವದು. | ಧಾತು+**इय** ಅಥವಾ ಸಂಸ್ಕೃತದ ಕೃದಂತವನ್ನೇ ನೇರವಾಗಿ ತೆಗೆದುಕೊಳ್ಳುವದು. ಪು.ನ. ಲಿಂಗಗಳಲ್ಲಿ **नर**,**कम्म** ದಂತೆ ಸ್ತ್ರೀಲಿಂಗದಲ್ಲಿ **आ** ಪ್ರತ್ಯಯ ಹಚ್ಚಿ **देवया** ದಂತೆ.<br>ಉಪಯೋಗ—<br>ಭೂತಕಾಲದಲ್ಲಿ ಕ್ರಿಯಾಪದದ ಸ್ಥಾನದಲ್ಲಿ. ವಿಶೇಷಣ ದಂತೆ ಮತ್ತು ಪೂರ್ಣ ಭೂತ ಕಾಲದ ಅರ್ಥದಲ್ಲಿ. | ಭೂ.ಕ.ಕೃ.ವಿ. +**वन्त.** ಮೂರೂ ಲಿಂಗಗಳಲ್ಲಿ ಭೂ. ಕ.ಕೃ.ವಿ. ದಂತೆ ನಡೆಯುವದು.<br>ಕರ್ತರಿಯಲ್ಲಿ ವಾಕ್ಯವನ್ನು ಬದ ಲಿಸುವಾಗ ಉಪ ಯೋಗಿಸಲ್ಪಡು ವದು. | **अ** ಕಾರಾಂತ ಧಾತು + **णिज्ज** ಅಥವಾ **इयव्व**<br>,, ೨ ನೇ ವರ್ಗ ,, ,,<br>**अ** ಕರಾಂತೇತರ<br>೩ ನೇ ವರ್ಗದ +**यव्व**<br>೩ ನೆಯ ವರ್ಗದ ಧಾತು ಗಳಿಗೆ **णिज्ज** ಪ್ರತ್ಯಯ ಹತ್ತುವದಿಲ್ಲ. ಪು. ನ. ಲಿಂಗಗಳಲ್ಲಿ **नर** ಮತ್ತು **कम्म** ದಂತೆ. ಸ್ತ್ರೀಲಿಂಗ ದಲ್ಲಿ **आ** ಪ್ರತ್ಯಯ ಹಚ್ಚಿ **देवया** ದಂತೆ.<br>ಮುಖ್ಯ ಉಪಯೋಗವು ವಿಶೇಷಣದಂತೆ. ವಿಧ್ಯರ್ಥ ಕ್ರಿಯಾಪದದ ಸ್ಥಾನದಲ್ಲಿ ಉಪಯೋಗ ವಾಗುವದು. |

## ೨ ಕೃದಂತ ಅವ್ಯಯಗಳು (ರೂಪಸಿದ್ಧಿ)

| ಭೂತಕೃದಂತ ಅವ್ಯಯ | ಹೇತ್ವರ್ಥಕ ಅವ್ಯಯ |
|---|---|
| अ ಕಾರಾಂತ ಧಾತು + इऊण | अ ಕಾರಾಂತ ಧಾತು + इतं |
| ಇತರ ಧಾತು + ऊण | ಇತರ ಧಾತು + तं |
| ಎಲ್ಲ ಧಾತುಗಳಿಗೆ— इत्ता, एत्ता, इत्ताणं, एत्ताणं, इत्तु, एत्तु | ಎಲ್ಲ ಧಾತುಗಳಿಗೆ — इत्तए, एत्तए |
| ಅಪಭ್ರಂಶ— ए, तं, इ | |
| ಇದಲ್ಲದೆ ಸಂಸ್ಕೃತದಿಂದ ನೇರವಾಗಿಯೂ ರೂಪಗಳು ಬರುವವು. | |

## ೩ ಕೃದಂತಗಳ ಉಪಯೋಗ

ವಿ ಸೂ. — ವಿಶೇಷಣದಂತೆ ಉಪಯೋಗವಾದಾಗ ವಿಶೇಷ್ಯದ ಲಿಂಗ, ವಚನ, ವಿಭಕ್ತಿಗಳನ್ನು ಅನುಸರಿಸುವವು. ಆದರೆ ಕ್ರಿಯಾಪದದ ಸ್ಥಾನದಲ್ಲಿ ಉಪಯೋಗವಾದಾಗ ಬೇರೆ ಬೇರೆ ಪ್ರಯೋಗಗಳಲ್ಲಿ ಬೇರೆ ಬೇರೆ ರೀತಿಯಿಂದ ಉಪಯೋಗಿಸುವರು. ಮುಖ್ಯವಾಗಿ ಭೂ. ಕ. ಕೃ. ವಿಶೇಷಣ ಮತ್ತು ವಿ.ಕ.ಕೃ. ವಿಶೇಷಣಗಳು ಕ್ರಿಯಾಪದದ ಸ್ಥಾನದಲ್ಲಿ ಹೆಚ್ಚಾಗಿ ಉಪಯೋಗವಾಗುವದರಿಂದ ಅವುಗಳನ್ನೇ ಮುಂದಿನ ಕೋಷ್ಟಕಿನಲ್ಲಿ ತೋರಿಸಿವೆ.

| | ಕರ್ತೃ | ಕರ್ಮ | ಕೃದಂತ ವಿಶೇಷಣ |
|---|---|---|---|
| ೧ ಸಕರ್ಮಕ ಕ್ರಿಯಾ ಪದವಿದ್ದು ಕರ್ಮವು ಅಧ್ಯಾಹೃತವಿದ್ದರೆ | ತೃತೀಯೆಯಲ್ಲಿ | ಪ್ರಥಮೆಯಲ್ಲಿ | ಭೂ. ಕ. ಕೃ. ವಿಶೇಷಣವು ಕರ್ಮದ ಲಿಂಗ, ವಚನ, ವಿಭಕ್ತಿಗಳನ್ನು ಹೊಂದುವದು. |
| ೨ ಸಕರ್ಮಕ ಕ್ರಿಯಾಪದವಿದ್ದು ಕರ್ಮವು ಅಧ್ಯಾಹೃತವಿದ್ದರೆ ಅಥವಾ ಒಂದು ವಾಕ್ಯವೇ ಕರ್ಮವಾಗುತ್ತಿದ್ದರೆ. | ತೃತೀಯೆಯಲ್ಲಿ | | ಕರ್ತೃವಿನ ಲಿಂಗ, ವಚನಗಳು ಏನೇ ಇದ್ದರೂ ಭೂ. ಕ. ಕೃ. ವಿ. ವು ನಪುಂಸಕಲಿಂಗ ಪ್ರಥಮಾ ಏಕವಚನದಲ್ಲಿರುವದು. |

| | ಕರ್ತೃ | ಕರ್ಮ | ಕೃದಂತ ವಿಶೇಷಣ |
|---|---|---|---|
| ಅಕರ್ಮಕ ಕ್ರಿಯಾ ಪದವಿದ್ದರೆ | ಪ್ರಥಮೆಯು | × | ಭೂ. ಕ. ಕೃ. ವಿಶೇಷಣವು ಕರ್ತೃವಿನ ಲಿಂಗ, ವಚನ, ವಿಭಕ್ತಿಗಳನ್ನು ಹೊಂದುವದು. |
| ೧ ಸಕರ್ಮಕ ಕ್ರಿಯಾ ಪದವಿದ್ದರೆ | ತೃತೀಯೆಯಲ್ಲಿ | ಪ್ರಥಮೆಯಲ್ಲಿ | ವಿ. ಕ. ಕೃ. ವಿ. ವು ಕರ್ಮದ ಲಿಂಗ, ವಚನ, ವಿಭಕ್ತಿಗಳನ್ನು ಹೊಂದುವದು. |
| ೨ ಸಕರ್ಮಕ ಕ್ರಿಯಾ ಪದವಿದ್ದು ಒಂದು ವಾಕ್ಯವೇ ಕರ್ಮವಾಗಿದ್ದರೆ | ತೃತೀಯೆಯಲ್ಲಿ | | ವಿ. ಕ. ಕೃ. ವಿ. ನಪುಂಸಕಲಿಂಗ ಪ್ರಥಮಾ ಏಕವಚನದಲ್ಲಿರುವದು. |

# ಪಾಠ ೧೬

## ಅವ್ಯಯಗಳು

ಸಂಸ್ಕೃತದಂತೆ ಅರ್ಧಮಾಗಧಿಯಲ್ಲಿಯೂ ಅವ್ಯಯಗಳನ್ನು ನಾಲ್ಕು ಪ್ರಕಾರವಾಗಿ ವಿಭಾಗಿಸಬಹುದು. ಅವು ಕೆಳಗಿನಂತಿವೆ.

**ಕ್ರಿಯಾವಿಶೇಷಣ ಅವ್ಯಯಗಳು**–

ಅನೇಕ ಕ್ರಿಯಾವಿಶೇಷಣಾವ್ಯಯಗಳು ಮೂಲತಃ ನಾಮಪದಗಳ ವಿಭಕ್ತ್ಯಂತ ರೂಪಗಳೇ ಆಗಿದ್ದು ಅವುಗಳ ಮೂಲಸ್ವರೂಪವು ಮರೆಯಾಗಿ ಅವ್ಯಯಗಳಂತೆ ಉಪಯೋಗಿಸಲ್ಪಡುವಂತಹವುಗಳಾಗಿರುವವು. ಉದಾ — **उड्ढं, बहिं, कल्लं**. ಕೆಲವು ಪ್ರತ್ಯಯಗಳನ್ನು ಹೊಂದಿರುವಂತೆ ತೋರುವವು. ಉದಾ – **एत्थ, जहिं** ಮುಂ. ಸಂಖ್ಯಾವಾಚಗಳಿಗೆ **सो** ಪ್ರತ್ಯಯ ಹಚ್ಚುವದರಿಂದ ಕ್ರಿ. ವಿ. ಅವ್ಯಯಗಳಾಗುವವು. ಉದಾ– **सहस्ससो, सयसो** ಮುಂ. **त्थ, तस, ओ, हे, हिं** ಮೊದಲಾದ ಅನೇಕ ಪ್ರತ್ಯಯಗಳು ;ಅವ್ಯಯಗಳಕೊನೆಗೆ ಕಂಡುಬರುವವು. ಕ್ರಿ. ವಿ. ಅವ್ಯಯಗಳಲ್ಲಿ ಸಾಮಾನ್ಯವಾಗಿ ಮೂರು ಭಾಗಗಳನ್ನು ಮಾಡಬಹುದು.

## (ಅ) ಕಾಲವಾಚಕ

ಅಷ್ಟರಲ್ಲಿ–ताव, य, एत्थंतरे
ಆಮೇಲೆ, ಮತ್ತೆ–ता, तया, तओ, तो, तइया, ताहे
ಇಂದು, ಈಗ–अज्ज, एण्हि, एत्ताहे, इयाणि, संपय
ಇನ್ನುಮೇಲೆ–नवरि
ಒಮ್ಮೆಲೆ–सहसा, झत्ति,
ಕೇವಲ–नवरं
ನಾಳೆ–सुवे
ನಿನ್ನೆ–कल्लं
ಮತ್ತೆ–पुणो
ಯಾವಾಗ(ಪ್ರಶ್ನಾರ್ಥಕ)–कया, कइया
ಯಾವಾಗ(ಸಂಬಂಧಾರ್ಥಕ)–जया, जइया, जाहे
ಯಾವಾಗ....ಆವಾಗ जा....ता, जाव....ताव
ಯಾವಾಗಲೂ, ಸದಾ–निच्चं, सया, सइ, सययं
ಹಿಂದಕ್ಕೆ–पुव्विं, पुरा

## (ಆ) ಸ್ಥಲವಾಚಕ

ಅಲ್ಲಿ–तत्थ, तहिं
ಅಲ್ಲಿಂದ–तओ, तत्तो
ಇಲ್ಲಿ–इहं, एत्थ
ಇಲ್ಲಿಂದ–इओ, एत्तो
ಎಲ್ಲಿ (ಸಂಬಂಧಾರ್ಥಕ)–जहिं, जत्थ
ಎಲ್ಲಿ (ಪ್ರಶ್ನಾರ್ಥಕ)–कत्थं, कहिं
ಎಲ್ಲಿಂದ (ಸಂಬಂಧಾರ್ಥಕ)–जओ, जत्तो
ಎಲ್ಲಿಂದ (ಪ್ರಶ್ನಾರ್ಥಕ)–कओ, कुओ, कत्तो
ಎಲ್ಲೆಡೆಗೆ–सव्वत्थ
ಎಲ್ಲಿಯೊ–कत्थइ, कहिंचि, कहिंपि
ಒಂದೆಡೆಗೆ–एगत्थ
ದೂರ–दूरओ
ನಡುವೆ–अन्तरा
ಬೇರೆಡೆಗೆ–अन्नत्थ
ಮುಂದೆ, ಎದುರಿಗೆ–अग्गओ
ಮೇಲೆ–उड्ढं
ಹಿಂದೆ, ಹಿಂದಿನಿಂದ–पच्छा
ಹೊರಗೆ–बाहिं, बहिया

## (ಇ) ರೀತಿವಾಚಕ

ಅಂತೆ–इव, विय, व्व, पिव
ಅವಶ್ಯವಾಗಿ–अवस्सं
ಆದ್ದರಿಂದ, ಆದರೂ–तहा, एवं
ಇಲ್ಲ, ಬೇಡ–न, मा
ಒಮ್ಮೆಲೆ, ಕೂಡಲೆ–सिग्घं, लहुं, हव्वं, तुरियं
ಕ್ರಮೇಣ–कमेण
ಕಾಳಜಿಯಿಂದ–जयं
ಕೂಡಿ–समं
ಕೇವಲ–केवल

ಚನ್ನಾಗಿ–**सम्मं**
ಚನ್ನಾಗಿ, ಲೇಸು, ಶ್ರೇಯಸ್ಕರ–**सेयं**
ನೆಟ್ಟಗೆ–**सुट्टु**
ಬಹಳವಾಗಿ–**बाढं, घणियं**
ಮೆಲ್ಲಗೆ–**सणियं**
ಸ್ವಲ್ಪ–**ईसिं, मणं**
ಸ್ಪಷ್ಟವಾಗಿ–**फुडं**
ಹೇಗಾದರೂ–**कहं पि**

ಕ್ರಿಯಾವಿಶೇಷಣಾವ್ಯಯಗಳನ್ನು ಕ್ರಿಯೆಯ ಸ್ಥಲ, ಕಾಲ, ರೀತಿ, ಮೊದಲಾದವುಗಳನ್ನು ತೋರಿಸಲು ಉಪಯೋಗಿಸುವರು.

**ಶಬ್ದಯೋಗೀ ಅವ್ಯಯಗಳು.**

ಈ ಅವ್ಯಯಗಳು ಮುಖ್ಯವಾಗಿ ಕಾರ್ಯಕಾರಣ, ವಿಭಕ್ತಿ ಸಂಬಂಧ, ಮತ್ತು ಉಪಪದಗಳ ಅರ್ಥದಲ್ಲಿ ಉಪಯೋಗಿಸಲ್ಪಡುವವು. ಬೇರೆ ಬೇರೆ ಶಬ್ದಯೋಗೀ ಅವ್ಯಯಗಳು ವಿಶಿಷ್ಟ ವಿಭಕ್ತಿಯೊಡನೆಯೆ ಬರುವವು.

[೧] ದ್ವಿತೀಯಾ ವಿಭಕ್ತಿಯೊಡನೆ :— ಹೊರತಾಗಿ–**अन्तरेण**; ವರೆಗೆ–**जाव**; ಕಡೆಗೆ **पइ**; ಹೊರತಾಗಿ–**मोत्तूण**; ಒಡನೆ, ಕೂಡಿ–**आदाय, गहाय**.

[೨] ತೃತೀಯಾ ವಿಭಕ್ತಿಯೊಡನೆ :— ಕೂಡಿ, ಒಡನೆ–**सह, समं, सद्धिं** ಹೊರತು–**विणा.**

[೩] ಪಂಚಮೀ ವಿಭಕ್ತಿಯೊಡನೆ :— ಇಂದ–**आरब्भ**.

[೪] ಷಷ್ಠೀ ವಿಭಕ್ತಿಯೊಡನೆ :— ಮುಂದೆ–**पुरओ**; ಮೇಲೆ–**उवरिं**; ಹತ್ತರ–**समीवं**; ಸಲುವಾಗಿ–**कए**; ಕೆಳಗೆ–**हेट्ठा**; ಹೊರಗೆ–**बाहिं**; ಪ್ರತ್ಯಕ್ಷ–**पच्चक्खं**.

**ಬೇರೆ ಕೆಲವು ಶಬ್ದಯೋಗೀ ಅವ್ಯಯಗಳು :—***

ಆಚೆಗೆ—**अइ; अइक्कम, अइगच्छ.**
ಹಿಂದೆ, ಕೂಡಿ ಮುಂ.—**अणु; अणुकर, अणुजाण.**
ದೂರ—**अव, ओ; अवक्कम, ओहर.**
ಕಡೆಗೆ—**अभि; अभिगच्छ, अभिभव, अभिवट्ट.**
ಕೆಳಗೆ—**अव, ओ; अवतर, अवमाण, ओगाह.**
ವರೆಗೆ, ಮೇಲೆ—**आ; आरुह, आगच्छ.**
ಮೇಲೆ—**उद्; उग्गम, उत्तर.**

* ಈ ಅವ್ಯಯಗಳು ಧಾತುಗಳೊಡನೆ ಉಪಯೋಗಿಸಲ್ಪಡುವವು.

ಸಮೀಪ—उव; उवागच्छ, उवधार.
ಕೆಟ್ಟ, ಕಠಿಣ—दुस; दुच्चर, दुक्कर.
ಹೊರಗೆ—निस्; निग्गम, निस्सर.
ಒದಿಗೆ—परि; परिगण, परिवड्ढ.
ಕಡೆಗೆ—पडि, परि; पडिवाल, परिवाल.
ಬೇರೆ, ದೂರ, ವಿಶೇಷ—वि; विकुव्व, विवर, विभिण्ण.
ಕೂಡಿ—सम्; सन्तोस, संगम.
ನೆಟ್ಟಗೆ—सु; सुलद्ध, सुकर.
ಪ್ರಕಟ, ಸ್ಪಷ್ಟ—पाउ; पाउक्कर, पाउब्भव.

## ಉಭಯಾನ್ವಯೀ ಅವ್ಯಯಗಳು :—

ಈ ಪ್ರಕಾರದ ಅವ್ಯಯಗಳು ವಿಶೇಷವಾಗಿಲ್ಲ. ವಾಕ್ಯಗಳಲ್ಲಿ ಭೂ.ಕೃ. ಅವ್ಯಯವನ್ನು ಉಪಯೋಗಿಸಿ ವಾಕ್ಯಗಳನ್ನು ಕೂಡಿಸುವದೇ ಹೆಚ್ಚು. ಕೆಲವು ಮುಖ್ಯವಾದವುಗಳನ್ನು ಕೆಳಗೆ ಕೊಟ್ಟಿದೆ.

ಇದೀಗ–अह; ಮತ್ತು–च, य; ಮತ್ತೂ ಏನಂದರೆ-किच; ಅಥವಾ–वा, अहवा; ಆದರೆ–किंतु; ರೆ–जइ; ಎಂದು–ति, त्ति, इइ, इति.

## ಕೇವಲ ಪ್ರಯೋಗೀ ಅವ್ಯಯಗಳು :—

हा, रे, भो ಮೊದಲಾದವು ಕೇವಲಪ್ರಯೋಗೀ ಅವ್ಯಯಗಳೆನಿಸುವವು. ಇವು ಬಹಳ ಸ್ವಲ್ಪ ಇರುವವು. ಮನೋವಿಕಾರಗಳನ್ನು ಸೂಚಿಸಲು ಇವುಗಳ ಉಪಯೋಗವಾಗುವದು. ಇವು ಎಲ್ಲ ಸಂಸ್ಕೃತದಿಂದಲೇ ಬಂದಿವೆ.

## ಶಬ್ದಸಂಗ್ರಹ

**अकिंचण** (ವಿ.) ದರಿದ್ರ
**अचित्त** (ವಿ.) ನಿರ್ಜೀವ
**अज्जण** (ನ.) ಗಳಿಕೆ, ಅರ್ಜನ
**अवणी** (ಧಾ.) ದೂರಗೊಳಿಸು, ಸರಿಸು
**असंसत्त** (ವಿ.) ಆಸಕ್ತಿಇಲ್ಲದ
**आवन्न** (ಭೂ.ಕ.ಕೃ.ವಿ.) ಪ್ರಾಪ್ತ, ಹೊಂದಿದ
**आवन्नसत्ता** (ಸ್ತ್ರೀ.) ಗರ್ಭವತಿಸ್ತ್ರೀ
**आसन्न** (ವಿ.) ಸಮೀಪ
**उम्मग्ग** (ಪು.) ಉನ್ಮಾರ್ಗ, ವಿರುದ್ಧ
**उवाय** (ಪು.) ಉಪಾಯ
**कहकहमवि** (ಅ.) ಹೇಗೊ, ಬಹುಕಷ್ಟದಿಂದ

**खरमुही** (ಸ್ತ್ರೀ.) ಒಂದು ಹೆಸರು
**गण** (ಧಾ.) ಎಣಿಸು, ಲಕ್ಷಿಸು
**गमणागमण** (ನ.) ಹೋಗುವದು, ಬರುವದು
**गामान्तर** (ನ.) ಬೇರೆ ಗ್ರಾಮ
**घय** (ನ.) ತುಪ್ಪ, ಘೃತ
**घर** (ನ.) ಮನೆ
**चंडवेग** (ಪು.) ಒಂದು ಹೆಸರು
**चित्त** (ನ.) ಮನ, ಸಜೀವ
**जणवाअ** (ಪು.) ಜನಾಪವಾದ
**तत्त** (ನ.) ತತ್ವ
**तंदूल** (ಪು.) ಅಕ್ಕಿ
**तिसा** (ಸ್ತ್ರೀ.) ನೀರಡಿಕೆ
**तेरिच्छि** / **तिरिच्छि** (ವಿ.) ಪಶುಪಕ್ಷಿ
**दक्ख** (ವಿ.) ದಕ್ಷ, ಕಾಳಜಿಯುಳ್ಳ
**दत्त** (ಭೂ.ಕ.ಕೃ.ವಿ.) ಕೊಡಲ್ಪಟ್ಟ
**दारवाल** (ಪು.) ದ್ವಾರಪಾಲಕ
**दारिद्द** (ನ.) ಬಡತನ, ದಾರಿದ್ರ್ಯ
**दीह** (ವಿ.) ದೀರ್ಘ, ಉದ್ದ, ಒಬ್ಬ ರಾಜನ ಹೆಸರು
**देस** (ಪು.) ದೇಶ
**नवरं** / **नवरिं** (ಅ.) ಕೇವಲ
**निउत्त** (ಭೂ.ಕ.ಕೃವಿ.) ನಿಯುಕ್ತ, ನಿಯಮಿಸಲ್ಪಟ್ಟ
**निच्चिन्त** (ವಿ.) ನಿಶ್ಚಿಂತ
**पत्थाव** (ಪು.) ಪ್ರಸ್ತಾವ, ಪ್ರಸಂಗ
**पमुह** (ವಿ.) ಪ್ರಮುಖ, ಮುಖ್ಯ
**पलाण** (ವಿ.) ಓಡಿಹೋದ, ಕಳೆದ
**पविट्ठ** (ಭೂ.ಕೃ.ವಿ.) ಪ್ರವೇಶಿಸಿದ
**पसवसमय** (ಪು.) ಹಡಿಯುವವೇಳೆ
**पीडिअ** / **पीडिय** (ಭೂ.ಕ.ಕೃ.ವಿ.) ಪೀಡಿತ
**पेस** (ಧಾ.) ಕಳಿಸು
**पोम** (ನ.) ಪದ್ಮ, ಕಮಲ
**बोधिसत्त** (ಪು.) ಒಂದು ಹೆಸರು
**भड** (ಪು.) ಸೈನಿಕ, ವೀರ
**भद्द** (ವಿ.) ಭದ್ರ, ಸುಂದರ
**भमण** (ನ.) ಭ್ರಮಣ, ತಿರುಗುವದು
**भव्व** (ವಿ.) ಭವ್ಯ, ಉತ್ತಮ
**भाणुवेग** (ಪು.) ಒಂದು ಹೆಸರು
**भिक्खावित्ति** (ಸ್ತ್ರೀ.) ಭಿಕ್ಷಾವೃತ್ತಿ, ಭಿಕ್ಷೆಯಿಂದ ಉಪಜೀವಿಸುವದು
**महापिंगल** (ಪು.) ಒಂದು ಹೆಸರು
**मुट्ठि** (ಸ್ತ್ರೀ.) ಮುಷ್ಟಿ
**मुट्ठिप्पहार** (ಪು.) ಮುಷ್ಟಿಪ್ರಹಾರ, ಗುದ್ದುವದು
**मुसा** (ಸ್ತ್ರೀ.) ಸುಳ್ಳು
**मुहाजीवि** (ವಿ.) ಬಿಕ್ಷೆಯಿಂದ ಜೀವಿಸುವವ
**मेहुण** (ನ.) ಮೈಥುನ, ಕಾಮಕ್ರೀಡೆ
**वच्छविसय** (ಪು.) ಒಂದು ದೇಶದ ಹೆಸರು
**वरधणु** (ಪು.) ಒಂದು ಹೆಸರು
**विज्जाहर** (ಪು.) ವಿದ್ಯಾಧರ, ದೇವಜಾತಿ

संन्ना (ಸ್ತ್ರೀ.) ಸಂಜ್ಞೆ, ಗುರುತು
सरण (ಪು.ನ.) ಶರಣು, ರಕ್ಷಣೆ
सलिलत्थि (ವಿ.) ನೀರನ್ನು ಹುಡುಕುವ, ಬೇಡುವ
सव्वओ (ಅ.) ಎಲ್ಲ ಕಡೆಗೆ
साडुयग (ಪು.) ಒಂದು ಹೆಸರು
सुअ (ಭೂ.ಕ.ಕೃವಿ.) ಕೇಳಿದ
हम्ममाण[ವ.ಕ.ಕೃ.ವಿ.]ಕೊಲ್ಲಲ್ಪಡುವ

(೧) ಕನ್ನಡಕ್ಕೆ ಪರಿವರ್ತಿಸಿರಿ :—

(१) गच्छन्ता पत्ता दूरं गामन्तरं। तत्थ सलिलत्थी वरधणू पविट्ठो। लहुमागन्तूण भणइ जहा। 'दीहराइणा बंभदत्तस्स सव्वओ पन्था बंधाविय त्ति जणवाओ एत्थ मए सुओ। ता कुमार नस्सामो'। तओ पयट्टा उम्मग्गेणं। पत्ता महाडइं तओ कुमारं वडस्स हेट्ठा ठविउं तिसाभिभूयं गओ वरधणू जलट्ठा। ताव य दिणावसाणे दिट्ठो वरधणू जमभडेहिं व दीहनिउत्तनरेहिं हम्ममाणो दूरदेसमागओ। कुमारस्स सन्ना कया। पलणो बंभदत्तो, पडिओ य दुग्गमकन्तारं।

(२) अत्थि वच्छाविसए कोसंबी नाम नयरी। तहिं सउणीओ नाम नरवई। साडुयगो नाम माहणो। सो य दारिद्दोवद्दवपीडिओ कहकहवि भिक्खावित्तीए कालं गमेइ। अन्नया आवन्नसत्ताए खरमुही नामाए भज्जाए भणिओ एसो—'बंभण! आसन्नो पसवसमओ, न य घरे घयतंदुलाइं अत्थि, ता कीस निच्चिन्तो चिट्ठसि?'। तेणभणियं 'भद्दे, पइदिणं भिक्खाभमणेण नट्ठा मे बुद्धी, ता तुमं चेव साहसु को एत्थ पत्थावे दव्व–अज्जण–उवाओ' त्ति। तीए भणियं–'गच्छ निवं सव्वायरेण सरणं। न तं विणा दारिद्दं अवणिज्जइ' त्ति सो वि पइदिणं तहेव करेइ।

(६) कोहा वा जइ वा हासा, लोहा वा जइ वा भया।
मुसं न वयइ जो उ, तं वयं बूम माहणं ॥ १ ॥
चित्तमन्तमचित्तं वा अप्पं वा जइ वा बहुं।
न गिण्हइ अदत्तं जो, तं वयं बूम माहणं ॥ २ ॥
दिव्वमाणुसतेरिच्छि, जो न सेवइ मेहुणं।
मणसाकायवक्केण, तं वयं बूम माहणं ॥ ३ ॥
जहा पोमं जले जायं, नोवलिप्पइ वारिणा।

एवं अलित्तं कामेहिं, तं वयं बूम माहणं ॥ ४ ॥
अलोलुयं मुहाजीविं अणगारं अकिंचणं ।
असंसत्तं गिहत्थेसु, तं वयं बूम माहणं ॥ ५ ॥

(೨) ಅರ್ಧಮಾಗಧಿಯಲ್ಲಿ ಭಾಷಾಂತರಿಸಿರಿ :—

(೧) ಒಂದಾನೊಂದು ಕಾಲದಲ್ಲಿ ವಾರಾಣಸೀ ಪಟ್ಟಣದಲ್ಲಿ ಮಹಾ ಪಿಂಗಲನೆಂಬ ರಾಜನು ರಾಜ್ಯಭಾರ ಮಾಡುತ್ತಿದ್ದನು. ಅವನು ಬಹಳ ದುಷ್ಟ ನಿದ್ದನು. ಆದ್ದರಿಂದ ಅವನು ಸಾಯಲು ಯಾರಿಗೂ ದುಃಖವೆನಿಸಲಿಲ್ಲ. ಆ ಪಟ್ಟಣದಲ್ಲಿ ಅವನ ದ್ವಾರಪಾಲಕನೊಬ್ಬನು ಮಾತ್ರ ಅಳುತ್ತಿದ್ದನು. ಅದನ್ನು ಕಂಡು ಬೋಧಿಸತ್ವನು ಅವನ ಹತ್ತಿರಹೋಗಿ ಅಂದನು–“ ಎಲೊ, ಮಹಾ ಪಿಂಗಳನು ಸತ್ತದ್ದಕ್ಕೆ ನಿನಗೊಬ್ಬನಿಗೇ ಏಕೆ ಇಷ್ಟು ದುಃಖವಾಗಿದೆ?” ಅವನು ಅಂದನು –“ ಅವನು ರಾಜಮಂದಿರವನ್ನು ಪ್ರವೇಶಿಸುತ್ತಿರವಾಗ ಪ್ರತಿಸಲ ನನಗೆ ಹತ್ತು ಏಟುಗಳನ್ನು ಕೊಡುತ್ತಿದ್ದನು. ಈಗ ಅವನು ಪರಲೋಕಕ್ಕೆ ಹೋಗಿದ್ದಾನೆ. ಅಲ್ಲಿ ಯಮನಿಗೂ ಅವನು ಇದೇ ಪ್ರಯೋಗವನ್ನು ಮಾಡ ಹತ್ತಿದರೆ ಯಮನು ಸಿಟ್ಟಿಗೇಳಬಹುದು. ಮತ್ತು ಮತ್ತೆ ಅವನನ್ನು ಭೂಲೋ ಕಕ್ಕೆ ತಂದು ಬಿಡಬಹುದು. ಆ ಮೇಲೆ ನನಗೆ ಪೀಡೆಯು ಮತ್ತೆ ಆರಂಭ ವಾಗಬಹುದು. ಈ ಭೀತಿಯಿಂದ ನಾನು ಅಳುತ್ತಿದ್ದೇನೆ.”

(೨) ಹಿಂದಕ್ಕೆ ಹಸ್ತಿನಾಪುರದಲ್ಲಿ ಸುಧರ್ಮಣನೆಂಬ ಹೆಸರಿನ ಒಬ್ಬ ಪ್ರಖ್ಯಾತ ರಾಜನು ರಾಜ್ಯಭಾರ ಮಾಡುತ್ತಿದ್ದನು. ಅವನು ತನ್ನ ಎಲ್ಲ ವೇಳೆ ಯನ್ನೂ ಸುಖೋಪಭೋಗದಲ್ಲಿಯೆ ಕಳೆಯತ್ತಿದ್ದನು. ಅವನಿಗೆ ಧರ್ಮದ ಅರಿವೇ ಇದ್ದಿಲ್ಲ. ಒಮ್ಮೆ ಅವನು ತನ್ನ ತೋಟದಲ್ಲಿ ಕುಳಿತಿರಲು ಅವನು ಒಬ್ಬ ಸಾಧುವನ್ನು ನೋಡಿದನು. ಆ ಸಾಧುವು ಅವನ ಹತ್ತಿರ ಬಂದು ಅಂದನು–“ ಮಹಾರಾಜನೆ, ಧರ್ಮವೆಂದರೇನು? ನಿನಗೆ ಗೊತ್ತು ಇದೆಯೆ?” ರಾಜನು ‘ ಇಲ್ಲ’ ವೆಂದನು. ಆಗ ಆ ಸಾಧುವು ಧರ್ಮದ ಮುಖ್ಯ ಮುಖ್ಯ ತತ್ವಗಳನ್ನು ಬಹಳ ಸರಳ ಭಾಷೆಯಲ್ಲಿ ರಾಜನಿಗೆ ತಿಳಿಸಿದನು. ರಾಜನಿಗೂ ಮೆಲ್ಲನೆ ಸಂಸಾರದ ನಶ್ವರತೆಯ ಬಗ್ಗೆ ಕಲ್ಪನೆ ಬರಹತ್ತಿತು; ಮತ್ತು ಕೊನೆಗೆ ಅವನು ತನ್ನ ಮಗನನ್ನು ಪಟ್ಟಕ್ಕೆ ಕೂಡ್ರಿಸಿ ರಾಜ್ಯದ ಎಲ್ಲ ಸೂತ್ರಗಳನ್ನು ಅವನ ಕೈಯಲ್ಲಿ ಕೊಟ್ಟು ಅದೇ ಸಾಧುವಿನ ಹತ್ತಿರ ಸನ್ಯಾಸಿಯಾದನು.

(೩) ಇಷ್ಟರಲ್ಲಿ ಅಲ್ಲಿ ಇಬ್ಬರು ವಿದ್ಯಾಧರ ಕುಮಾರರು ಬಂದರು. ಮತ್ತು ಸಣಂಕುಮಾರನಿಗೆ ವಿನಯಪೂರ್ವಕ ನಮಸ್ಕರಿಸಿ ಅಂದರು—“ ಮಹಾರಾಜನೆ, ಮಗನು ಸತ್ತದ್ದು ತಿಳಿದಕೂಡಲೆ ಅಸಣಿವೇಗನು ಅತಿ ವೇಗದಿಂದ ನಿಮ್ಮಮೇಲೆ ಏರಿಬರುತ್ತಿದ್ದಾನೆ. ಆದ್ದರಿಂದ ತಾವು ಎಚ್ಚರಿಕೆಯಿಂದಿರಬೇಕು. ಆದ್ದರಿಂದಲೇ ಚಂಡವೇಗ ಮತ್ತು ಭಾನುವೇಗರು ನಮ್ಮನ್ನು ನಿಮ್ಮ ಕಡೆಗೆ ಕಳುಹಿಸಿದ್ದಾರೆ. ಯುದ್ಧದ ಎಲ್ಲ ಸಿದ್ಧತೆಯನ್ನು ಮಾಡಿಕೊಂಡೇ ನಾವು ಇಲ್ಲಿಗೆ ಬಂದಿದ್ದೇವೆ. ಮತ್ತು ಸ್ವತಃ ಭಾನುವೇಗ ಚಂಡವೇಗರು ಹೆಚ್ಚು ಬಲವನ್ನು ತೆಗೆದುಕೊಂಡು ಬರುತ್ತಿದ್ದಾರೆ. ಆ ಕುಮಾರರು ಇಷ್ಟು ಹೇಳುತ್ತಿರುವಷ್ಟರಲ್ಲಿಯೆ ಚಂಡವೇಗ ಭಾನುವೇಗರು ಅಲ್ಲಿಗೆ ವಿದ್ಯಾಧರರ ದೊಡ್ಡ ಸೈನ್ಯದೊಡನೆ ಬಂದರು.

# ಪಾಠ ೧೭

## ಪ್ರಯೋಗ ವಿಚಾರ.

ಸಂಸ್ಕೃತದಂತೆ ಅರ್ಧಮಾಗಧಿಯಲ್ಲಿಯೂ ಮೂರು ಪ್ರಕಾರದ ಪ್ರಯೋಗಗಳಿರುವವು. ಅವು ಯಾವವೆಂದರೆ– (೧) **ಕರ್ತರಿ** (೨) **ಕರ್ಮಣಿ** (೩) **ಭಾವೆ.** ಕನ್ನಡದಲ್ಲಿ ಕರ್ಮಣಿ ಮತ್ತು ಭಾವೆ ಪ್ರಯೋಗಗಳ ಉಪಯೋಗವು ಹೆಚ್ಚಾಗಿಲ್ಲ.

**ಕರ್ತರಿ ಪ್ರಯೋಗ:—**

ಕರ್ತರಿ ಪ್ರಯೋಗದಲ್ಲಿ ಕ್ರಿಯಾಪದವು ಕರ್ತೃವನ್ನು ಅನುಸರಿಸಿ ಪುರುಷ ವಚನಗಳಲ್ಲಿ ಬದಲಾವಣೆಯನ್ನು ಹೊಂದುವದು. ಕರ್ತರಿ ಪ್ರಯೋಗದ ವಾಕ್ಯಗಳು ಸಾಮಾನ್ಯವಾಗಿ ಮೂರು ರೀತಿಯಾಗಿರಬಹುದು. ಕನ್ನಡದಂತೆ ತೃತೀಯ ಪುರುಷದಲ್ಲಿ ಲಿಂಗ ಭೇದಗಳಿಗನುಸಾರವಾಗಿ ಕ್ರಿಯಾಪದವು ಬದಲಾಗುವದಿಲ್ಲ.

(i) **ಸಕರ್ಮಕ ಕರ್ತರಿ**–ಕರ್ತೃ ಪ್ರಥಮೆಯಲ್ಲಿ, ಕರ್ಮ ದ್ವಿತೀಯೆಯಲ್ಲಿ. ಕ್ರಿಯಾಪದವು ಕರ್ತೃವಿನ ಪುರುಷ ವಚನಗಳನ್ನು ಅನುಸರಿಸಿರುವದು

ಉದಾ– **निवो रज्जं पालेइ, मेहा जलं वरिसन्ति, सा देवयं आराहइ; चेडा भारं गेण्हन्ति; सावया धम्मं सुणन्ति, हरिसन्ति.**

(ii) **ಅಕರ್ಮಕ ಕರ್ತರಿ**— ಕರ್ತೃವು ಪ್ರಥಮೆಯಲ್ಲಿದ್ದು ಕ್ರಿಯಾಪದವು ಮೇಲಿನಂತೆ ಕರ್ತೃವನ್ನು ಅನುಸರಿಸುವದು. ಅಕರ್ಮಕ ಕ್ರಿಯಾಪದವಿರುವದರಿಂದ ಕರ್ಮವಿರುವದಿಲ್ಲ. ಉದಾ— **नरिन्दो नयरं गच्छइ । सो सुहेण वच्चइ । सा देउले अच्छइ । किंकरो मूढो अत्थि; नरिन्दस्स कित्ती सुई अत्थि ।**

(iii) **ಕರ್ಮ–ಅಧ್ಯಾಹೃತ**– ಕ್ರಿಯಾಪದವು ಸಕರ್ಮಕವಿದ್ದರೂ ಕರ್ಮವನ್ನು ಹೇಳಿರುವದಿಲ್ಲ. ಕರ್ತೃವು ಪ್ರಥಮೆಯಲ್ಲಿದ್ದು ಕ್ರಿಯಾಪದವು ಮೇಲಿನಂತೆ ಕರ್ತೃವನ್ನು ಅನುಸರಿಸುವದು. ಉದಾ – **रामो भक्खइ, सो एवं वयासी ।** ಮುಂ.

**ಕರ್ಮಣಿ ಪ್ರಯೋಗ--**

ಈ ಪ್ರಯೋಗದಲ್ಲಿ ಕರ್ಮವು ಪ್ರಥಮಾ ವಿಭಕ್ತಿಯಲ್ಲಿದ್ದು ಕರ್ತೃವು ತೃತೀಯಾವಿಭಕ್ತಿಯಲ್ಲಿರುವದು. ಕ್ರಿಯಾಪದವು ಕರ್ಮಪದದ ಪುರುಷ ವಚನಗಳನ್ನು ಅನುಸರಿಸುವದು. ಕ್ರಿಯಾಪದವನ್ನು ಉಪಯೋಗಿಸುವಾಗ ಮೊದಲು ಅದರ ಕರ್ಮಣಿ ರೂಪವನ್ನು ಸಿದ್ಧಪಡಿಸಿಕೊಳ್ಳಬೇಕಾಗುವದು.

ಉದಾ **निवेण रज्जं पालिज्जइ । सीहेण मओ हत्थी पासिज्जइ । राहूणा चन्दो गसिज्जइ । समणेहिं धम्मो सुणिज्जइ । लोएहिं महावीरस्स पावयणं सुणिज्जइ ।**

ಅನೇಕ ಸಲ ಕರ್ಮಣಿ ವಾಕ್ಯದಲ್ಲಿ ಕ್ರಿಯಾಪದದ ಸ್ಥಾನದಲ್ಲಿ ಭೂತ ಕರ್ಮಣಿ ಕೃದಂತ ವಿಶೇಷಣವು ಕರ್ಮವನ್ನು ಅನುಸರಿಸುವದು. (ಕರ್ಮ ವಿಲ್ಲದಿದ್ದರೆ ಭಾವೇ ಪ್ರಯೋಗವಾಗುವದು.)

ಉದಾ — **सीहेण मओ हत्थी दिट्ठो । समणेहिं धम्मो सुणिओ ।** ಮುಂ.*

**ಭಾವೆ ಪ್ರಯೋಗ–**

ಕರ್ಮಣಿ ವಾಕ್ಯದಲ್ಲಿಯೆ ಕರ್ಮವಿಲ್ಲದೆ ಕ್ರಿಯಾಪದವನ್ನು ಯಾವಾಗಲೂ ತೃತೀಯ ಪುರುಷ ಏಕವಚನದಲ್ಲಿಡುವದರಿಂದ ಈ ಪ್ರಯೋಗವಾಗು

* ಭೂ.ಕ.ಕೃದಂತ ವಿಶೇಷಣಗಳ ಉಪಯೋಗದ ಬಗ್ಗೆ ಹಿಂದೆ ವಿವೇಚಿಸಲಾಗಿದೆ.

ವದು. ಕರ್ಮವಿಲ್ಲದುದರಿಂದ ಅಕರ್ಮಕ ಕ್ರಿಯಾಪದದೊಡನೆ ಈ ಪ್ರಯೋಗದ ಉಪಯೋಗವು ವಿಶೇಷವಾಗಿರುವದು. ಆದರೂ **ಅಕರ್ಮಕ ಭಾವೆ, ಸಕರ್ಮಕ ಭಾವೆ** ಎಂದು ರೀತಿಗಳು ಇರುವವು.

**ಅಕರ್ಮಕ ಭಾವೆ**-ಕರ್ತೃ ತೃತೀಯೆಯಲ್ಲಿ; **ಕ್ರಿಯಾಪದದ ಕರ್ಮಣಿ ರೂಪವನ್ನು ತೃತೀಯ ಪುರುಷ ಏಕವಚನದಲ್ಲಿ** ಉಪಯೋಗಿಸುವರು.

ಉದಾ— **नरिन्देण नयरं गच्छिज्जइ । तेण सुहेण वच्चिज्जइ । तीए देउले गच्छिज्जइ ।** ಮುಂ.*

**ಸಕರ್ಮಕ ಭಾವೆ** (ಕರ್ಮ ಅಧ್ಯಾಹೃತ)— ಕರ್ಮಣಿ ಪ್ರಯೋಗ ಮತ್ತು ಸಕರ್ಮಕ ಭಾವೇ ಪ್ರಯೋಗ. ಇವುಗಳಲ್ಲಿ ಮುಖ್ಯ ಅಂತರವೆಂದರೆ ಮೊದಲನೆಯುದರಲ್ಲಿ ಕರ್ಮವಿದ್ದು ಅದು ಪ್ರಥಮಾ ವಿಭಕ್ತಿಯಲ್ಲಿರುವದಲ್ಲದೆ ಕ್ರಿಯಾಪದವು ಅದನ್ನು ಅನುಸರಿಸುವದು. ಆದರೆ ಸಕರ್ಮಕ **ಭಾವೇ** ಪ್ರಯೋಗದಲ್ಲಿ ಕರ್ಮವು ಅಧ್ಯಾಹೃತವಾಗಿರುವದು. ಎಂದರೆ ಉಪಯೋಗಿಸಲ್ಪಟ್ಟಿರುವದಿಲ್ಲ. ಮತ್ತು **ಕ್ರಿಯಾಪದವು** ಯಾವಾಗಲೂ **ತೃತೀಯ ಪುರುಷ ಏಕವಚನ** ದಲ್ಲಿರುವದು. ಉದಾ— **रामेण भक्खिज्जइ । तेण एवं कहिज्जइ ।** ಮುಂ. §

## ಪ್ರಯೋಗ ಬದಲಿಸುವದು–

ಮೇಲಿನ ಪ್ರಯೋಗ ರೀತಿಗಳನ್ನು ನೆನಪಿಡಬೇಕು. ಅದರಿಂದ ಪ್ರಯೋಗಗಳನ್ನು ಬದಲಿಸುವದು ತಿಳಿಯಲು ಸುಲಭವಾಗುವದು. ಪ್ರಯೋಗಗಳನ್ನು ಕೆಳಗಿನಂತೆ ಬದಲಿಸಲು ಬರುವದು. ¶

* ಕರ್ಮಣಿ ಪ್ರಯೋಗದಂತೆ ಭಾವೇ ಪ್ರಯೋಗದಲ್ಲಿ ಭೂತಕಾಲವಾಚಕ ಕರ್ಮಣಿ ಧಾತುಸಾಧಿತ ವಿಶೇಷಣವನ್ನು ಉಪಯೋಗಿಸಲು ಬರುವದಿಲ್ಲ. ಯಾಕಂದರೆ ಕ್ರಿಯಾಪದವು ಅಕರ್ಮಕವಿದ್ದಾಗ ಕರ್ತೃವು ಪ್ರಥಮೆಯಲ್ಲಿರುವದು. ಇಲ್ಲಿ ಕರ್ತೃವು ತೃತೀಯೆಯಲ್ಲಿರುವದು. ಈ ಭೇದವನ್ನು ಚೆನ್ನಾಗಿ ಲಕ್ಷಿಸಬೇಕು.

§ ಇಲ್ಲಿ ಭೂ.ಕ.ಕೃ ವಿಶೇಷಣವನ್ನು ಉಪಯೋಗಿಸಬಹುದು. ಆಗ ಭೂ.ಕ.ಕೃ. ವಿಶೇಷಣವು ನಪುಂಸಕಲಿಂಗ ಪ್ರಥಮಾ ಏಕವಚನದಲ್ಲಿಯೆ ಉಪಯೋಗಿಸಲ್ಪಡುವದು. ಕರ್ತೃವು ತೃತೀಯಾ ವಿಭಕ್ತಿಯಲ್ಲಿದ್ದು ಕರ್ಮವು ಅಧ್ಯಾಹೃತವಾಗಿರುವದು. (ಕೃದಂತ ಪ್ರಕರಣದಲ್ಲಿ ನೋಡಬೇಕು.)

ಉದಾ— **रामेण भक्खियं । तेण एवं कहियं ।** ಮುಂ.

¶ ಮೇಲೆ ತೋರಿಸಿದ ಪ್ರಕಾರಗಳನ್ನು ಬಿಟ್ಟು ಬೇರೆ ರೀತಿಯಲ್ಲಿ ಪ್ರಯೋಗಗಳ ಬದಲಾವಣೆಯು ಆಗುವದಿಲ್ಲ.

(೧) ಸಕರ್ಮಕ ಕರ್ತರಿ > **ಕರ್ಮಣಿ ಪ್ರಯೋಗ**
(೨) ಅಕರ್ಮಕ ಕರ್ತರಿ > **ಅಕರ್ಮಕ ಭಾವೆ**
(೩) ಸಕರ್ಮಕ ಕರ್ತರಿ > **ಸಕರ್ಮಕ ಭಾವೆ**
(ಕರ್ಮ ಅಧ್ಯಾಹೃತ)

ಪ್ರಯೋಗ ಬದಲಿಸುವಾಗ ಮುಂದಿನ ಮಾತುಗಳನ್ನು ಲಕ್ಷದಲ್ಲಿಡಬೇಕು. [೧] ಮೂಲ ಪ್ರಯೋಗದಲ್ಲಿಯ ಕ್ರಿಯಾಪದದ ಕಾಲ ಮತ್ತು ಅರ್ಥವನ್ನೇ ಬದಲಿಸಿದ ಪ್ರಯೋಗದಲ್ಲಿಯೂ ಉಪಯೋಗಿಸಬೇಕು. [೨] ಕರ್ತೃ ಮತ್ತು ಕರ್ಮಗಳ ವಿಭಕ್ತಿಗಳೂ ಅವುಗಳಿಗೆ ಸಂಬಂಧಿಸಿದ ವಿಶೇಷಣಗಳ ವಿಭಕ್ತಿಗಳೂ ಮಾತ್ರ ಬದಲಾಗುವವು. ಇತರ ಶಬ್ದಗಳಲ್ಲಿ ಯಾವ ಬದಲಾವಣೆಗಳೂ ಆಗುವದಿಲ್ಲ. ಉದಾ :—

| **ಸಕರ್ಮಕ ಕರ್ತರಿ** | **ಕರ್ಮಣಿ ಪ್ರಯೋಗ** |
|---|---|
| (೧) **जणा धम्मं सुणन्ति ।** | **जणेहिं धम्मो सुणिज्जइ ।** |
| (೨) **सावओ मोक्खं लहिस्सइ ।** | **सावएण मोक्खो लहिज्जिस्सइ ।** |
| (೩) **मेहा जलं वरिसन्तु ।** | **मेहेहिं जलं वरिसिज्जउ ।** |
| **ಅಕರ್ಮಕ ಕರ್ತರಿ** | **ಅಕರ್ಮಕ ಭಾವೆ** |
| (೧) **कन्नाओ उज्जाणं गच्छन्इि ।** | **कन्नाहिं ऊज्जाणं गच्छिज्जइ ।** |
| (೨) **सो देउले अच्छइ ।** | **तेण देउले अच्छिज्जइ ।** |
| (೩) **देवया हसइ ।** | **देवयाए हसिज्जइ ।** |
| **ಸಕರ್ಮಕ ಕರ್ತರಿ** (ಕರ್ಮ ಅಧ್ಯಾಹೃತ) | **ಸಕರ್ಮಕ ಭಾವೆ** |
| (೧) **रामो भक्खइ ।** | **रामेण भक्खिज्जइ ।** |
| (೨) **सो एवं वयासी ।** | **तेण एवं वुच्चित्था ।** |

ಕರ್ಮಣಿ ಮತ್ತು ಸಕರ್ಮಕ ಭಾವೆ ಪ್ರಯೋಗಗಳಲ್ಲಿ ಭೂ. ಕ. ಕೃದಂತವನ್ನು ಉಪಯೋಗಿಸಿದ್ದರೆ ಪ್ರಯೋಗ ಬದಲಿಸುವಾಗ **ಭೂತ ಕರ್ತರಿ ಕೃದಂತ**ವನ್ನು ಉಪಯೋಗಿಸಬೇಕು. ಮತ್ತು ಅದನ್ನು ಕರ್ತೃವಿಗೆ ವಿಶೇಷಣವಾಗಿ ಮಾಡಬೇಕು. ವಿಧ್ಯರ್ಥ ಕರ್ಮಣಿ ಕೃದಂತವನ್ನು ಉಪಯೋಗಿಸಿದ್ದರೆ ವಿಧ್ಯರ್ಥ ಕರ್ತರಿ ಕೃದಂತಗಳಿಲ್ಲದ್ದರಿಂದ ವಿಧ್ಯರ್ಥ ಕ್ರಿಯಾಪದವನ್ನೇ ಉಪಯೋಗಿಸಬೇಕು. ಕರ್ತೃ ಮತ್ತು ಕರ್ಮಗಳು ಮೇಲೆ **ಹೇಳಿದಂತೆ** ಬದಲಾಗುವವು. ಉದಾ :—

सीहेण मओ हत्थी दिट्ठो । सीहो मयं हत्थिं दिट्ठवन्तो ।
रामेण रावणो हओ । रामो रावणं हयवन्तो ।
समणेहिं धम्मो कहियव्वो । समाणा धम्मं कहेज्जा ।
साहुणा संजमो पालियव्वो । साहू संजमं पालेज्जा ।

## ಶಬ್ದಸಂಗ್ರಹ

**अंगुलिअ** (ನ.) ಉಂಗುರ
**अच्चाहिय** (ವಿ.) ಅತ್ಯಾಧಿಕ, ಅತಿಶಯ
**अणप्प** (ವಿ.) ಅನಲ್ಪ, ಬಹಳ
**अणवज्ज** (ವಿ.) ದೋಷವಿಲ್ಲದ
**अणुरज्ज** (ಧಾ.) ಅನುರಕ್ತನಾಗು, ಪ್ರೀತಿಸು
**अण्णेस** (ಧಾ.) ಹುಡುಕು, ಶೋಧಿಸು
**अंतरिय** (ವಿ.) ಅಂತರಿಕ್ತ, ಒಳಗಿರುವ
**अदंसणीय** (ವಿ.) ಅದೃಶ್ಯ, ನೋಡಲು ಬರದ
**अन्नहा** (ಅ.) ಅನ್ಯಥಾ, ಬೇರೆ
**अरण्ण** (ನ.) ಅರಣ್ಯ
**असक्क** (ವಿ.) ಅಶಕ್ಯ
**अहवा** (ಅ.) ಅಥವಾ
**आणयण** (ನ.) ತರುವುದು
**आरूढ** (ಭೂ.ಕ.ಕೃ.ವಿ.) ಆರೂಢ, ಏರಿದ
**आससेण** (ಪು.) ಅಶ್ವಸೇನ, ಒಂದು ಹೆಸರು
**ईसा** (ಸ್ತ್ರೀ.) ಈರ್ಷೆ, ಹೊಟ್ಟೆಕಿಚ್ಚು
**उच्छुखंड** (ಪು.ನ.) ಕಬ್ಬಿನಗಳ, ತುಂಡು
**उदयण** (ಪು.) ಉದಯನ, ಒಂದು ಹೆಸರು
**उवज्झाय** (ಪು.) ಉಪಾಧ್ಯಾಯ, ಆಚಾರ್ಯ
**कट्ठ** (ನ.) ಕಟ್ಟಿಗೆ
**कट्ठमय** (ವಿ.) ಕಟ್ಟಿಗೆಯಿಂದ ಮಾಡಿದ
**कड, कय** (ಭೂ.ಕ.ಕೃ.ವಿ.) ಕೃತ, ಮಾಡಿದ, ಮಾಡಲ್ಪಟ್ಟ
**कडप्प** (ಪು.) ಸಮೂಹ, ಗುಂಪು
**कवड** (ನ.) ಕಪಟ, ಮೋಸ
**कहा** (ಸ್ತ್ರೀ.) ಕಥೆ, ಸಂಗತಿ
**काण** (ವಿ.) ಒಂದು ಕಣ್ಣಿನ
**किरण** (ಪು.ನ.) ಕಿರಣ
**कुरुजंगल** (ನ.) ಒಂದು ಹೆಸರು
**कुसल** (ವಿ.) ಕುಶಲ
**कोढिअ** (ವಿ.) ಕ್ರೋಧಿತ, ಸಿಟ್ಟಾದ
**खामे** (ಧಾ.) ಕ್ಷಮಿಸು
**खेयरी** (ಸ್ತ್ರೀ.) ಖೇಚರಿ, ವಿದ್ಯಾಧರ ಸ್ತ್ರೀ
**गंधव्व** (ಪು.) ಗಂಧರ್ವ, ದೇವಜಾತಿ ವಿಶೇಷ
**गंधव्वकला** (ಸ್ತ್ರೀ.) ಗಂಧರ್ವಕಲೆ, ಒಬ್ಬ ಸ್ತ್ರೀಯ ಹೆಸರು

**गारव** (ನ.) ಗೌರವ
**गुरुअ** (ವಿ.) ದೊಡ್ಡ
**चंडपज्जोय** (ಪು.) ಚಂಡಪ್ರದ್ಯೋತ, ಒಂದು ಹೆಸರು
**चत्त** (ಭೂ.ಕ.ಕೃ.ವಿ.) ಬಿಡಲ್ಪಟ್ಟ
**छुरिया** (ಸ್ತ್ರೀ.) ಚೂರಿ
**जंत** (ನ.) ಯಂತ್ರ
**जंतमय** (ವಿ.) ಯಂತ್ರದಿಂದಮಾಡಿದ
**जंपिय** (ಭೂ.ಕ.ಕೃ.ವಿ.) ಹೇಳಿದ
**जलासय**(ಪು.)ಜಲಾಶಯ,ಸರೋವರ
**जवणिया** (ಸ್ತ್ರೀ.) ಯವನಿಕಾ, ತೆರೆ, ಪರದೆ
**जूय** (ನ.) ದ್ಯೂತ, ಜೂಜು
**जूह** (ನ.) ಯೂಥ, ಸಮೂಹ
**ठावे** (ಧಾ.) ಇರಿಸು
**तणु** (ಸ್ತ್ರೀ.) ಶರೀರ
**तुण्हिक्क** (ವಿ.) ಶಾಂತ, ಸುಮ್ಮನಿರುವ
**दंस** (ಧಾ.) ತೋರಿಸು
**दिन्न** (ಭೂ.ಕ.ಕೃ.ವಿ.) ಕೊಡಲ್ಪಟ್ಟ
**दीस** (ಧಾ.) ಕಾಣಿಸು
**नल** (ಪು.)ನಲರಾಜ, ಒಂದು ಹೆಸರು
**निच्चल** (ವಿ.) ನಿಶ್ಚಲ
**निट्ठुर** (ವಿ.) ನಿಷ್ಠುರ
**निंब** (ಪು.) ಬೇವಿನ ಗಿಡ
**निबिड** (ವಿ.) ದಟ್ಟ
**निरय** (ಭೂ.ಕೃ.ವಿ.) ನಿರತ, ಆಸಕ್ತ
**निरुवम** (ವಿ.) ನಿರುಪಮ, ಉಪಮೆ ಇಲ್ಲದ
**पंक** (ಪು.) ಕೆಸರು
**पंकय** (ನ.) ಪಂಕಜ, ಕಮಲ
**पज्जाउल** (ವಿ.) ಪರ್ಯಾಕುಲ, ಚಿಂತೆಯುಳ್ಳ
**पज्जोय** (ಪು.) ಪ್ರದ್ಯೋತ, ಒಂದು ಹೆಸರು
**पंडव** (ಪು.)ಪಾಂಡವ
**पत्तियावे** (ಧಾ.) ನಂಬು
**परवस** (ವಿ.) ಪರವಶ, ಪರಾಧೀನ
**पराइय** (ಭೂ.ಕೃ.ವಿ.) ಸೋತ, ಪರಾಜಿತ
**परिमाण** (ನ.) ಅಳತೆ
**पलोय** (ಧಾ.) ನೋಡು
**पवत्त** (ಭೂ.ಕೃ ವಿ.) ಪ್ರವೃತ್ತ, ಉಂಟಾದ
**पहाय** (ಪು.ನ.) ಪ್ರಭಾತ, ಬೆಳಗಿನ ಸಮಯ
**पाणनाह** (ಪು.) ಪ್ರಾಣನಾಥ, ಪತಿ
**पावित्तिय** (ಭೂ.ಕ.ಕೃ.ವಿ.) ಪವಿತ್ರ ಗೊಳಿಸಲ್ಪಟ್ಟ
**पुण** (ಅ.) ಪುನಃ, ಮತ್ತೆ
**बद्ध** (ಭೂ.ಕ.ಕೃ.ವಿ.) ಬಂಧಿಸಲ್ಪಟ್ಟ
**भट्ठ** (ಭೂ.ಕ.ಕೃ.ವಿ.)ಭ್ರಷ್ಟ, ಕೆಟ್ಟು ಹೋದ
**भारकरी** (ವಿ.) ಭಾರವಾಗುವ
**भीय** (ವಿ.) ಅಂಜಿದ, ಭೀತ
**मच्छर** (ಪು.ನ.) ಮಾತ್ಸರ್ಯ, ಹೊಟ್ಟೆಕಿಚ್ಚು

**महिंदसीह** (ಪು.) ಮಹೇಂದ್ರಸಿಂಹ, ಒಂದು ಹೆಸರು
**महिला** (ಸ್ತ್ರೀ.) ಮಹಿಳೆ, ಸ್ತ್ರೀ
**याण** (ಧಾ.) ತಿಳಿ
**रमणत्थं** (ಅ.) ಕ್ರೀಡೆಗಾಗಿ
**रम्म** (ವಿ.) ರಮ್ಯ, ಸುಂದರ
**राग** (ಪು.) ರಾಗ, ಪ್ರೇಮ
**रूयावे** (ಧಾ.) ಅಳಿಸು
**लुद्ध** (ವಿ.) ಲುಬ್ಧ, ಆಶೆಯುಳ್ಳ
**वणदेवया** (ಸ್ತ್ರೀ.) ವನದೇವತೆ
**वत्थु** (ನ.) ವಸ್ತು, ಪದಾರ್ಥ
**वालुगा** / **वालुया** } (ಸ್ತ್ರೀ.) ಉಸುಕು
**वासवदत्ता** (ಸ್ತ್ರೀ.) ವಾಸವದತ್ತೆ, ಒಂದು ಹೆಸರು
**वाहियाली** (ಸ್ತ್ರೀ.) ಕುದುರೆ ಓಡಾಟದ ಬೈಲು
**विच्छुरिय** (ಭೂ.ಕ.ಕೃ.ವಿ.) ಖಚಿತ, ಕೆಚ್ಚಿದ
**वियप्प** (ಪು.) ವಿಕಲ್ಪ, ಸಂಶಯ
**विरज्ज** (ಧಾ.) ವಿರಕ್ತನಾಗು
**विरत्त** (ವಿ.) ವಿರಕ್ತ
**विवरीय** (ವಿ.) ವಿಪರೀತ, ವಿರುದ್ಧ
**विसेस** (ಧಾ.) ವಿಶೇಷಿಸು
**सक्करा** (ಸ್ತ್ರೀ.) ಸಕ್ಕರೆ
**सगासं** (ಅ) ಸಮೀಪ
**समसरिस** (ವಿ.) ಸಮಾನ, ಒಂದೇ ಬಗೆಯ
**समासन्न** (ವಿ.) ಸಮೀಪದ
**सरिच्छ** (ವಿ.) ಒಂದೇ ತರದ
**सहदेवी** (ಸ್ತ್ರೀ.) ಸಹದೇವಿ, ಒಂದು ಹೆಸರು
**सिक्खण** (ನ.) ಶಿಕ್ಷಣ, ಅಭ್ಯಾಸ
**सिक्खावे** (ಧಾ.) ಕಲಿಸು
**सिणेह** (ಪು.) ಸ್ನೇಹ
**सीहकुमार** (ಪು.) ಸಿಂಹಕುಮಾರ
– (ಸ್ತ್ರೀ.) ಶುದ್ಧಿ, ಶುದ್ಧತೆ
**सुरस** (ವಿ.) ಸುರಸ, ಚೆನ್ನಾಗಿರುವ
**सेणिग** / **सेणिय** } (ಪು.) ಸೈನಿಕ
**हरिणी** (ಸ್ತ್ರೀ.) ಹೆಣ್ಣು ಚಿಗರೆ
**हरिद्दा** (ಸ್ತ್ರೀ.) ಹರಿದ್ರಾ, ಅರಿಷಣ
**हिम** (ನ.) ಹಿಮ, ಬರ್ಫ
**हिमवय** (ಪು.) ಹಿಮಾಲಯ

## ಅಭ್ಯಾಸ

(೧) ಕೆಳಗಿನ ವಾಕ್ಯಗಳ ಪ್ರಯೋಗ ಬದಲಿಸಿರಿ :—

(१) **महावीरो निवेहिं वि वन्दिज्जइ** । (२) **कुमारेण भण्णइ** । (३) **कहमहं सियालेण मारियं हत्थिं भक्खामि** । (४) **देवयाए विसं दिन्नं** । (५) **सीहकुमारेण चिन्तियं** । (६) **कमलं पंकेण न उवलिप्पइ** । (७) **पुत्तो आयरियं पसिणे पुच्छइ** । (८) **जूए पराइया पण्डवा वणं गच्छिसु** । (९)

चन्दस्स किरणा अमयं मुंचति। (१०) समणेण य अणवज्जा कहा कहेयव्वा। (११) कज्जे मणो दिज्जउ। (१२) सियालेण मओ हत्थी दिट्ठो। (१३) मुसा भासा पण्डिएहिं न भासियव्वा। (१४) अरहन्ते वन्दिमो सिरसा। (१५) दारयं आणेहि ममं वा तत्थ नेहि। (१६) राया गामं गओ। (१७) कणय-मालाए सुरसाहियवुत्तन्तं रन्नो कहियं। (१८) ता खामियव्वं तुमए इमं। (१९) जीव, मा करेसु गारवं। (२०) राया तुण्हिक्को ठिओ।

(೨) ಕನ್ನಡಕ್ಕೆ ಪರಿವರ್ತಿಸಿರಿ:—

[१] अत्थि पज्जोयस्स धूया वासकदत्ता नाम। 'गंधव्वकलाकुसलो उदयणो मम कन्नं गंधव्वकलं सिक्खावेइ' त्ति चिंततेण पज्जोएण सुयं जहा- 'उदयणो जत्थ हत्थिं पेच्छइ तत्थ गायइ, जाव बद्धं पि अप्पाणं न जाणइ'। तयो रन्ना जंतमओ हत्थी कारिओ नीओ कोसंबी-समासन्ने रन्ने। ठाविया तस्स मज्झे सेणिगा। तं हत्थिं दट्ठूण उदयणो गाइउं पवत्तो। हत्थी गीय-परव्वसो व्व ठिओ निच्चलो। तत्थेव उदयणो हत्थिमज्झट्ठियपुरिसेहिं बद्धो पज्जोयसगासं आणिओ य। भणिओ रन्ना-'मम धूया काणा; तं सिक्खवेहि गीयकलं। तं च मा पेच्छसु। सा तुम दट्ठूण लज्जिस्सइ'। तीए वि कहियं-'उवज्झाओ कोढिओ। मा दच्छिहिसि' त्ति। सो जवणियंतरिओ तं सिक्खावेइ। अन्नया सा अन्नहा पढइ। तेण भणिया-'काणे! विणासेहि'। तीए भणियं-'कोढिया! अप्पाणं न याणसि' तेण जवणिया अवणीया। जाओ तेसिं निबिडो सिणेहो।

[२] तओ दमयंती नलं अपेच्छिऊण जूहब्भट्ठा हरिणि व्व दिसाओ पलोयंती चिंतिउं पवत्ता-'हा अच्चाहियं पडियं। जं अरण्णे असरणा पिएण विमुक्क म्हि। अहवा पहाए मह वयणसुद्धिसलिलाणयणत्थं कत्थ वि जलासए गओ भविस्सइ पिययमो। अहवा निरुवम-रूव- लुद्धाए कीए वि खेयरीए रमणत्थं नीओ भविस्सइ नलो। ते दुमा ते पव्वया तं च अरण्णं एक्को चेव चंदसुंदरमुहो न दीसइ नलो'। एवं अणप्पवियप्पपज्जाउलमणा कयदिसालोया नलं अपेच्छंती भीया सा भणइ-'भो वणदेवयाओ, पत्थेमि तुब्भे दंसेह मे पाणनाहं तस्स पयपंकएहिं पावित्तियं पहं वा'।

हा नाह ! किं तएऽहं चत्ता ? किं तुज्झ होमि भारकरी ।
न हि भोगिणो कया वि हु नियकंचुलिया कुणइ भारं ॥

[३] गंगाए वालुयं सायरे जलं हिमवओ य परिमाणं ।
जाणन्ति बुद्धिमन्ता महिलाहिययं न याणन्ति ॥ १ ॥
रोवन्ति रुयावन्ति अलियं जम्पन्ति पत्तियावन्ति ।
कवडेण य खन्ति विसं मरन्ति न य जन्ति सब्भावं ॥ २ ॥
महिला हु रत्तमेत्ता उच्छुक्खण्डं व सक्करा चेव ।
स च्चिय विरत्तमेत्ता निम्बक्कुरे विसेसेइ ॥ ३ ॥
अणुरज्जन्ति खणेणं जुवईउ खणेण पुण विरज्जन्ति ।
अन्नन्नरागनिरया हरिद्दरागो व्व चलपेमा ॥ ४ ॥
हिययम्मि निट्ठुराओ तणुजम्पियया पएहिं रम्माओ ।
जुवईउ सरिच्छाओ सुवण्णविच्छुरियच्छुरियाओ ॥ ५ ॥

(೩) ಅರ್ಧಮಾಗಧಿಯಲ್ಲಿ ಭಾಷಾಂತರಿಸಿರಿ :—

(೧) ಕುರುಜಂಗಲವೆಂಬ ಪ್ರದೇಶದಲ್ಲಿ ಹಸ್ತಿನಾಪುರವೆಂಬ ನಗರವಿತ್ತು. ಅಲ್ಲಿ ಕುರುವಂಶದ ರಾಜನಾದ ಅಶ್ವಸೇನನೆಂಬವನು ರಾಜ್ಯಭಾರ ಮಾಡುತ್ತಿದ್ದನು. ಒಮ್ಮೆ ಅವನ ಹೆಂಡತಿಯಾದ ಸಹದೇವಿಯು ಗರ್ಭವತಿಯಾದಳು. ಅವಳು ಹದಿನಾಲ್ಕು ಶ್ರೇಷ್ಠವಸ್ತುಗಳನ್ನು ಸ್ವಪ್ನದಲ್ಲಿ ನೋಡಿದಳು. ಆ ಮೇಲೆ ಅವಳಿಗೆ ಗಂಡುಮಗುವು ಹುಟ್ಟಿತು. ಸಣಂಕುಮಾರನೆಂದು ಮಗುವಿಗೆ ಹೆಸರು ಇಡಲ್ಪಟ್ಟಿತು. ಅವನು ಬಾಲ್ಯದಲ್ಲಿ ಮಹಿಂದ್ರಸಿಂಹನೆಂಬ ಬಾಲಕನ ಕೂಡ ಆಡುತ್ತಿದ್ದನು. ಮಹಿಂದ್ರಸಿಂಹನು ಮುಖ್ಯ ಮಂತ್ರಿಯ ಮಗನಾಗಿದ್ದನು. ಒಮ್ಮೆ ಸಣಂಕುಮಾರನು ತನ್ನ ಎಲ್ಲ ಮಿತ್ರರೊಡನೆ ಏರಾಟದ ಬೈಲಿನಲ್ಲಿ ಕುದುರೆ ಸವಾರಿಯನ್ನು ಮಾಡಲು ಹೋದನು. ಎಲ್ಲರೂ ಕುದರೆಗಳನ್ನೇರಿದರು. ಆಗ ಸಣಂಕುಮಾರನ ಕುದುರೆ ಅತ್ಯಂತ ವೇಗದಿಂದ ನಡೆಯಿತು. ಅದಕ್ಕೆ ಸರಿಯಾದ ಶಿಕ್ಷಣವಿಲ್ಲದ್ದರಿಂದ ಅದು ಬೆದರಿತು. ಮತ್ತು ಅತಿ ವೇಗದಿಂದ ಏರಾಟದ ಬೈಲನ್ನು ಬಿಟ್ಟು ಅರಣ್ಯದ ಕಡೆಗೆ ನಡೆಯಿತು. ಮತ್ತು ಒಂದು ಕ್ಷಣದಲ್ಲಿ ಕಣ್ಮರೆಯಾಯಿತು. ಮಹಿಂದ್ರಸಿಂಹನು ಅವನನ್ನು ಹುಡುಕುತ್ತ ಒಂದು ವರ್ಷ ತಿರುಗಿದನು. ಆದರೂ ಕುಮಾರನ ಶೋಧವಾಗಲಿಲ್ಲ. ಕೊನೆಗೆ ಒಂದು ದಿನ ಮಧ್ಯಾಹ್ನದಲ್ಲಿ ಒಂದು ತೋಟದಲ್ಲಿ ಒಂದು

ಕಾರಂಜಿಯ ಹತ್ತಿರ ಸುಂದರ ಸ್ತ್ರೀಯರ ಮಧ್ಯದಲ್ಲಿ ಕುಳಿತ ಸಣಂಕುಮಾರನನ್ನು ಕಂಡನು.

(೨) ಒಮ್ಮೆ ಒಬ್ಬ ಶ್ರೀಮಂತ ಮನುಷ್ಯನು ತನ್ನ ಬೆಲೆಯುಳ್ಳ ಉಂಗರವನ್ನು ಕಳೆದುಕೊಂಡನು. ಅವನಿಗೆ ತನ್ನ ಮೂರು ಸೇವಕರ ಮೇಲೆ ಸಂಶಯ ವುಂಟಾಯಿತು. ಅವನು ಕಳ್ಳನನ್ನು ಹಡುಕಲು ಒಂದು ಹಂಚಿಕೆಯನ್ನು ಮಾಡಿದನು. ಅವನು ಮೂವರನ್ನೂ ಕರೆದನು ಮತ್ತು ಅವರಿಗೆ ಸಮಾನ ಉದ್ದಳತೆಯ ಒಂದೊಂದು ಕಟ್ಟಿಗೆಯ ತುಂಡನ್ನು ಕೊಟ್ಟನು. ಮತ್ತು ಅಂದನು– "ಈಗ ಈ ಮೂರು ಕಟ್ಟಿಗೆಗಳು ಒಂದೇ ಅಳತೆಯವಿದ್ದರೂ ಕಳವು ಮಾಡಿದವನ ಕಟ್ಟಿಗೆಯು ನಾಳೆ ಈ ಹೊತ್ತಿಗೆ ಒಂದು ಅಂಗುಲ ಉದ್ದವಾಗುವದು. ನಾಳೆ ಇದೇ ಹೊತ್ತಿಗೆ ನೀವು ಇಲ್ಲಿಗೆ ಬರಬೇಕು. ಅಂದರೆ ನನಗೆ ನಿಜವಾದ ಕಳ್ಳನು ಯಾರೆಂಬದು ತಿಳಿಯುವದು." ಮೂವರೂ ಹೊರಟು ಹೋದರು. ಕಳ್ಳನು ಆಲೋಚಿಸಿದನು–"ನಾನು ಈಗ ನನ್ನ ಕಟ್ಟಿಗೆಯನ್ನು ಒಂದು ಅಂಗುಲ ಕತ್ತರಿಸಿದರೆ ನಾಳೆ ಅದು ಒಂದು ಅಂಗುಲ ಬೆಳೆಯುವದು ಮತ್ತು ಎಲ್ಲರೊಡನೆ ಸರಿಯಾಗುವದು. ಆಗ ನನ್ನ ಕಳ್ಳತನವು ಬೈಲಿಗೆ ಬರುವದೇ ಇಲ್ಲ." ಹೀಗೆ ಆಲೋಚಿಸಿ ಅವನು ತನ್ನ ಕಟ್ಟಿಗೆಯನ್ನು ಒಂದು ಅಂಗುಲ ಕತ್ತರಿಸಿದನು. ಮರುದಿನ ಕಳ್ಳನು ಸಿಕ್ಕುಬಿದ್ದನು.

(೩) ಉಜ್ಜಯನಿ ನಗರದ ಚಂಡಪ್ರದ್ಯೋತನು ತನ್ನ ಐಶ್ವರ್ಯದಿಂದ ಬಹಳ ಗರ್ವಿಷ್ಠನಾಗಿದ್ದನು. ಕೌಶಾಂಬಿಯ ಉದಯನ ರಾಜನ ವೈಭವದ ಕೀರ್ತಿಯನ್ನು ಕೇಳಿ ಅವನ ವಿಷಯವಾಗಿ ಅವನಿಗೆ ಮತ್ಸರವುಂಟಾಯಿತು. ಅವನ ವೈಭವವನ್ನು ಅಪಹರಣ ಮಾಡಬೇಕೆಂದು ಅವನು ವಿಚಾರ ಮಾಡಿದನು. ಎದುರಾಗಿ ಯುದ್ಧಮಾಡಿ ಉದಯನನನ್ನು ಗೆಲ್ಲುವದು ಅವನಿಗೆ ಅಶಕ್ಯವಾಗಿತ್ತು. ಆಗ ಅವನು ಉದಯನನ ದೋಷ(ಛಿದ್ರ)ಗಳನ್ನು ಹುಡುಕ ಹತ್ತಿದನು. ಉದಯನನಿಗೆ ಆನೆ ಕುದುರೆಗಳ ಮೇಲೆ ಬಹಳ ಅಭಿಲಾಷೆ ಇತ್ತು. ಈ ವಿಚಾರವನ್ನು ಕೇಳಿ ಅವನನ್ನು ಹಿಡಿಯಲು ಚಂಡಪ್ರದ್ಯೋತನು ಒಂದು ಕಟ್ಟಿಗೆಯ ಆನೆಯನ್ನು ಮಾಡಿ ಅವನ ಕಡೆಗೆ ಕಳಿಸಿದನು. ಅದನ್ನು ನೋಡಿ ಉದಯನನು ಬಹಳ ಆನಂದಬಟ್ಟನು. ಅವನು ಅದರಿಂದ ಮೋಹಿತನಾಗಿರುವಾಗ ಚಂಡಪ್ರದ್ಯೋತನ ಸೈನಿಕರು ಅವನನ್ನು ಹಿಡಿದರು.

# ಪಾಠ ೧೮

## ಸಮಾಸ–ವಿಚಾರ

ಭಾಷೆಯಲ್ಲಿ ಸೌಂದರ್ಯವನ್ನುಂಟುಮಾಡುವದಕ್ಕಾಗಿಯೂ, ಅವಕಾಶ ವನ್ನುಳಿಸುವದಕ್ಕಾಗಿಯೂ ಪರಸ್ಪರ ಅರ್ಥ ಸಂಬಧವುಳ್ಳ ಎರಡು ಅಥವಾ ಹೆಚ್ಚು **ಪದಗಳನ್ನು** ವಿಭಕ್ತಿ ಪ್ರತ್ಯಯಗಳನ್ನು ಲೋಪಮಾಡಿ ಕೂಡಿಸು ವರು. ಹೀಗೆ ಕೂಡಿಸುವದು **ಸಮಾಸವೆನಿ**ಸುವದು. ಹೀಗೆ ಕೂಡಿ ಆದ ಸಾಮಾಸಿಕ ಪದದ ಅರ್ಥವು ಅದರಲ್ಲಿ ಕೂಡಿದ ಪದಗಳ ಅರ್ಥದಿಂದ ಬೇರೆ ಯಾಗಿರುವದು. ಕೂಡಿದ ಪದಗಳ ಸಂಬಂಧವನ್ನು ತೋರಿಸುವಂತೆ ಸಾಮಾ ಸಿಕ ಪದವನ್ನು ಬಿಡಿಬಿಡಿಯಾಗಿ ಬರೆಯುವದು ಅದರ **ವಿಗ್ರಹ ಅಥವಾ** ಸಮಾಸವನ್ನು ಬಿಡಿಸುವದು ಎನಿಸುವದು. ವಿಗ್ರಹ ಮಾಡುವಾಗ ಅರ್ಥ ವಿವರಣೆಗಾಗಿ ಸಮಾಸದಲ್ಲಿಲ್ಲದ ಪದಗಳನ್ನು ತೆಗೆದುಕೊಳ್ಳುವದುಂಟು. ಅರ್ಧ ಮಾಗಧಿಯಲ್ಲಿ ಸಮಾಸದ ರೀತಿಯು ಸಂಸ್ಕೃತದಿಂದಲೇ ಬಂದಿದ್ದರೂ ಅದರ ಎಲ್ಲ ನಿಯಮಗಳನ್ನೂ ಪೂರ್ಣವಾಗಿ ಅನುಸರಿಸಿಲ್ಲವೆನ್ನಬಹುದು.

**द्वन्द्वो द्विगुरपि चाहं मद्गेहे नित्यमव्ययीभाव:।**
**तत्पुरुष कर्म धारय येनाहं स्यां बहुव्रीहि:॥**

ಮೇಲಿನ ಸಂಸ್ಕೃತಶ್ಲೋಕದಲ್ಲಿ ಮುಖ್ಯ ಸಮಾಸಗಳ ಹೆಸರುಗಳೆಲ್ಲ ಬಂದಿವೆ.

ಸಮಾಸದಲ್ಲಿಯ ಎಲ್ಲ ಪದಗಳೂ ಒಂದೇ ವಿಧವಾಗಿ ಮುಖ್ಯವಾಗಿರುವ ದಿಲ್ಲ. ಸಾಮಾನ್ಯವಾಗಿ ಒಂದು ಪದವು ಮುಖ್ಯವಾಗಿ ಎರಡನೆಯದು ಗೌಣ (ಅಮುಖ್ಯ) ವಾಗಿರುವದು. ಒಮ್ಮೊಮ್ಮೆ ಸಮಾಸದ ಎರಡೂ ಪದಗಳು ಗೌಣವಾಗಿದ್ದು ಮೂರನೆಯ ಒಂದು ಪದವನ್ನು ಸೂಚಿಸಬಹುದು, ಮತ್ತು ಆ ಮೂರನೆಯ ಪದವು ಮುಖ್ಯವಾಗಿರಬಹುದು. ಒಮ್ಮೊಮ್ಮೆ ಎಲ್ಲ ಪದಗಳೂ ಮುಖ್ಯವಾಗಿರಬಹುದು. ಈ ದೃಷ್ಟಿಯಿಂದ ಸಮಾಸಗಳಲ್ಲಿ ಮುಖ್ಯವಾಗಿ ನಾಲ್ಕು ಭೇದಗಳಾಗುತ್ತವೆ. ಅವು ಯಾವವೆಂದರೆ —

(೧) ಉಭಯ ಪದ ಪ್ರಧಾನ **(ದ್ವಂದ್ವ)**

(೨) ಪೂರ್ವಪದ ಗೌಣ ಮತ್ತು ಉತ್ತರಪದ ಮುಖ್ಯ – ಉತ್ತರಪದ ಪ್ರಧಾನ **(ತತ್ಪುರುಷ)**

(೩) ಎರಡೂ ಪದಗಳು ಗೌಣವಾಗಿದ್ದು ಬೇರೊಂದು ಪದದ ಅರ್ಥವು ಮುಖ್ಯವಾಗಿರುವದು- ಅನ್ಯಪದ ಪ್ರಧಾನ (**ಬಹುವ್ರೀಹಿ**)

(೪) ಪೂರ್ವಪದವು ಮುಖ್ಯ ಮತ್ತು ಉತ್ತರ ಪದವು ಗೌಣವಾಗಿ ಸಾಮಾಸಿಕ ಪದವು ಅವ್ಯಯವಾಗಿರುವದು. ಪೂರ್ವಪದ ಪ್ರಧಾನ (**ಅವ್ಯಯೀಭಾವ**) ಇವುಗಳನ್ನು ಬೇರೆಬೇರೆಯಾಗಿ ವಿಚಾರಮಾಡುವಾ.*

## (೧) ದ್ವಂದ್ವ (ಉಭಯಪದ ಪ್ರಧಾನ)

ಎರಡು ಅಥವಾ ಹೆಚ್ಚು ನಾಮಪದಗಳು 'ಮತ್ತು' ಎಂಬರ್ಥದಲ್ಲಿ ಕೂಡಲು ದ್ವಂದ್ವಸಮಾಸವಾಗುವದು. ಸಮಾಸವು ಬಹುವಚನದಲ್ಲಿದ್ದು ಅಂತ್ಯಪದದ ಲಿಂಗವೇ ಸಮಾಸದ ಲಿಂಗವಾಗುತ್ತಿದ್ದರೆ ಅದಕ್ಕೆ **ಇತರೇತರ ದ್ವಂದ್ವ**ವೆನ್ನುತ್ತಾರೆ. ಉದಾ :-

**बंभविण्हुमहेसा-बंभो य विण्हू य महेसो य** (ಪುಲ್ಲಿಂಗ)

**जीवाजीवा-जीवा य अजीवा य** (ಪುಲ್ಲಿಂಗ)

**नरनारीओ-नरा य नारीओ य** (ಸ್ತ್ರೀಲಿಂಗ)

**बीयहरियाइं-बीयाइं हरियाइं य** (ನಪುಂಸಕಲಿಂಗ)

ಇತರ ಉದಾಹರಣೆಗಳು— **गामागरनगरसरिगिरिनगरकाणणाइं, रूवलावण्णजोव्वणाणि, चच्चरचउहट्टहट्टसालासु, राईसरतलवरमाडम्बियकोडुम्बियसेट्ठिसत्थवाहणं** ಮುಂ.

ದ್ವಂದ್ವ ಸಮಾಸದಲ್ಲಿ ಪ್ರತಿಯೊಂದು ಪದವು ಮುಖ್ಯವಾಗದೆ ಇಡಿಯ ಸಮಾಸವು ಒಂದು ಸಮುದಾಯ ಅರ್ಥವನ್ನು ಕೊಡುತ್ತಿದ್ದರೆ ಅಂತಹ ಸಮಾಸಕ್ಕೆ **ಸಮಾಹಾರದ್ವಂದ್ವ**ವೆನ್ನುತ್ತಾರೆ. ಸಮಾಸವನ್ನು ಬಿಡಿಸುವಾಗ '**एयाणं समाहारो**' ಎಂದು ಹೇಳುವ ರೂಢಿ ಇದೆ. ಸಮಾಹಾರದ್ವಂದ್ವವು ಸಾಮಾನ್ಯವಾಗಿ ನಪುಂಸಕಲಿಂಗ ಏಕವಚನದಲ್ಲಿರುವದು. ಉದಾ :—

---

* ಕನ್ನಡದಲ್ಲಿ ಸಮಾಸದ ಹೆಸರುಗಳನ್ನು ಸಂಸ್ಕೃತದಿಂದಲೇ ಇದ್ದಂತೆ ತೆಗೆದುಕೊಳ್ಳಲಾಗಿದೆ. ಆದ್ದರಿಂದ ಮೇಲೆ ಅವುಗಳನ್ನು ಸಂಸ್ಕೃತದಲ್ಲಿರುವಂತೆಯೆ ಉಪಯೋಗಿಸಿದೆ. ಅರ್ಧಮಾಗಧಿಯಲ್ಲಿ ತದ್ಭವ ನಿಯಮಗಳಿಗನುಸರಿಸಿ ಅವುಗಳನ್ನು ಮಾರ್ಪಡಿಸಬಹುದು. ಹೇಗಂದರೆ—

द्वंद्व > **दंद**; द्विगु > **दिगु**; अव्ययीभाव > **अव्वईभाव**; तत्पुरुष > **तप्पुरिस**; बहुव्रीहि > **बहुव्वीहि** ಮುಂ.

**अन्नपाणं**- अन्नं च पाणं च, एयाणं समाहारो.

**मंससोणियं**- मंसं च, सोणियं च. एयाणं समाहारो.

**धूवपुप्फगंधवत्थं**- धूवं च पुप्फं च गंधं च वत्थं च, एयाणं समाहारो.

**मूसकमज्जारं**- मूसको य मज्जारो य, एयाणं समाहारो.

**ಇತರ ಉದಾಹರಣೆಗಳು :—** **अहिनउलं, सयणावत्थं, सुहदुक्खं, आहारनिद्दाभयं, असणपाणखाइम साइमं, आभरणमल्लालंकारं** ಮುಂ.*

ದ್ವಂದ್ವ ಸಮಾಸದಲ್ಲಿ ಎರಡು ಅಥವಾ ಹೆಚ್ಚು ವಿಶೇಷಣಗಳನ್ನು ಕೂಡಿಸ ಬಹುದು. ಉದಾ :—

**उच्चनीचं** – **उच्चं च नीयं च; कल्लाणपावगं** – **कल्लाणं वा पावगं वा** ಮುಂ.

ಕೆಲವು ದ್ವಂದ್ವ ಸಮಾಸಗಳನ್ನು ಬಿಡಿಸುವಾಗ '**वा**' ಎಂಬ ವಿಕಲ್ಪಾರ್ಥದ ಅವ್ಯಯವನ್ನು ಉಪಯೋಗಿಸುವದುಂಟು. ಉದಾ :—

**निंदा पसंसासु** – **निंदाए वा पसंसाए वा. जयाजए** – **जओ वा अजओ वा. लाभालाभे** – **लाभे वा अलाभे वा** ಮುಂ.

## [೨] ತತ್ಪುರುಷ (ಉತ್ತರಪದ ಪ್ರಧಾನ)

ಸಮಾಸದಲ್ಲಿಯು ಎರಡುಪದಗಳಲ್ಲಿ ಒಂದು ಮುಖ್ಯವಾಗಿದ್ದು ಮತ್ತೊಂದು ಅದನ್ನು ಅನುಸರಿಸಲು **ತತ್ಪುರುಷ** ಸಮಾಸವಾಗುವದು. ಎರಡೂ ಪದಗಳ ಸಂಬಂಧವು ಪೂರ್ವಪದದ ವಿಭಕ್ತಿಯಿಂದ ನಿಶ್ಚಿತವಾಗಿರಲು ಆಯಾ ವಿಭಕ್ತಿ ತತ್ಪುರುಷ ಸಮಾಸಗಳಾಗುವವು. ದ್ವಿತೀಯಾದಿಂದ ಸಪ್ತಮಿ ವರೆಗೆ ಈಪ್ರಕಾರ ತತ್ಪುರುಷ ಸಮಾಸಗಳಾಗುವವು. ಎರಡು ಪದಗಳನ್ನು ಪ್ರಥಮೆಯಲ್ಲಿ ಉಪ ಮಾನೋಪಮೇಯ ಅಥವಾ ವಿಶೇಷಣ ವಿಶೇಷ್ಯ ಭಾವದಿಂದ ಕೂಡಿಸಲು ಪ್ರಥಮಾ ತತ್ಪುರುಷ ಅಥವಾ **ಕರ್ಮಧಾರಯ** ಸಮಾಸವಾಗುವದು. ಸಂಬೋಧನ ವಿಭಕ್ತಿಯೊಡನೆ ಸಮಾಸವಿಲ್ಲ.

### (ಅ) ವಿಭಕ್ತಿ ತತ್ಪುರುಷ-

(೧) ದ್ವಿತೀಯಾ **आसगओ** – **आसं गओ. अन्तेउरगए** – **अन्तेउरं गए विरागसमावन्नो**—**विरागं समावन्नो**.

* ಸಮಾಹಾರದ್ವಂದ್ವ ಸಮಾಸದಲ್ಲಿ ಬಹುತರವಾಗಿ ಶರೀರದ ಅವಯುವಗಳು, ಕ್ರಿಮಿಕೀಟಕಗಳು, ಸ್ವಭಾವ ವಿರೋಧಿಯಾದ ಪ್ರಾಣಿಗಳು, ಸೈನ್ಯದ ಭಾಗಗಳು ಮುಂತಾದವು ಬರುತ್ತವೆ.

(೨) ತೃತೀಯಾ विणयसम्पन्नो–विणएण सम्पन्नो. साहुपूइयं–
साहुणा पूइयं. सुरवन्दिओ–सुरेहिं वन्दिओ.

(೩) ಚತುರ್ಥೀ भिक्खायरिया भिक्खट्ठा चरिया. ಮುಂ. *

(೪) ಪಂಚಮೀ चोरभयं–चोराओ भयं. मरणभयं–मरणाओ भयं.
संसारमुक्को–संसाराओ मुक्को.

(೫) ಷಷ್ಠೀ रायसन्दणं–रायस्स सन्दणं. नरिन्दो–नराणं इन्दो.
रुक्खमूले–रुक्खस्स मूले.

(೬) ಸಪ್ತಮೀ कामगिद्धे–कामेसु गिद्धे. वणवासो–वणे वासो.
पुरिसुत्तमो–पुरिसेसु उत्तमो.

ಇತರ ಉದಾಹರಣೆಗಳು– अत्थसंजुत्तं, नराहमो, जलविरहियं, विहारनिग्गओ, रायधम्मो, मच्चुमुहं, सिद्धिमग्गं, जिणभवणं, सोगाउरो, समागमुस्सुओ, धम्मभट्ठो, गिरीवसे, गंगाजलं, नाणदंसणसम्पन्नं, सन्देहाकुलिओ, जिणसासणं, आरामगओ, समणोवासगो, पायवडिओ, देवलोगो, पाणाहिवई, कम्मबन्धो, हारविभूसिओ, नाणरयणपडिपुण्णे, तव्वयणं. ‡

**(ಆ) ಉಪಪದ ತತ್ಪುರುಷ**

ಸಮಾಸದಲ್ಲಿಯ ಉತ್ತರ ಪದವು ಕೃದಂತ (ಕ್ರಿಯಾಪದದ ಅವಶಿಷ್ಟ ರೂಪ) ವಾಗಿರಲು ಅದು ಉಪಪದ ತತ್ಪುರುಷ ಸಮಾಸವಾಗುವದು. ಕ್ರಿಯಾಪದದ ಈ ಅವಶಿಷ್ಟ ರೂಪವನ್ನು ಸ್ವತಂತ್ರವಾಗಿ ವಾಕ್ಯದಲ್ಲಿ ಉಪಯೋಗಿಸಲು ಬರುವದಿಲ್ಲ. ಸಮಾಸವನ್ನು ಬಿಡಿಸುವಾಗ ಕ್ರಿಯಾಪದದ ರೂಪದ ಮುಂದೆ 'त्ति' ಎಂಬ ಅವ್ಯಯವನ್ನಿಡಬೇಕು. ಉದಾ–

कुम्भआरो–कुम्भं करेइ त्ति, सुवण्णआरो–सुवण्णं करेइ त्ति, सुहदो–सुहं देइ त्ति, उरगो–उरेण गच्छइ त्ति.

ಇತರ ಉದಾಹರಣೆಗಳು– तित्थयरो, निसायरो, सागरंगमा, पावकारी, बम्भयारी, जलधरो, चित्ताणुया, गणधरो, कयन्नु सव्वन्नु, ಮುಂ.

---

* ಅರ್ಧಮಾಗಧಿಯಲ್ಲಿ ಚತುರ್ಥಿ ವಿಭಕ್ತಿಯಿಲ್ಲದ್ದರಿಂದ ಚತುರ್ಥೀ ತತ್ಪುರುಷವು ಮಹತ್ವದ್ದಾಗಿಲ್ಲ. ಸಂಸ್ಕೃತ ಚತುರ್ಥೀ ತತ್ಪುರುಷದಂತೆ ಇರುವ ಕೆಲವು ಉದಾಹರಣೆಗಳು ಸಿಗುತ್ತವೆ.

‡ ಒಮ್ಮೊಮ್ಮೆ ತತ್ಪುರುಷ ಸಮಾಸದಲ್ಲಿಯ ಪೂರ್ವಪದವೂ ಮುಖ್ಯವಾಗಿರುವದುಂಟು. ಉದಾ :– अग्गहत्थो–हत्थस्स अग्गो; रायहंसो–हंसाणं राया; रायमग्गो–मग्गाणं राया ಮುಂ.

### (ಇ) ಅಲುಕ್ ತತ್ಪುರುಷ

ಸಮಾಸದಲ್ಲಿ ಸಾಮಾನ್ಯವಾಗಿ ಎರಡು ಪದಗಳಲ್ಲಿಯ ವಿಭಕ್ತಿ ಪ್ರತ್ಯಯವು ಲೋಪವಾಗಿರುವದು. ಆದರೆ ಕೆಲವು ತತ್ಪುರುಷ ಸಮಾಸಗಳಲ್ಲಿ ಪೂರ್ವ ಪದದ ವಿಭಕ್ತಿ ಪ್ರತ್ಯಯವು ಲೋಪವಾಗದೆ ಉಳಿಯುವದುಂಟು. ಅಂಥ ಸಮಾಸಗಳಿಗೆ ಅಲುಕ್ ತತ್ಪುರುಷ ಸಮಾಸವೆನ್ನುವರು. ಕೆಲವು ಸಮಾಸಗಳಲ್ಲಿ ಉತ್ತರ ಪದವು ಕೃದಂತವಾಗಿರುವದು. ಸಮಾಸದಲ್ಲಿಯ ಪದಗಳನ್ನು ವಿವರಿಸಿ ಬರೆಯುವದರಿಂದ ವಿಗ್ರಹವಾಗುವದು. ಉದಾ :—

**अन्तेवासी–अन्ते वसइ. खेयरो–खे चरइ. पंकेरुह, देवाणुप्पिया** ಮುಂ.

### (ಈ) ನಞ್ ತತ್ಪುರುಷ

ಪೂರ್ವಪದವು ನಿಷೇಧಾರ್ಥಕ ಅವ್ಯಯವಿರುವ ಸಮಾಸವು ನಞ್ ತತ್ಪುರುಷವೆಂದು ಹೇಳಲ್ಪಡುತ್ತದೆ. ಸಮಾಸದಲ್ಲಿಯ ಉತ್ತರ ಪದದ ಮೊದಲನೆಯ ಅಕ್ಷರವು ಸ್ವರವಿದ್ದರೆ **अण**, ಮತ್ತು ವ್ಯಂಜನವಿದ್ದರೆ **अ** ನಿಷೇಧಾರ್ಥದಲ್ಲಿ '**न**' ಕ್ಕೆ ಆದೇಶವಾಗಿ ಬರುತ್ತವೆ. ಉದಾ :—

**अणलसो** – न अलसो, **अणारंभो**–न आरंभो; **अकज्जं**–न कज्जं; **अपंडिओ**–न पंडिओ ಮುಂ.

ಇತರ ಉದಾಹರಣೆಗಳು – **अणागयं, अणवज्जं, अलोहो, अविणीए, असंसत्तं, अणिच्चो, अणसणं, अणायारो, अन्नाणं.**

### [೩] ಕರ್ಮಧಾರಯ

ತತ್ಪುರುಷ ಸಮಾಸದಲ್ಲಿಯ ಪೂರ್ವಪದ ಮತ್ತು ಉತ್ತರ ಪದ ಒಂದೇ ವಿಭಕ್ತಿಯಲ್ಲಿದ್ದರೆ (ಪ್ರಥಮೆಯಲ್ಲಿ) ಆ ಸಮಾಸವು ಕರ್ಮಧಾರಯವೆನಿಸುತ್ತದೆ.

ಈ ಸಮಾಸದಲ್ಲಿ ವಿಶೇಷಣ-ವಿಶೇಷ್ಯ, ಉಪಮೇಯ–ಉಪಮಾನ ಹೀಗೆ ಕೂಡಿರುವವು. ಎರಡೂ ಪದಗಳು ವಿಶೇಷಣಗಳಿದ್ದರೂ ಕರ್ಮಧಾರಯ ಸಮಾಸವಾಗಬಹುದು. ಈ ಸಮಾಸದಲ್ಲಿಯೂ ಉತ್ತರಪದವು ಮುಖ್ಯವಾಗಿರುವದು. ಉದಾ :—

### (ಅ) ವಿಶೇಷಣ–ವಿಶೇಷ್ಯ

**सीओदगं–सीयं उदगं, नीलुप्पलं–नीलं उप्पलं, पुव्वकम्माइं–पुव्वाइं कम्माइं** ಮುಂ.

¶ ಒಮ್ಮೊಮ್ಮೆ ಮೊದಲ ಪದವೇ ವಿಶೇಷ್ಯವಾಗಿದ್ದು ಮುಂದಿನ ಪದವು ವಿಶೇಷಣವಾಗಿರುವದು. ಉದಾ— **धम्मणुत्तरं-अणुत्तरं धम्मं.**

(ಅ) ಉಪಮೇಯೋಪಮಾನ

**चरणकमलं–चरणं कमलं इव, मुहचन्दो–मुहं चन्दो इव, भवसागरो-भवो एव सागरो** ಮುಂ.

¶ ಒಮ್ಮೊಮ್ಮೆ ಪೂರ್ವಪದವು ಉಪಮಾನವೂ ಉತ್ತರ ಪದವು ಉಪಮೇಯವೂ ಆಗಿರುವದುಂಟು. ಉದಾ—

**हिमधवलं–हिमं धवलं इव; घणनीलो–घणो इव नीलो.**

(ಇ) ಎರಡು ವಿಶೇಷಣಗಳು

**सीउण्हं-सीयं च उण्हं च, दुस्सीलपडणीए–दुस्सीले य पडणीए य.**

(ಈ) ಪೂರ್ವಪದ–ಅವ್ಯಯ

ಕೆಲವು ಕರ್ಮಧಾರಯ ಸಮಾಸಗಳ ಮೊದಲಪದವು ಅವ್ಯಯವಾಗಿರುವದು. ಉದಾ—

**अइदूरं–अइ दूरं, दुज्जणो–दुट्ठो जणो, सुगुरू–साहू गुरू** ಮುಂ.

(ಉ) ಎರಡು ಕೃದಂತಗಳು

ಒಂದಾದ ಮೇಲೆ ಮತ್ತೊಂದು ಜರುಗಿತೆಂದು ಹೇಳುವ ಅರ್ಥದಲ್ಲಿ ಎರಡು ಭೂತ ಕೃದಂತ ವಿಶೇಷಣಗಳನ್ನು ಕೂಡಿಸಿ ಸಮಾಸಮಾಡಬಹುದು. ಉದಾ—

**पीयपडिबद्धो–पुव्वं पीओ पच्छा पडिबद्धो. ण्हाणाणुलित्तो–पुव्वं ण्हाओ पच्छा अणुलित्तो.**

(ಊ) ಎರಡು ನಾಮಪದಗಳು

ಉದಾ— **दसरहराया–दसरहो राया; वडरुक्खो–वडो रुक्खो.**

**ದ್ವಿಗು ಸಮಾಸ–**

ಕರ್ಮಧಾರಯ ಸಮಾಸದ ಮೊದಲ ಪದವು ಸಂಖ್ಯಾವಾಚಕವಿದ್ದರೆ ದ್ವಿಗು ಸಮಾಸವಾಗುವದು. ದ್ವಿಗು ಸಮಾಸವು ನಪುಂಸಕಲಿಂಗ ಏಕವಚನ ವಿರುವದು. ಮತ್ತು ಅದರಿಂದ ಸಮುದಾಯದ ಅರ್ಥವಾಗುವದು. ಉದಾ—

**तिहुयणं–तिण्हं भुवणाणं समाहारो, चउद्दससुमिणं–चउद्दसण्हं सुमिणाणं समाहारो, दोमासो–दोण्हं मासाणं समाहारो** ಮುಂ.

## ಮಧ್ಯಪದ ಲೋಪೀ ಕರ್ಮಧಾರಯ

ಒಮ್ಮೊಮ್ಮೆ ಸಮಾಸದಲ್ಲಿಯ ಎರಡು ಪದಗಳ ಸಂಬಂಧವನ್ನು ತೋರಿಸುವ ಬೇರೊಂದು ಪದವನ್ನು ನಡುವೆ ಉಪಯೋಗಿಸಿ ವಿಗ್ರಹ ಮಾಡಬೇಕಾಗುವದು. ಮತ್ತು ಸಮಾಸ ಮಾಡುವಾಗ ಆ ಪದವನ್ನು ಬಿಟ್ಟು ಬಿಡುವರು. ಇಂತಹ ಸಮಾಸಗಳಿಗೆ ಮಧ್ಯಪದ ಲೋಪಿ ಸಮಾಸವೆನ್ನುವರು. ಈ ಸಮಾಸದಲ್ಲಿಯ ಪೂರ್ವಪದವು ಸಾಮಾಸಿಕಪದವಾಗಿ ಆ ಸಮಾಸದಲ್ಲಿಯ ಉತ್ತರ ಪದವು ಲೋಪವಾಗುವದು. ಲುಪ್ತಪದವು ಸಾಮಾನ್ಯವಾಗಿ ವಿಶೇಷಣವಾಗಿರುವದು. ಉದಾ :—

**चिन्तामणी–चिन्तापूरगो मणी. गन्धहत्थी–गन्धविसिट्ठो हत्थी. गन्धतेल्लं –गंधमिस्सियं तेल्लं** ಮುಂ.

ಕರ್ಮಧಾರಯ ಸಮಾಸದ ಇತರ ಉದಾಹರಣೆಗಳು—

**छिन्नद्दुमो, गामकण्टया, नवरत्त, परमदुत्तरं, छज्जीवणिकाया, संसारकन्तारो, ण्हवियपसाहिओ, तिलोगं, चण्डभाणू, आरत्तं, संसार–सागरो, दसदिणं, सुरभिवणं, महुरवाणी.**

## [೪] ಬಹುವ್ರೀಹಿ (ಅನ್ಯಪದ ಪ್ರಧಾನ)

ಸಮಾಸದಲ್ಲಿಯ ಎಲ್ಲ ಪದಗಳೂ ಅಸಂಖ್ಯವಾಗಿದ್ದು ಹೊಸದೊಂದು ಅರ್ಥದೊಡನೆ ಮೂರನೆಯ ಪದವನ್ನೇ ವಿಶೇಷಿಸುತ್ತಿದ್ದರೆ **ಬಹುವ್ರೀಹಿ** ಸಮಾಸವಾಗುವದು. ಈ ಸಮಾಸವನ್ನು ಬಿಡಿಸುವಾಗ ‘ज’ (ಯಾರು) ಎಂಬ ಸಂಬಂಧಾರ್ಥಕ ಸರ್ವನಾಮದ ಉಪಯೋಗವಾಗುವದು. ಮತ್ತು ಅದರ ವಿಭಕ್ತಿಯಂತೆ ಬಹುವ್ರೀಹಿ ಸಮಾಸದ ಹೆಸರನ್ನು ಕೊಡಲಾಗುವದು. ಆದರಿಂದ ವಿಭಕ್ತಿ ತತ್ಪುರುಷದಂತೆ ಇದರಲ್ಲಿಯೂ ಐದು ಪ್ರಕಾರಗಳಾಗುವವು.

## ವಿಭಕ್ತಿ ಬಹುವ್ರೀಹಿ

(೧) ದ್ವಿತೀಯಾ ಬಹುವ್ರೀಹಿ :— **पत्तगंगो–पत्ता गंगा जं सो, पत्तोदगो–पत्तं उदगं जं सो.**

(೨) ತೃತೀಯಾ ಬಹುವ್ರೀಹಿ :— **जिइन्दिओ–जियाणि इन्दियाणि जेण सो, जियसत्तू–जिओ सत्तू जेण सो, गहियगाण्डीओ–गहिओ गाण्डीओ जेण सो.**

(೩) ಪಂಚಮೀ :- **गयरागो-गओ रागो जाओ सो, गयभयं-गयं भयं जाओ सो.**

(೪) ಷಷ್ಠೀ :- **मरणन्तिया-मरणं अन्ते जीए सा,** § **मन्दपुण्णो-मन्दं पुण्णं जस्स सो, सुणन्दाभिहाणा-सुणन्दा अभिहाणा जीए सा, सुसीला-सोहणं सीलं जीसे सा.**

(೫) ಸಪ್ತಮೀ :- **बहुधणं-बहुं धणं जम्मि तं, अणेगजीवा-अणेगे जीवा जीए सा.**

ವಿಭಕ್ತಿ ಬಹುವ್ರೀಹಿಯ ಇತರ ಉದಾಹರಣೆಗಳು-

**पूइकण्णी, सुद्धसहावो, जियकोहे, समदिट्ठि, महायसो, पंचिन्दिए, पिहियासवा, सपुत्ते अणगारे, भग्गचित्तो, कयंजली, जिइंदिओ, उग्गतवो.**

ಕೆಲವು ಬಹುವ್ರೀಹಿ ಸಮಾಸಗಳಲ್ಲಿ ಉತ್ತರಪದವು ವಿಶೇಷಣವಾಗಿರುವದು. ಉದಾ— **दीवप्पणट्ठो-पणट्ठो दीवो जत्थ, आयरक्खिए-रक्खिओ आया जेण** ಮುಂ. ಒಮ್ಮೊಮ್ಮೆ **अट्ठ, आइ, पभिइ, विह** ಮೊದಲಾದವುಗಳು ಉತ್ತರಪದವಾಗುವವು. ಉದಾ — **जणकाइणो-जणको आई जेसिं ते,** ಒಮ್ಮೊಮ್ಮೆ ಮೊದಲಪದವು ಅವ್ಯಯವಾಗಿರುವದು. ಉದಾ- **आसुपन्नो** ಮುಂ. ಎರಡು ದಿಕ್ಕುಗಳನ್ನು ಹೇಳುವ ನಾಮಗಳು ಒಂದೆಡೆಗೆ ಸೇರಿ ಬಹುವ್ರೀಹಿ ಸಮಾಸವಾಗುವದು. ಉದಾ — **उत्तरपच्छिमा, उत्तरपुरत्थिमा** ಮುಂ. ಕೆಲವು ಸಮಾಸಗಳಲ್ಲಿ ಮೊದಲು '**स**' ಇದ್ದು ಅದರ ಅರ್ಥವು ಸಹ ಅಥವಾ ಸಮಾನ ಎಂದಾಗುವದು. ಉದಾ— **ससुओ-सुएहिं सहिओ, सपरिवारो-परिवारेण-सहिओ, सहोयरो-समाणं उयरं जस्स सो, सवण्णो-समाणो वण्णो जस्स सो.**

* **दिन्नाहारो, दत्तमाणो** ಮೊದಲಾದ ಚತುರ್ಥೀ ಬಹುವ್ರೀಹಿಯ ಉದಾಹರಣೆಗಳು ಸಿಗುವವು. ಆದರೆ ಅವು ವಿಶೇಷವಾಗಿಲ್ಲ.

§ ಸಂಸ್ಕೃತದಲ್ಲಿ ಸಮಾನಾಧಿಕರಣ ಮತ್ತು ವ್ಯಧಿಕರಣ ಬಹುವ್ರೀಹಿ ಎಂದೂ, ಪ್ರಾದಿ ಬಹುವ್ರೀಹಿ, ಸಂಖ್ಯಾ ಬಹುವ್ರೀಹಿ ದಿಗ್ಬಹುವ್ರೀಹಿ ಮೊದಲಾದ ಬಹುವ್ರೀಹಿಯ ಅನೇಕ ಪ್ರಕಾರಗಳನ್ನು ಹೇಳಲಾಗಿದೆ. ಆದರೆ ಅರ್ಧಮಾಗಧೀ ವ್ಯಾಕರಣದ ದೃಷ್ಟಿಯಿಂದ ಅವು ವಿಶೇಷ ಮಹತ್ವವಾಗಿಲ್ಲ.

## ನಞ್ ಬಹುವ್ರೀಹಿ

ಈ ಸಮಾಸದಲ್ಲಿ ಪೂರ್ವಪದವು ನಿಷೇಧಾರ್ಥಕ ಅವ್ಯಯವಿರುವದು. ಆದರೆ ನಞ್ ತತ್ಪುರುಷಕ್ಕೂ ಇದಕ್ಕೂ ಭೇದವೆಂದರೆ ಇದು ಮುಂದಿನ ಪದಕ್ಕೆ ವಿಶೇಷಣವಾಗುವದು. ಮತ್ತು ಬಿಡಿಸುವಾಗ 'ಜ' ವನ್ನು ಉಪಯೋಗಿಸಲಾಗುವದು. ಉದಾ—

**अनन्तो–अविज्जमाणो अन्तो जस्स सो.**

**अपुत्तो–न पुत्तो जस्स सो,** **अणुत्तरं–न उत्तरं जस्स तं.**

**अणगारो, अधणो, अणंगो** ಮುಂತಾದವನ್ನು ಹೀಗೆಯೇ ಬಿಡಿಸಬೇಕು.

## [೫] ಅವ್ಯಯೀಭಾವ ಸಮಾಸ–

ಮೊದಲಪದ ಅವ್ಯಯವಾಗಿಯೂ, ಉತ್ತರಪದವು ನಾಮಪದವಾಗಿಯೂ ಇರುವವು. ಇಡಿಯ ಸಮಾಸವು ಅವ್ಯಯವಾಗುವದು. ಅಂತ್ಯಸ್ವರವು ದೀರ್ಘವಿದ್ದರೆ ಹ್ರಸ್ವವಾಗುವದು. ಸಮಾಸದ ರೂಪವು ನಪುಂ. ಪ್ರ. ಏಕವಚನದಂತೆ ಕೊನೆಗೆ ಅನುಸ್ವಾರಯುಕ್ತವಾಗಿರುವದು. ಉದಾ—

**अणुरूवं–रूवं अणु;** **अणुदिणं–दिणे दिणे.**

**जावज्जीवं–जाव जीवो ताव;** **जहासुहं–सुहं अणइक्कम्म.**

ಇತರ ಉದಾಹರಣೆಗಳು :—

**अभिमुहं, आमरणं, पइदियहं, जहक्कमं, जहारिहं, अणवराहं, जहाभागं, अहासुयं, जहोवइट्ठं, अहाउयं** ಮುಂ.

## ಶಬ್ದಸಂಗ್ರಹ

**अउल** (ವಿ.) ಅತುಲ, ಅಸಮಾನ

**अग्गिहोत्त** (ನ.) ಅಗ್ನಿಹೋತ್ರ

**अज्जावि** (ಅ.) ಇಂದಿಗೂ

**अज्जउत्त** / **अज्जपुत्त** (ಪು.) ಆರ್ಯಪುತ್ರ, ಪತಿ

**अजियबला** (ಸ್ತ್ರೀ.) ಅಜಿತಬಲಾ ಒಂದು ಹೆಸರು

**अजियसेण** (ಪು.) ಅಜಿತಸೇನ, ಒಂದು ಹೆಸರು

**अणुरूव** (ವಿ.) ಅನುರೂಪ, ಯೋಗ್ಯ

**आणंदिणी** (ಸ್ತ್ರೀ.) ಆನಂದ ಕೊಡುವವಳು

**आरंभ** (ಪು.) ಆರಂಭ

**आवास** (ಪು.) ವಸತಿ, ನಿವಾಸಸ್ಥಳ

**इंधण** (ನ.) ಉರುವಲ

**उज्जु** / **उज्जुअ** (ವಿ.) ಸರಳ

**उउज्जुअ** (ವಿ.) ಉದ್ಯುಕ್ತ, ತೊಡಗಿದ
**उवभुंज** (ಧಾ.) ಉಪಭೋಗಿಸು
**ओसह** (ನ.) ಔಷಧ
**कयंजली** (ಪು.ಸ್ತ್ರೀ.) ಕೃತಾಂಜಲಿ, ಕೈಮುಗಿದ
**कल्लं** (ಅ.) ನಿನ್ನೆ, ನಾಳೆ
**कलाव** (ಪು.) ಕಲಾಪ, ಸಮೂಹ
**काउं** (ಹೇ.ಅ.) ಮಾಡಲು
**कारण** (ನ.) ಕಾರಣ, ಉದ್ದೇಶ
**कुंभआर** (ಪು.) ಕುಂಬಾರ
**केसव** (ಪು.) ಕೇಶವ
**खंभ** (ಪು.) ಕಂಬ
**खय** (ಪು.) ಕ್ಷಯ
**खर** (ಪು.) ಕತ್ತೆ
**गद्दभ** (ಪು.) ಕತ್ತೆ
**चक्खु** (ಪು.ನ.) ಕಣ್ಣು
**चिंताउर** (ವಿ.) ಚಿಂತಾತುರ
**जहाजोग्गं** (ಅ.) ಯಥಾಯೋಗ್ಯ
**जावज्जीवं** (ಅ) ಜೀವವಿರುವವರೆಗೆ
**ताण** (ನ.) ತ್ರಾಣ, ರಕ್ಷಣೆ
**तारुण्ण** (ನ.) ತಾರುಣ್ಯ, ಯೌವನ
**थोव** (ವಿ.) ಸ್ವಲ್ಪ
**दट्ठूण** (ಭೂ.ಕೃ.ಅ.) ನೋಡಿ
**दम** (ಧಾ.)ನಿಯಂತ್ರಿಸು, ನಿಗ್ರಹಿಸು
**दुकय** (ನ.) ದುಷ್ಕೃತ್ಯ, ಪಾಪ
**दुक्खी** (ವಿ.)ದುಃಖಿ,ಸಂಕಟದಲ್ಲಿರುವ
**दुम्मुह** (ವಿ.) ದುರ್ಮುಖ
**दुवार** (ನ.) ದ್ವಾರ, ಬಾಗಿಲು
**दुह** (ಧಾ.) ಹಿಂಡಿಕೊಳ್ಳು
**निब्भन्त** (ವಿ.) ಭ್ರಾಂತಿ ಇಲ್ಲದ
**पक्ख**(ಪು.)ಪಕ್ಷ, ತಿಂಗಳ ಅರ್ಧಭಾಗ
**पडिवेस** (ಪು.) ನೆರೆಯುವ
**परिवारिय**(ಭೂ.ಕ.ಕೃ.ವಿ.)ಪರಿವಾರಿತ ಸುತ್ತುವರಿಯಲ್ಪಟ್ಟ
**परिसा** (ಸ್ತ್ರೀ.) ಪರಿಷತ್, ಸಭೆ
**पहीण** (ವಿ.) ಕಳೆದ, ಬಿಡಲ್ಪಟ್ಟ
**पाइक्क** (ಪು.) ಕಾಲಾಳು
**पायप्पहार** (ಪು.) ಒದೆತ
**पुव्व** (ವಿ.) ಪೂರ್ವ, ಮೊದಲಿನ
**पुहवी** (ಸ್ತ್ರೀ.) ಪೃಥ್ವೀ
**भिन्नया** (ಸ್ತ್ರೀ.) ಭಿನ್ನತೆ, ಭೇದ
**मग्ग** (ಧಾ.) ಹುಡುಕು
**मंडण** (ನ.) ಭೂಷಣ, ಅಲಂಕಾರ
**मंडप** (ಪು.) ಮಂಟಪ
**मंडित** (ಭೂ.ಕ.ಕೃ.ವಿ.) ಮಂಡಿತ, ಶೋಭಿತ
**मणोरह** (ಪು.) ಮನೋರಥ
**मयण** (ಪು.) ಮದನ
**महाणुभाग** (ಪು.) ಮಹಾನುಭಾಗ, ಶ್ರೇಷ್ಠ
**रासह** (ಪು.) ಕತ್ತೆ
**रोग** / **रोय** } (ಪು.) ರೋಗ, ಬೇನೆ
**लत्ता** (ಸ್ತ್ರೀ.) ಒದೆತ, ಹೊಡೆತ
**लहुअ** (ವಿ.) ಚಿಕ್ಕ
**लेहा** (ಸ್ತ್ರೀ.) ರೇಖಾ, ಗೆರೆ

**वसुभूइ** (ಪು.) ಒಂದು ಹೆಸರು
**विओग** (ಪು.) ವಿಯೋಗ, ಅಗಲಿಕೆ
**वित्त** (ನ.) ದುಡ್ಡು, ಹಣ
**विवज्जिय** (ಭೂ.ಕ.ಕೃ.ವಿ.) ವಿವರ್ಜಿತ, ಬಿಡಲ್ಪಟ್ಟ
**संजुत्त** / **संजुय** (ಭೂ.ಕ.ಕೃ.ವಿ.) ಸಂಯುಕ್ತ, ಕೂಡಿದ
**सत्त** (ಪು.) ಸತ್ವ, ಜೀವ, ಗರ್ಭ
**समज्जिय** (ಭೂ.ಕ.ಕೃ.ವಿ.) ಗಳಿಸಿದ
**सम्मत्त** (ನ.) ಸಮ್ಯಕ್ತ್ವ
**समाण** (ವಿ.) ಸಮಾನ
**समुद्ददत्त** (ಪು.) ಸಮುದ್ರದತ್ತ, ಒಂದು ಹೆಸರು
**सहाय** (ಪು.) ಗೆಳೆಯ, ಮಿತ್ರ
**सहोयर** (ಪು.) ಅಣ್ಣ, ತಮ್ಮ, ಬಂಧು
**सागरदत्त** (ಪು.) ಸಾಗರದತ್ತ, ಒಂದು ಹೆಸರು
**सिक्खिय** (ಭೂ.ಕ.ಕೃ.ವಿ.) ಶಿಕ್ಷಿತ, ಕಲಿತ
**सुकय** (ನ.) ಪುಣ್ಯ, ಸುಕೃತ
**सुवण्णआर** (ಪು.) ಸುವರ್ಣಕಾರ, ಪತ್ತಾರ.

## ಅಭ್ಯಾಸ-

ಕೆಳಗಿನ ಸಮಾಸಗಳನ್ನು ಗುರುತಿಸಿರಿ ಮತ್ತು ಬಿಡಿಸಿರಿ:—

दुट्ठभावं, सहोयरो, जहाजोग्गं, थोवसहाओ, कज्जाकज्जं, गुणदोसं, अणुजत्तं, पहीणपुत्तो, सम्मत्तसंजुया, इन्दियगेज्झ, संगकरा, विरत्तकामो, महाणुभागो, देवाणुप्पिया, दुम्मुहो, कयंजली, सपरिसो, जन्नट्ठी, मग्गगामी, सम्मत्तमूलं, छुहातण्हाविवज्जिओ, रामकेसवा, गन्धहत्थी, पुव्वकयपरिपालणं, अग्गिहोत्तमुहा, अभयदाया, जावज्जीवं, तित्थयरो, मुहकमलं, पंचाणणो.

## ಭಾಷಾಂತರ

(೧) ಕನ್ನಡಕ್ಕೆ ಪರಿವರ್ತಿಸಿರಿ :—

[१] इओ य विदब्भ-देस-मण्डणं कुण्डिणं नयरं। तत्थ अरि-मिग-सिंहो भीमरहो राया। तस्स सयलंतेउर-तरु-पुप्फं पुप्फदंती देवी। ताणं विसयसुहमणुहवन्ताणं समुप्पन्ना सयलतेलोक्कालंकारभूया धूया। 'जणणी-गब्भ-गयाए इमीए, मए सव्वे वेरिणो दमिय' त्ति पिउणा कयं तीए नामं 'दमयंति' त्ति। सुद्ध-पक्ख-चन्द-लेहा इव सव्व-जण-नयणाणंदिणी पत्ता सा जोव्वणं। तं दट्ठूण चिन्तियं जणणीजणएहिं 'नत्थि इमीए समाणरूवो वरो। जइ वि अत्थि तह वि न जाणामो। अओ सयंवरं काउं जुत्तं'।

तओ पेसिऊण दूए सद्दाविया रायाणो रायपुत्ता य। आगया गय-तुरग-रह-पाइक्क-परिवारिया ते। नलो वि निरुवम-सत्तो पत्तो तत्थ। भीमनरवइणा कयसम्माणा ठिया ते पवरावासेसु। काराविओ कणयमय-खंभ-मण्डिओ सयंवरमंडवो।

[२] अन्नया भज्जाए भणिओ-' अज्जउत्त, इत्थेव नयरुज्जाणे अजिय-जिणिंद-मंदिर-दुवार देसे अजियबाला नाम देवया। अपुत्ताणं पुत्तं, अवित्ताणं वित्तं, अरज्जाणं रज्जं, अविज्जाणं विज्जं, असुक्खाणं सुक्खं, अचक्खूणं चक्खुं, सरोयाणं रोगक्खयं एसा देइ '। सेट्ठिणा तीए पुत्तो मग्गिओ। कालेण तस्स पुत्तो जाओ। तस्स 'अजियसेणो ' त्ति नामं कयं। जिणधम्मुज्जुओ सेट्ठी जाओ। अजियसेणो जणयमणोरहेहिं सह वड्ढिओ। सिक्खियकलाकलाओ लावण्णलच्छिपुण्णं तारुण्णं पत्तो। तस्स य सयलजणाहिए रूवाइगुणे पेच्छिऊण सेट्ठिणा चिंतियं। ' जइ एस मह नंदणो निवगुणाणुरूवं भारियं न लहइ, ता इमस्स गुणा विहला होहिन्ति '।

[३] जम्मं दुक्खं जरा दुक्खं रोगाणि मरणाणि य।
अहो दुक्खो हु संसारो जत्थ सव्वे वि दुक्खिणो ॥ १ ॥
पुव्वकयं सुकयं चिय जीवाणं सुक्खकारणं होइ।
दुकयं च कयं दुक्खाणं कारणं होई निब्भन्तं ॥ २ ॥
नो देइ कोइ कस्स वि सुहं दुक्खं च निच्छओ एसो।
निअयं चेव समज्जियं उवभुज्जइ जन्तुणा कम्मं ॥ ३ ॥
जस्सत्थो तस्स सुह, जस्सत्थो पण्डिओ य सो लोए।
जस्सत्थो सो गुरुओ, अत्थविहीणो य लहुओ य ॥ ४ ॥
धम्मो मंगलं अउलो, ओसहं अउलं च सव्वदुक्खाणं।
धम्मो बलं अवि विउलं, धम्मो ताणं च सरणं च ॥ ५ ॥

( ೨ ) ಅರ್ಧಮಾಗಧಿಯಲ್ಲಿ ಭಾಷಾಂತರಿಸಿ:—

(i) ಗೋಪಾಳನೆಂಬ ಒಬ್ಬ ಒಕ್ಕಲಿಗನಿದ್ದನು. ಅವನು ತನ್ನ ಆಕಳನ್ನು ಹಿಂಡಿಕೊಳ್ಳುತ್ತಿರುವಾಗ ತಪ್ಪದೆ ನೆರೆಮನೆಯಲ್ಲಿಯ ಕತ್ತೆಯು ದೊಡ್ಡದನಿಯಿಂದ ಒದರುತ್ತಿತ್ತು. ಅದರಿಂದ ಆಕಳು ಬೆದರುತ್ತಿತ್ತು ಮತ್ತು ಒದೆಯುತ್ತಿತ್ತು. ಆದರಿಂದ ಅವನಿಗೆ ಹಾಲು ಸಿಗುತ್ತಿರಲಿಲ್ಲ. ' ನೆರೆಮನೆಯವನ ಕತ್ತೆಯು ಸಾಯಲಿ ' ಎಂದು ಗೋಪಾಳನು ದಿನಾಲು ದೇವರಿಗೆ

ಬೇಡಿಕೊಳ್ಳುತ್ತಿದ್ದನು. ಆದರೆ ಕೆಲವು ದಿನಗಳಲ್ಲಿ ಗೋಪಾಳನ ಆಕಳು ಸತ್ತಿತು. ಆದರಿಂದ ಅವನಿಗೆ ಬಹಳ ಸಿಟ್ಟು ಬಂದಿತು; ಮತ್ತು ಅವನು ಸಿಟ್ಟಿ ನಿಂದ ದೇವರಿಗೆ ಅಂದನು-"ದೇವನೆ, ನೀನು ನಿಷ್ಠುರನಾಗಿರುವಿ. ನೀನು ಜಗತ್ತು ಹುಟ್ಟಿದಂದಿನಿಂದಲೂ ಭೂಮಿಯಮೇಲೆ ಅಧಿಕಾರಮಾಡುತ್ತಿರುವಿ. ಆದರೆ ನಿನಗೆ ಆಕಳು ಮತ್ತು ಕತ್ತೆ ಇವುಗಳ ಅಂತರವೇ ಇನ್ನೂ ತಿಳಿದಿಲ್ಲ.

(೨) ರಾಜಗೃಹನಗರದಲ್ಲಿ ಜಿತಶತ್ರುವೆಂಬ ರಾಜನು ರಾಜ್ಯವಾಳು ತ್ತಿದ್ದನು. ಅವನಿಗೆ ಧಾರಿಣಿ ಎಂಬ ರಾಣಿಯು ಇದ್ದಳು. ಅವರಿಗೆ ಮದನನೆಂಬ ಮಗನಿದ್ದನು. ಅವನು ಬಹಳ ಸುಖಲೋಲುಪನಾಗಿದ್ದನು. ಒಮ್ಮೆ ಅವನು ಬೀದಿಯಲ್ಲಿ ಒಬ್ಬ ಸುಂದರ ತರುಣಿಯನ್ನು ನೋಡಿದನು. ಪ್ರಥಮ ದರ್ಶನ ದಲ್ಲಿಯೆ ಅವನಿಗೆ ಅವಳ ಮೇಲೆ ಪ್ರೇಮವುಂಟಾಯಿತು. ಅವನು ಅರಮನೆಗೆ ತಿರುಗಿ ಬಂದನು. ಮತ್ತು ಈ ಸಂಗತಿಯನ್ನು ತಾಯಿತಂದೆಗೆ ಹೇಗೆ ಹೇಳ ಬೇಕೆಂದು ವಿಚಾರಮಾಡುತ್ತಿದ್ದನು. ಅವನಿಗೆ ಒಂದು ಯುಕ್ತಿಯು ಹೊಳೆ ಯಿತು. ಅವನು ಕೂಡಲೆ ತಾಯಿಯಬಳಿಗೆ ಹೋಗಿ ಅಂದನು-"ತಾಯಿಯೆ, ನಾನು ಇಂದು ಬೀದಿಯಲ್ಲಿ ಒಬ್ಬ ಸುಂದರ ಕನ್ನಿಕೆಯನ್ನು ನೋಡಿದೆನು. ಅವಳೊಡನೆ ನನ್ನ ಲಗ್ನವಾಗದಿದ್ದರೆ ನಾನು ಅಗ್ನಿಪ್ರವೇಶ ಮಾಡುವೆನು." ಸ್ವಲ್ಪ ದಿನಗಳಲ್ಲಿ ಆ ಕನ್ಯೆಯೊಡನೆ ರಾಜಪುತ್ರನ ಮದುವೆಯಾಯಿತು.

(೩) ಉಜ್ಜಯನಿ ನಗರದಲ್ಲಿ ಸಾಗರಚಂದನೆಂಬ ಒಬ್ಬ ಪತ್ತಾರ ನಿದ್ದನು. ಅವನಿಗೆ ಸಮುದ್ರದತ್ತನೆಂಬ ಸಹೋದರನಿದ್ದನು. ಒಮ್ಮೆ ಸಮುದ್ರ ದತ್ತನು ವಸಂತಕಾಲದಲ್ಲಿ ತನ್ನ ಗೆಳೆಯನೊಡನೆ ಉದ್ಯಾನದಲ್ಲಿ ಹೋದನು. ಅಲ್ಲಿ ಅವನು ಒಂದು ಗಿಡದ ಕೆಳಗೆ ಚಿಂತೆಯಿಂದ ಕುಳಿತ ಒಬ್ಬ ಮನುಷ್ಯನನ್ನು ನೋಡಿದನು. ಅವನ ಹತ್ತಿರ ಹೋಗಿ ಸಮುದ್ರದತ್ತನು ಅವನಿಗೆ ಅಂದನು- 'ಶ್ರೇಷ್ಠ ಮನುಷ್ಯನೆ, ನೀನು ಯಾರು ? ಮತ್ತು ವಿಚಾರಮಗ್ನನಾಗಿ ಹೀಗೆ ಇಲ್ಲಿ ಏಕೆ ಕುಳಿತಿರುವಿ" ? 'ಸಮುದ್ರದತ್ತನ ಮಾತನ್ನು ಕೇಳಿ ಅವನು ಅಂದನು-"ನನ್ನ ಹೆಸರು ವಸುಭೂತಿ ಎಂದು; ನಾನು ಕುಂಬಾರನು. ನಿನ್ನೆ ನನ್ನ ಮಗನು ಉರವಲನ್ನು ತರಲು ಅಡವಿಗೆ ಹೋಗಿರಲು ಹುಲಿಯು ಅವ ನನ್ನು ಕೊಂದಿತು. ಪುತ್ರವಿಯೋಗದಿಂದ ಮುಂದೇನು ಮಾಡಬೇಕೆಂಬುದು ನನಗೆ ತಿಳಿಯದಾಗಿದೆ. ಅದ್ದರಿಂದ ನಾನು ಇಲ್ಲಿ ಹುಚ್ಚನಂತೆ ಕುಳಿತಿದ್ದೇನೆ.


ಸಮಾಸಗಳು
ಉಭಯಪದ ಪ್ರಧಾನ
ದ್ವಂದ್ವ
ಇತರೇತರ
ಸಮಾಹಾರ
ಗೌಣ ಪ್ರಧಾನ (ಉತ್ತರಪದ ಪ್ರಧಾನ)
ತತ್ಪುರುಷ
ವಿಭಕ್ತಿ
ದ್ವಿತೀಯಾ
ತೃತೀಯಾ
ಪಂಚಮೀ
ಷಷ್ಠೀ
ಸಪ್ತಮೀ
ನಞ್ ತತ್ಪುರಷ
ಅಲುಕ್ ತತ್ಪುರುಷ
ಉಪಪದ ತತ್ಪುರುಹ
ಕರ್ಮಧಾರಯ
ಮಧ್ಯಪದ ಲೋಪೀ
ದ್ವಿಗು
ಅನ್ಯಪದಪ್ರಧಾನ
ಬಹುವ್ರೀಹಿ (ಪೂರ್ವಪದ ಪ್ರಧಾನ)
ವಿಭಕ್ತಿ ಬಹುವ್ರೀಹಿ
ದ್ವಿತೀಯಾ
ತೃತೀಯಾ
ಪಂಚಮೀ
ಷಷ್ಠೀ
ಸಪ್ತಮೀ
ನಞ್ ಬಹುವ್ರೀಹಿ
ಅವ್ಯಯೀಭಾವ

# ೪

# ವಾಕ್ಯವಿಚಾರ

## ಪ್ರಾಸ್ತಾವಿಕ

ಅಕ್ಷರ ಮತ್ತು ಶಬ್ದಗಳ ವಿಚಾರ ಮಾಡಿದಮೇಲೆ ಶಬ್ದಗಳಿಂದ ವಾಕ್ಯಗಳು ಹೇಗೆ ತಯಾರಾಗುತ್ತವೆಯೆಂಬುದನ್ನು ತಿಳಿದುಕೊಳ್ಳುವಾ. ಒಂದು ವಾಕ್ಯದಲ್ಲಿ ಒಂದು ವಿಚಾರವು ಪೂರ್ಣವಾಗಿರುತ್ತದೆ. ಈ ವರೆಗಿನ ಪಾಠಗಳಲ್ಲಿ ನೀವು ಅನೇಕ ಬಗೆಯ ವಾಕ್ಯಗಳನ್ನು ನೋಡಿದ್ದೀರಿ. ಅವುಗಳಲ್ಲಿ ಕರ್ತೃ, ಕರ್ಮ, ಕ್ರಿಯಾಪದ, ಕ್ರಿಯಾವಿಶೇಷಣ, ವಿಶೇಷಣ ಮೊದಲಾದವುಗಳು ಯಾವ ರೀತಿಯಿಂದ ಉಪಯೋಗವಾಗುತ್ತವೆಯೆಂದು ತಿಳಿದುಕೊಂಡಿರಬಹುದು. ಅರ್ಧಮಾಗಧಿಯು ಪ್ರಚಲಿತ ಭಾಷೆಯಲ್ಲವಾದ್ದರಿಂದ ಇಂಗ್ಲೀಷು ಕನ್ನಡಗಳಂತೆ ವಾಕ್ಯವಿಭಜನೆಯನ್ನು ಮಾಡುವ ಪರಿಪಾಠವಿಲ್ಲ. ಆದ್ದರಿಂದ ಸರಲ, ಸಂಯುಕ್ತ, ಮತ್ತು ಮಿಶ್ರವೆಂದು ವಾಕ್ಯಗಳನ್ನು ವಿಭಾಗಿಸುವ ವಿಚಾರವನ್ನು ಮಾಡಲಾಗಿಲ್ಲ. ಆದರೆ ಅರ್ಧಮಾಗಧೀ ವಾಕ್ಯರಚನೆಯ ವಿಶೇಷಗಳನ್ನು ಮಾತ್ರ ಕೆಳಗೆ ಕೊಡಲಾಗಿದೆ.

## ವಾಕ್ಯರಚನೆ–

ಸಾಮಾನ್ಯವಾಗಿ ಕರ್ತೃವು ವಾಕ್ಯಾರಂಭದಲ್ಲಿಯೂ, ಕ್ರಿಯಾಪದವು ಅಂತ್ಯದಲ್ಲಿಯೂ ಬರಬಹುದಾರೂ ಪದಗಳ ಕ್ರಮವು ವಾಕ್ಯದಲ್ಲಿ ಹೀಗೆಯೆ ಇರಬೇಕೆಂದು ಅರ್ಧಮಾಗಧಿಯಲ್ಲಿ ನಿರ್ಬಂಧವಿಲ್ಲ. ಸಕರ್ಮಕ ವಾಕ್ಯದಲ್ಲಿ ಕರ್ಮವು ಕ್ರಿಯಾಪದದ ಹಿಂದೆಯೂ, ವಿಶೇಷಣಗಳು ವಿಶೇಷ್ಯ ಪದಗಳ ಹಿಂದೆಯೂ ಬರುವವು. ಸಂಬೋಧನವೂ, ಸರ್ವನಾಮಗಳೂ, ಸ್ಥಲ ಮತ್ತು ಕಾಲ ದರ್ಶಕ ಸಪ್ತಮೀ ವಿಭಕ್ತ್ಯಂತ ಪದಗಳೂ ಅಥವಾ ಕ್ರಿಯಾವಿಶೇಷಣಾವ್ಯಯಗಳೂ ಸಾಮಾನ್ಯವಾಗಿ ವಾಕ್ಯಾರಂಭದಲ್ಲಿ ಬರುವವು. ಕ್ರಿಯಾಪದದ ಸ್ಥಾನದಲ್ಲಿ ಬರುವ ಧಾತುಸಾಧಿತಗಳು ವಾಕ್ಯಾಂತ್ಯದಲ್ಲಿ ಬರುವವು. ಕ್ರಿಯಾವಿಶೇಷಣಗಳು ಕ್ರಿಯಾಪದದ ಮೊದಲು ಬರುವವು. ಸಂಬಂಧಾರ್ಥಕ ಸರ್ವ

ನಾಮಗಳಿಂದ ಕೂಡಿದ ಗೌಣವಾಕ್ಯಗಳು ಪ್ರಧಾನವಾಕ್ಯದ ಮೊದಲು ಬರುವವು.

* ಮೇಲಿನ ರೀತಿಯು ಸಾಮಾನ್ಯವಾಗಿ ಗದ್ಯದಲ್ಲಿರುವದು. ಅದಕ್ಕೂ ಅಪವಾದಗಳಂತೂ ಹೇರಳವಾಗಿರುವವು. ಪದ್ಯದಲ್ಲಿ ವಾಕ್ಯಾನ್ವಯವು ಬಹಳ ಶಿಥಿಲವಾಗಿರುವದು.

**ಕೆಲವು ವೈಶಿಷ್ಟ್ಯಗಳು–**

(೧) ಇಂಗ್ಲೀಷದಂತೆ ಉಪಪದಗಳು (ನಿಶ್ಚಿತ ಮತ್ತು ಅನಿಶ್ಚಿತ— definite & indefinite articles) ಅರ್ಧಮಾಗಧಿಯಲ್ಲಿಲ್ಲ. ಆದರೆ त (तद्) ದರ್ಶಕ ಸರ್ವನಾಮವನ್ನು ಉಪಯೋಗಿಸಿ ನಿಶ್ಚಿತದ ಅರ್ಥವನ್ನುಂಟುಮಾಡಲಾಗುವದು. ಉದಾ– **सो देवो, सा देवया, तं वणं**· ಒಮ್ಮೊಮ್ಮೆ **एग** ಎಂಬ ಸಂಖ್ಯಾವಾಚಕ ವಿಶೇಷಣದ ಉಪಯೋಗದಿಂದ ಅನಿಶ್ಚಿತದ ಅರ್ಥವನ್ನುಂಟುಮಾಡಲಾಗುವದು. ಉದಾ– **एगो वग्घो, एगा कन्ना, एगं पुप्फं**·

(೨) '**य**'–ಮತ್ತು–ಎಂಬ ಸಮುಚ್ಚಯಕಾವ್ಯಯದೊಡನೆ ಕೂಡಿದ ಅನೇಕ ಕರ್ತೃಪದಗಳಿದ್ದರೆ ಕ್ರಿಯಾಪದವು ಬಹುವಚನದಲ್ಲಿರುವದು. ಉದಾ– **राया रायकन्ना य गच्छन्ति । देवा य दाणवा य जुज्झन्ति ।** ಆದರೆ 'ಅಥವಾ' ಎಂಬರ್ಥದ ಅವ್ಯಯದಿಂದ ಕೂಡಿದ್ದರೆ ಕ್ರಿಯಾಪದವು ಏಕವಚನವಾಗುವದು· ಉದಾ– **नत्थि अन्नं वा पाणं वा ।**

(೩) ಕರ್ತೃಪದಗಳು ಬೇರೆಬೇರೆ ಪುರುಷದವಿದ್ದರೆ ಉತ್ತಮ, ಮಧ್ಯಮ ಅಥವಾ ದ್ವಿತೀಯ, ತೃತೀಯ ಪುರುಷಗಳಲ್ಲಿ ಕ್ರಿಯಾಪದವನ್ನು ಇಡುವಾಗ ಕ್ರಮದಿಂದ ಪ್ರಾಶಸ್ತ್ಯವನ್ನು ಕೊಡಲಾಗುವದು. ಉದಾ– **अहं च तुमं च गच्छामो।** (**अहं** ಇರುವದರಿಂದ ಕ್ರಿಯಾಪದವು ಉತ್ತಮಪುರುಷ ಬಹುವಚನದಲ್ಲಿರುವದು.) **तुमं च तव कन्ना य जिणं वन्दह ।** (**तुमं** ಇರುವದರಿಂದ ಕ್ರಿಯಾಪದವು ದ್ವಿ. ಪು. ಬಹುವಚನವಾಗಿರುವದು.)

(೪) ಬೇರೆ ಬೇರೆ ಪುರುಷದ ಕರ್ತೃಪದಗಳಿರಲು, ಒಮ್ಮೊಮ್ಮೆ ಕ್ರಿಯಾಪದವು ಹತ್ತಿರದ ಕರ್ತೃಪದವನ್ನನುಸರಿಸುವದು. ಉದಾ– **तुज्झ कए नयरं गेहं च मए उज्झियं ।**

---

* ಡಾ· ವೈದ್ಯ–ವ್ಯಾಕರಣ ೩ ನೇ ಆವೃತ್ತಿ. ಪು. ೬೨–೬೩. ಡಾ· ಘಾಟಗೆ ೩ ನೆ ಆವೃತ್ತಿ. ಪು. ೧೫೯–೧೬೭.

(೫) ಬೇರೆ ಬೇರೆ ಲಿಂಗದ ಕರ್ತೃಪದಗಳಿದ್ದರೆ ಕ್ರಿಯಾಪದಸ್ಥಾನದಲ್ಲಿ ಬರುವ ಭೂ. ಕ. ಕೃ. ವಿಶೇಷಣವು ನಪುಂಸಕಲಿಂಗದಲ್ಲಿರುವದು. ಉದಾ– **रामो सीया य सिवियाए उवविट्ठाइं ।**

(೬) ಸಂಬಂಧಾರ್ಥಕ ಸರ್ವನಾಮವು ಮುಂದೆ ಯಾವುದಕ್ಕೆ ಸಂಬಂಧವಾಗಿರುವದೊ ಆದರ ಲಿಂಗ ವಚನ ವಿಭಕ್ತಿಗಳನ್ನು ಅನುಸರಿಸುವದು. ಉದಾ– **जो एयगं दण्डगं गेण्हिस्सइ, सो राया होहिइ ।**

(೭) ಒಮ್ಮೊಮ್ಮೆ ಸಂಬಂಧಾರ್ಥಕ ಸರ್ವನಾಮವೂ ಅದರ ಪೂರಕವಾದ ದರ್ಶಕ ಸರ್ವನಾಮವೂ ಬೇರೆ ಬೇರೆ ಲಿಂಗಗಳಲ್ಲಿರುವದುಂಟು. ಉದಾ– **जे माहणा जाइं विज्जोववेया, ताइं तु खेत्ताइं सुपेसलाइं ।**

(೮) ಒಮ್ಮೊಮ್ಮೆ ವಿಭಕ್ತಿಪ್ರತ್ಯಯಗಳೇ ಲೋಪವಾಗಿರುವವು. ಉದಾ– **अन्तेउरपरियाल सद्धिं सम्परिवुडे ।** ಇಲ್ಲಿ **परियालेणं** ಎಂದು ತೃತೀಯಾ ವಿಭಕ್ತಿಯಿರಬೇಕು.

(೯) ಅರ್ಧಮಾಗಧಿಯಲ್ಲಿ ಒಂದೇ ಅರ್ಥದ ಅನೇಕ ಪದಗಳನ್ನು ಉಪಯೋಗಿಸುವದು ಬಹಳ. ಉದಾ– [ಅ] **अज्झत्थिए, चिन्तिए, पत्थिए, मणोगए, संकप्पे;** [ಆ] **लद्धे, पत्ते, अभिसमन्नागए;** [ಇ] **आसुरत्ते, रुट्ठे, कुविए, चण्डिक्किए, मिसिमिसेमाणे;** [ಈ] **आइक्खइ, भासइ, पन्नवेइ, परूवेइ;** [ಉ] **अद्धरत्तकालसमयंसि;** [ಊ] **अम्बरवत्थनियत्थे;** [ಋ] **सोच्चा, निसम्म** ಮುಂ.

(೧೦) **वण्णओ**. ಹಲವು ಕಡೆಗೆ ಬಂದಿರುವ ವರ್ಣನೆಯ ವಾಕ್ಯಗಳನ್ನು ಮತ್ತೆ ಹೇಳದೆ ಹೊಂದಿಸಿಕೊಳ್ಳಬೇಕೆಂಬ ಅರ್ಥದಲ್ಲಿ **वण्णओ** ಎಂಬ ಪದವನ್ನು ಉಪಯೋಗಿಸುವರು. ಉದಾ– **तेणं कालेणं तेणं समएणं चम्पा नाम नयरी होत्था वण्णओ ।** ಇಲ್ಲಿ ಮುಂದೆ ಚಂಪಾನಗರದ ವರ್ಣನೆಯನ್ನು ಹೊಂದಿಸಿಕೊಳ್ಳಬೇಕು.

(೧೧) '**जाव**' ಎಂಬ ಪದದಿಂದ ಹಿಂದಿನ ಕೆಲವು ಮಾತಗಳನ್ನು ತೆಗೆದುಕೊಳ್ಳಬೇಕೆಂದು ಸೂಚಿಸಿ ಆ ಮಾತುಗಳನ್ನು ಬಿಟ್ಟು ಮುಂದಿನ ವಾಕ್ಯವನ್ನು ಜೋಡಿಸುವರು. ಉದಾ– **तरुणे जुगवं जाव निउणसिप्पोवगए ।**

(೧೨) ಪುನರಾವೃತ್ತಿಯನ್ನು ತಪ್ಪಿಸಲು ಮತ್ತು ಸಮಾನಾರ್ಥಕ ಪದಗಳ ಉಪಯೋಗವನ್ನು ತಪ್ಪಿಸಲು २ ರಿಂದ ६ ರ ವರೆಗಿನ ಸಂಖ್ಯೆಗಳನ್ನು

ಉಪಯೋಗಿಸುವರು. ಉದಾ– [ಅ] **वन्दइ नमंसइ २। वन्दित्ता नमसित्ता।** [ಆ] **महया २ सद्देण। महया महया सद्देण।** [ಇ] **तेणं कालेणं २। तेणं कालेणं तेणं समएणं।** [ಈ] **लद्धा ३; लद्धा, पत्ता, अभिसमन्नागया। सन्ता ३; सन्ता, तन्ता, परितन्ता।** [ಉ] **एवमाइक्खइ ४; एवमाइक्खइ, एवं भासइ, एवं पन्नवेइ एवं परूवेइ। असणं ४; असणं, पाण, खाइमं, साइमं।** [ಊ] **सिज्झिहिइ ५; सिज्झिहिइ, बुज्झिहिइ, मुच्चिहिइ परिनिव्वहिइ, सव्वदुक्खाणं अंतं करेहिइ। पुप्फ ५; पुप्फ, वत्थ, गन्ध, मल्ल, अलंकार।** [ಋ] **इड्ढि ६; इड्ढि, जुई, जसो, बलं, वीरियं, पुरिसक्कारपरक्कमे। सुरं ६; सुरं, महुं, मेरयं, मज्जं, सिंहुं, पसन्नं।**

ಶಬ್ದಗಳ ವಿವಿಧ ಉಪಯೋಗದ ರೀತಿಗಳು ಶಬ್ದವಿಚಾರದಲ್ಲಿ ಕೊಡಲ್ಪಟ್ಟಿವೆ.

## ವಿಭಕ್ತಿವಿಚಾರ

ವಿಭಕ್ತಿಗಳ ಉಪಯೋಗವನ್ನು ಹಿಂದೆ ಬೇರೆ ಬೇರೆ ಪಾಠಗಳ ವಾಕ್ಯಗಳಲ್ಲಿ ಅಲ್ಲಲ್ಲಿ ತೋರಿಸಲಾಗಿದೆ. ಆದರೆ ವಿಭಕ್ತಿಗಳ ಮಹತ್ವವಾದ ಉಪಯೋಗಗಳು ಲಕ್ಷದಲ್ಲಿ ಉಳಿಯಬೇಕೆಂದು ಕೆಲವು ಮುಖ್ಯವಾದವುಗಳನ್ನು ಸಂಗ್ರಹಿಸಿ ಇಲ್ಲಿ ಕೊಡಲಾಗಿದೆ. ಆದರೆ ಈ ವಿವರಣೆಯು ಸಂಪೂರ್ಣವಾಗಿರದೆ ರೂಢಿಯಲ್ಲಿಯ ಮತ್ತು ಮಹತ್ವದ ವಿಷಯಗಳನ್ನು ಮಾತ್ರ ಒಳಗೊಂಡಿದೆ ಎಂಬುದನ್ನು ಲಕ್ಷಿಸಬೇಕು.

### ೧. ಪ್ರಥಮಾ

[ಅ] ಕರ್ತರೀ ಪ್ರಯೋಗದಲ್ಲಿ ಕರ್ತೃವಿಗೆ— **कुमारो** देउलं गच्छइ।

[ಆ] ಕರ್ಮಣಿ ಪ್ರಯೋಗದಲ್ಲಿ ಕರ್ಮಕ್ಕೆ— निवेण **रज्जं** पालियं।

[ಇ] ಕ್ರಿಯಾಪದವು ಅಕರ್ಮಕವಿದ್ದು ಆದಕ್ಕೆ ಪೂರಕ ಶಬ್ದವು ಆವಶ್ಯಕವಿರಲು ಆ ಪೂರಕ ಶಬ್ದವು ಪ್ರಥಮೆಯಲ್ಲಿ ಉಪಯೋಗಿಸಲ್ಪಡುವದು. ಉದಾ– **सिध्दे वा भवइ सासए.**

* ಡಾ. ಘಾಟಗೆಯವರ ವ್ಯಾಕರಣ ೩ ನೆಯ ಆವೃತ್ತಿ ಪುಟ ೧೬೭ ರಿಂದ ೧೮೧.

೨. ದ್ವಿತೀಯಾ

[ಅ] ಕರ್ತರಿ ಪ್ರಯೋಗದಲ್ಲಿ ಕರ್ಮಕ್ಕೆ– सो **अम्बरुक्खं** पासइ ।

[ಆ] ಗತ್ಯರ್ಥಧಾತುಗಳಿರಲು ಸ್ಥಳವಾಚಕ ಪದಕ್ಕೆ–एहि वयंस, **पाढसालं** गच्छामो ।

[ಇ] ಕ್ರಿಯಾಪದದೊಡನೆ ಅದೇ ಧಾತುವಿನಿಂದಾದ ನಾಮ ಅಥವಾ ಧಾತುಸಾಧಿತವನ್ನು ಉಪಯೋಗಿಸಿದ್ದರೆ ಆ ನಾಮ ಅಥವಾ ಧಾತುಸಾಧಿತಕ್ಕೆ– किं पि तहाविहं **झाणं** झायन्तो ।

[ಈ] ಸ್ಥಳ, ಕಾಲದರ್ಶಕ ಪದಗಳಿಗೆ– ठिओ य कंचि **कालं** तीए सह ।

೩. ತೃತೀಯಾ

[ಅ] ಕರ್ಮಣಿ ಪ್ರಯೋಗದಲ್ಲಿ ಕರ್ತೃವಿಗೆ– **जम्बूरोग** फलाइं नीयाइं ।

[ಆ] सह, सम, सद्धिं विणा, अलं ಈ ಅವ್ಯಯಗಳ ಉಪಯೋಗವಿದ್ದಲ್ಲಿ ಅವುಗಳ ಸಂಬಂಧವಿರುವ ಪದಗಳಿಗೆ– **तीए** सह गमेइ कालं ।

[ಇ] ಕರಣ ಅಥವಾ ಸಾಧನವಾಗಿರುವ ಪದಕ್ಕೆ– **मणसा वयसा कायसा** न करेमि, न कारावेमि ।

[ಈ] ಕಾರಣ ಅಥವಾ ಉದ್ದೇಶವನ್ನು ತೋರಿಸುವ ಪದಕ್ಕೆ– **मम हत्याओ** खग्गं **पमाएण** निवडियं ।

[ಉ] ರೀತಿಯನ್ನು ತೋರಿಸುವ ಪದಕ್ಕೆ– **वीणएण** वयणं पडिसुणन्ति ।

೪. ಚತುರ್ಥೀ

ಅರ್ಧಮಾಗಧಿಯಲ್ಲಿ ಈ ವಿಭಕ್ತಿಯಿಲ್ಲ. ಚತುರ್ಥೀ ಅರ್ಥವಿದ್ದಲ್ಲಿ ಷಷ್ಠೀ ವಿಭಕ್ತಿಯನ್ನೇ ಉಪಯೋಗಿಸುವರು. ಮತ್ತು–ಸಲುವಾಗಿ–ಎಂಬ ಅರ್ಥವಿದ್ದಲ್ಲಿ अट्ठं अट्ठा, अट्ठाए ಎಂಬ ಅವ್ಯಯಗಳನ್ನೂ ಉಪಯೋಗಿಸುವರು. ಉದಾ– अट्ठावयस्स **रक्खणट्ठाए** एयं जलेण पूरेमो ।

೫. ಪಂಚಮೀ

[ಅ] ಕ್ರಿಯೆಯ ಪ್ರಾರಂಭವು ಎಲ್ಲಿಂದ ಅಥವಾ ಯಾವಾಗ ಆಯಿತು ಎಂಬುದನ್ನು ಹೇಳುವದಕ್ಕೆ– निवस्स सेणा **नयराओ** पत्थिया ।

[ಆ] ತುಲನೆಯಲ್ಲಿ ಯಾವುದಕ್ಕಿಂತ ಎಂಬುದನ್ನು ಹೇಳುವ ಪದಕ್ಕೆ– सणंकुमारस्स **सक्कवण्णियरूवसिरीओ** अहिययरं रूवसम्पयं दट्ठूण ते देवा विम्हिया ।

[ಇ] ಕೆಲವು ಕ್ರಿಯಾವಿಶೇಷಣ ಮತ್ತು ಶಬ್ದಯೋಗಿ ಅವ್ಯಯಗಳೊಡನೆ
**बालभावाओ** आरब्भ ।

**೬. ಷಷ್ಠೀ** *

[ಅ] ಸ್ವಾಮಿತ್ವ ಸಂಬಂಧದಲ್ಲಿ– **सोहम्मस्सं माहणस्स** कन्ना ।

[ಆ] ಕ್ವಚಿತ್ತಾಗಿ ಕರ್ತೃವಾಚಕ ಪದಕ್ಕೆ– **देवाणं मणुयाणं** च वुग्गहे ।

[ಇ] ಒಮ್ಮೊಮ್ಮೆ ಕರ್ಮವಾಚಕ ಪದಕ್ಕೆ– अहो दुज्जयत्तं **मोहस्स** ।

[ಈ] ಸತ್-ಷಷ್ಠೀ ಪ್ರಯೋಗದಲ್ಲಿ– '**राइणो निवण्णस्स** अहं तए अक्खा-
णयं पुच्छियव्वं ' त्ति कणयमंजरीए मयणरेहा भासिया ।

**೭. ಸಪ್ತಮೀ**

ಕ್ರಿಯೆಯ ಸ್ಥಲ ಅಥವಾ ಕಾಲವನ್ನು ತೋರಿಸಲು ಸಪ್ತಮೀ ವಿಭಕ್ತಿ
ಯನ್ನು ಉಪಯೋಗಿಸುವರು.

[ಅ] **कोसम्बीए नयरीए** जियसत्तू राया ।

[ಆ] ಸತಿ-ಸಪ್ತಮೀ ಪ್ರಯೋಗದಲ್ಲಿ– न चरेज्ज **वासे वासन्ते** ।

**೮. ಸಂಬೋಧನ**

ಸಂಬೋಧನ ವಿಭಕ್ತಿಯು ಕೇವಲ ಸಂಭೋಧನ ಅರ್ಥದಲ್ಲಿ ಉಪ
ಯೋಗಿಸಲ್ಪಡುವದು.

* ಮೇಲಿನವಲ್ಲದೆ ಅನೇಕ ವಿಶೇಷಣ ಮತ್ತು ಕ್ರಿಯಾಪದಗಳು ಷಷ್ಠೀ ವಿಭಕ್ತಿ
ಯೊಡನೆ ಉಪಯೋಗಿಸಲ್ಪಡುವವು.

## ಪರಿಶಿಷ್ಟ ೧.

### ಕೆಲವು ರೂಢಿಯ ಪದ ಪ್ರಯೋಗಗಳು.

| | |
|---|---|
| ಈ ಪ್ರಕಾರ, ಈ ರೀತಿಯಾಗಿ | एवं, एवमाइ, एमाइ |
| ಹೀಗೆ ವಿಚಾರಿಸಿ | त्ति कट्टु; त्ति किच्चा |
| ಈ ಸಂಗತಿಯು ತಿಳಿದ ಕೂಡಲೆ | इमीसे कहाए लद्धट्ठे समाणे |
| ಹೀಗೆ ಅಂದಕೂಡಲೆ | एवं वुत्ते समाणे |
| ಕೊನೆಗೆ ಮರಣ ಹೊಂದಿ | कालमासे कालं किच्चा |
| ಸಂತುಷ್ಟ | |
| ಒಮ್ಮೆಲೆ | |
| ಒಮ್ಮೆ, ಒಂದಾನೊಂದು ಕಾಲಕ್ಕೆ | एगया, अन्नया, अन्नया कयाइ |
| ಒಬ್ಬರೊಬ್ಬರಿಗೆ | अन्नमन्नं, परोप्परं |
| ಕೆಲವು ಕಾಲ ಕಳೆಯಿತು | अइक्कन्तो कोइ कालो |
| ಊರಿಂದೂರಿಗೆ | गामाणुगाम |
| ಕೂಡಲೆ, ತೀವ್ರ | लहुं, हव्वं, सिग्धं, खिप्पं |
| ಹುಟ್ಟಿದನು–ಹುಟ್ಟಿದಳು–ಹುಟ್ಟಿತು | उववन्नो, उववन्ना, उववन्नं |
| ಹಾಗಿದ್ದರೆ | जइ एवं ता |
| ಹತ್ತಿರ, ಸಮೀಪ | समीवं, पासे, सगासे, अन्तियं |
| ಹಾಗೇ ಆಗಲಿ, ಒಳ್ಳೇದು | "एवं होउ" त्ति, "तह" त्ति |
| ಅದೇ ದಿವಸ | तम्मि चेव दियहे |
| ಆ ವೇಳೆಗೆ | तेणं कालेणं, तेणं समएणं |
| ಸ್ವಲ್ಪ ಹೊತ್ತಿನ ಮೇಲೆ | थेववेलाए, थेवकालेण |
| ಪ್ರತಿದಿನ | दिणे दिणे, पइदिणे |
| ಮತ್ತೊಂದುದಿನ | अन्नम्मि दिणे |
| ಬೆಳಗು ಮುಂಜಾನೆ | पभायसमए |
| ಭರತಖಂಡದಲ್ಲಿ | इहेव भारहे वासे |
| ಅಷ್ಟರಲ್ಲಿ | एत्थन्तरे, एत्थन्तरम्मि, ताव य |
| ಕಾಲಾನುಸಾರವಾಗಿ | कालेण, कालक्कमेण |
| ಸುಖದಿಂದ | सुहेण, सुहंसुहेण |
| ಈಗ, ಇದೀಗ | सम्पइ, सम्पयं |
| ಒಂದು ಕ್ಷಣದಲ್ಲಿ | खणमेत्तेण |

# ಪರಿಶಿಷ್ಟ ೨.

## ವ್ಯಾಕರಣದಲ್ಲಿ ಬರುವ ಕನ್ನಡ-ಇಂಗ್ಲೀಷು ಪಾರಿಭಾಷಿಕ ಶಬ್ದಗಳು

ಅನಾದಿ-Non-initial
ಅನುನಾಸಿಕ-Nasal
ಬಹುವಚನ-Plural
ಅಂತಸ್ಥವರ್ಣ-Semi-vowel & liquid
ಅಂತ್ಯ-Final
ಅವ್ಯಯ-Indeclinable
ಅಸಂಯುಕ್ತ-Single
ಆಖ್ಯಾತ ವಿಕಾರ (ಧಾತುಗಳನ್ನು ನಡೆಸುವದು)-Conjugation
ಆದಿವರ್ಣಾಗಮ-Prothesis
ಆದಿ-Initial
ಆಜ್ಞಾರ್ಥ-Imperative mood
ಉಪಾಂತ್ಯ-Penultimate
ಊಷ್ಮವರ್ಣ-Sibilant
ಉದ್ಗಾರವಾಚಕ ಅವ್ಯಯ-Interjection
ಏಕವಚನ-Singular
ಕರ್ತರಿ-Active
ಕರ್ಮಣಿ-Passive
ಕರ್ಮಣಿ ಅಂಗ-Passive Base
ಕ್ರಿಯಾಪದ-Verb
ಕ್ರಿಯಾವಿಶೇಷಣ-Adverb
ಚತುರ್ಥೀ-Dative
ತೃತೀಯ ಪುರುಷ-Third Person
ತೃತೀಯಾ-Instrumental
ತುಮಂತ(ಹೇತ್ವರ್ಥಕ ಅವ್ಯಯ) Infinitive
ದ್ವಿತೀಯಪುರುಷ-Second Person
ದ್ವಿತೀಯಾ ವಿಭಕ್ತಿ-Accusative, objective
ದೀರ್ಘ-Long
ಧಾತುಸಾಧಿತ, ಕೃದಂತ-Participle
ನಪುಂಸಕಲಿಂಗ-Neuter
ನಾಮ-Noun
ನಾಮಧಾತು-Denominative verb
ಪೂರ್ವಗಾಮೀ ಶಬ್ದ-Antecedent
ಪುಲ್ಲಿಂಗ-Masculine
ಪಂಚಮೀ-Ablative
ಪ್ರತ್ಯಯ-Termination
ಪ್ರತಿಶಬ್ದ-Equivalent
ಪ್ರಥಮ(ಉತ್ತಮ) ಪುರುಷ-First-Person
ಪ್ರಥಮಾ-Nominative
ಪ್ರಯೋಗ-Voice
ಪ್ರಯೋಗ ಬದಲಿಸುವದು-Change of voice
ಪ್ರೇರಣಾರ್ಥಕ ಅಂಗ-Causal Base
ಬದಲಿಸುವದು To Convert
ಭೂತಕಾಲ-Past Tense
ಭವಿಷ್ಯತ್ಕಾಲ-Future Tense
ಮಧ್ಯ (ಎರಡು ಸ್ವರಗಳ ನಡುವಿನ) Medial
ಮಹಾಪ್ರಾಣ-Aspirate
ಲ್ಯಬಂತ(ಭೂ. ಕೃ. ಅವ್ಯಯ)-Gerund, Absolutive
ವರ್ತಮಾನಕಾಲ-Present Tense

ವರ್ಣಲೋಪ-Syncope
ವರ್ಣವಿಚಾರ-Phonology
ವರ್ಣವಿಪರ್ಯಯ-Metathesis
ವಾಕ್ಯರಚನೆ-Syntax
ವಿಧ್ಯರ್ಥ-Potential Mood
ವಿಭಕ್ತಿ-Case
ವಿಭಕ್ತಿ ಪ್ರತ್ಯಯ ಹಚ್ಚುವದು-(ಶಬ್ದಗಳನ್ನು ನಡೆಸುವದು)-Declension
ವ್ಯಂಜನ-Consonant
ವಿಶೇಷಣ-Adjective
ಶಬ್ದವಿಚಾರ-Morphology
ಷಷ್ಠೀ-Genitive
ಸಮಾನೀಕರಣ-Assimilation
ಸಪ್ತಮೀ-Locative
ಸಮಾಸ-Compound
ಸಂಕೇತಾರ್ಥ-Conditional mood
ಸಂಧಿ-Coalescence, Sandhi
ಸಂಬೋಧನ-Vocative
ಸಂಯುಕ್ತ-Conjunct
ಸಮುಚ್ಚಾಯಕಾವ್ಯಯ- Conjunction
ಸ್ತ್ರೀಲಿಂಗ-Feminine
ಸ್ಪರ್ಶ-Mute
ಸ್ವರ-Vowel
ಸ್ವರಭಕ್ತಿ-Anaptyxis
ಹ್ರಸ್ವ-Short.

# ಶಬ್ದ-ಕೋಶ

## अ

**अइ** (ಅ.) ಅತಿ, ಬಹು
**अइ** (ಉಪಸರ್ಗ.) ಆಚೆಗೆ
**अइहि** (ಪು.) ಅತಿಥಿ
**अईव** (ಅ.) ಅತಿಶಯ
**अउणतीस**(ವಿ.) ಸೂವತ್ತರೊಂಬತ್ತು
**अउल** (ವಿ.) ಅತುಲ, ಬಹಳ
**अओ** (ಅ.) ಆದ್ದರಿಂದ
**अक्क** (ಪು.) ಅರ್ಕ, ಸೂರ್ಯ
**अक्कम** (ಧಾ.) ಆಕ್ರಮಿಸು
**अक्खाणय** (ನ.) ಆಖ್ಯಾನಕ, ಕತೆ
**अक्खाय** (ಭೂ.ಕ.ಕೃ.ವಿ.) ಹೇಳಿದ
**अकिंचण** (ವಿ.) ದರಿದ್ರ, ಧನವಿಲ್ಲದ
**अक्खित्त** (ಭೂ.ಕ.ಕೃ.ವಿ.) ಆಕರ್ಷಿಸಲ್ಪಟ್ಟ
**अंग** (ನ.) ಶರೀರ
**अंगअ** (ವಿ.) ಶರೀರ ಧರಿಸಿದ
**अग्गओ** (ಅ.) ಮುಂದೆ
**अग्गमाहिसी** (ಸ್ತ್ರೀ) ಪಟ್ಟರಾಣಿ
**अग्गिहोत्त** (ನ.) ಅಗ್ನಿಹೋತ್ರ
**अंगुल** (ನ.), **अंगुली** (ಸ್ತ್ರೀ.) } ಬೆರಳು
**अंगुलिअ** (ನ.) ಉಂಗುರ
**अच्चय** (ಪು.) ಪೂಜಕ
**अच्चाहिय** (ವಿ.) ಅತ್ಯಾಧಿಕ, ಬಹಳ
**अचित्त** (ನ.) ಚಿತ್ತರಹಿತ, ನಿರ್ಜೀವ
**अच्चब्भुय** (ವಿ.) ಅತ್ಯದ್ಭುತ
**अच्छ** (ಧಾ.) ಇರು
**अच्छरा** (ಸ್ತ್ರೀ.) ಅಪ್ಸರೆ
**अच्छि** (ಪು.ಸ್ತ್ರೀ.ನ.) ಕಣ್ಣು
**अज्ज** (ಅ.) ಇಂದು
**अज्ज वि** (ಅ.) ಇಂದಿಗೂ
**अज्जउत्त**, **अज्जपुत्त** } (ಪು.) ಆರ್ಯಪುತ್ರ, ಪತಿ
**अज्जण** (ನ.) ಗಳಿಕೆ
**अज्जू** (ಸ್ತ್ರೀ.) ಅತ್ತೆ
**अज्झहिय** (ವಿ.) ಬಹಳ, ಅಭ್ಯಧಿಕ
**अज्झावय** (ಪು.) ಅಧ್ಯಾಪಕ, ಶಿಕ್ಷಕ
**अट्ठ** (ವಿ.) ಎಂಟು
**अट्ठणउइ**, **अट्ठाणउइ** } (ವಿ.) ಎಂಬತ್ತರೊಂಬತ್ತು
**अट्ठतीस** (ವಿ.) ಮೂವತ್ತೆಂಟು
**अट्ठयाल**, **अट्ठयालिस**, **अट्ठचत्तालीस** } (ವಿ.) ನಾಲ್ವತ್ತೆಂಟು
**अट्ठसट्ठि**, **अढसट्ठि** } (ವಿ.) ಅರವತ್ತೆಂಟು
**अट्ठहत्तरि** (ವಿ.) ಎಪ್ಪತ್ತೆಂಟು
**अट्ठा** (ಅ.) ಸಲುವಾಗಿ
**अट्ठारस** (ವಿ.) ಹದಿನೆಂಟು
**अट्ठावन्न** (ವಿ.) ಐವತ್ತೆಂಟು
**अट्ठावीस** (ವಿ.) ಇಪ್ಪತ್ತೆಂಟು
**अट्ठासीइ** (ವಿ.) ಎಂಬತ್ತೆಂಟು

**अडवी** (ಸ್ತ್ರೀ.) ಅಡವಿ, ಅರಣ್ಯ
**अणगार** (ಪು.) ಸನ್ಯಾಸಿ, ಸಾಧು
**अणप्प** (ವಿ.) ಅನಲ್ಪ, ಬಹಳ
**अणवज्ज** (ವಿ.)ಅನವದ್ಯ, ನಿರ್ದೋಷ
**अणसण** (ನ.) ಅನಶನ, ಉಪವಾಸ
**अणाइय** (ವಿ.) ಅನಾದಿಯಾದ
**अणाह** (ವಿ.) ಅನಾಥ
**अणिच्चया** (ಸ್ತ್ರೀ.) ಅನಿತ್ಯತೆ
**अणु** (ಉಪಸರ್ಗ) ನಂತರ, ಸಂಗಡ
**अणुजा** (ಧಾ.) ಅನುಸರಿಸು, ಹಿಂಬಾಲಿಸು
**अणुदियहं** (ಅ.) ಪ್ರತಿ ದಿವಸ
**अणुपाल** (ಧಾ.) ಪಾಲಿಸು
**अणुपालण**(ನ.)ರಕ್ಷಣೆ, ಪಾಲಿಸುವದು
**अणुमन्न** (ಧಾ.) ಒಪ್ಪು, ಸಮ್ಮತಿಸು
**अणुरज्ज** (ಧಾ.) ಆಸಕ್ತನಾಗು
**अणुराग** (ಪು.) ಪ್ರೇಮ, ಅನುರಾಗ
**अणुरूव** (ವಿ.) ಅನುರೂಪ, ಯೋಗ್ಯ
**अणुव्वय** (ನ.) ಅನುವ್ರತ
**अणुसंकम** (ಧಾ.) ಅನುಸರಿಸು, ಬೆನ್ನುಹತ್ತು
**अणुसर** (ಧಾ.) ಹಿಂಬಾಲಿಸು
**अणुसास** (ಧಾ.) ಉಪದೇಶಿಸು
**अणुहव** (ಧಾ.) ಅನುಭವ ತೆಗದುಕೊಳ್ಳು
**अणेग** (ವಿ.) ಅನೇಕ, ಬಹಳ
**अण्णेस** (ಧಾ.)ಶೋಧಿಸು, ಹುಡುಕು
**ंतरा** (ಅ.) ನಡುವೆ

**अंतरिय** (ವಿ.) ಆಂತರಿಕ, ಒಳಗಿನ
**अंतरेण** (ಅ) ಬಿಟ್ಟು, ಹೊರ್ತು
**अत्तय** (ಪು.) ಆತ್ಮಜ, ಮಗ
**अत्थ** (ಪು.) ಅರ್ಥ, ದುಡ್ಡು
**अत्थगिरि** (ಪು.) ಅಸ್ತಗಿರಿ, ಪಶ್ಚಿಮ ದಿಕ್ಕಿನ ಪರ್ವತ
**अंतिय** (ವಿ.) ಹತ್ತಿರ, ಸಮೀಪ
**अथिर** (ವಿ.) ಅಸ್ಥಿರ, ಚಂಚಲ
**अदंसणीय** (ವಿ.) ಅದರ್ಶನೀಯ, ಕಾಣಲಾಗದ
**अदाणभय** (ನ.) ಕೊಡದಿರುವ ಅಂಜಿಕೆ
**अद्दाय** (ಪು.) ಕನ್ನಡಿ
**अद्धाण** (ನ.) ಮಾರ್ಗ, ಬೀದಿ
**अधम्म** (ಪು.) ಅಧರ್ಮ
**अंध** (ವಿ.) ಕುರುಡ
**अंतेउर** (ನ.) ಅಂತಃಪುರ
**अद्धिइ** (ಸ್ತ್ರೀ.) ಅಧೈರ್ಯ, ಗಾಬರಿ
**अन्न** (ವಿ.) ಬೇರೆಯ
**अन्न** (ನ.) ಅನ್ನ
**अन्नभव** (ಪು.) ಬೇರೆ ಜನ್ಮ
**अन्नत्थ** (ಅ.) ಬೇರೆಡೆಗೆ
**अन्नया** ಒಮ್ಮೆ
**अन्नहा** (ಅ.) ಇಲ್ಲವಾದರೆ
**अप्प** (ಧಾ.) ಅರ್ಪಿಸು
**अप्प** (ಪು.) ಆತ್ಮ, ಸ್ವತಃ
**अप्प** (ವಿ.) ಅಲ್ಪ
**अप्पघाय** (ಪು.)ಆತ್ಮಘಾತ,ಆತ್ಮಹತೆ

**अप्पमत्त** (ವಿ.) ಅಪ್ರಮತ್ತ, ಜಾಗರೂಕ
**अप्पमाय** (ಪು.) ಅಪ್ರಮಾದ, ತಪ್ಪದಿರುವಿಕೆ
**अपुत्त** (ವಿ.) ಮಕ್ಕಳಿಲ್ಲದ
**अफल** (ವಿ.) ಫಲವಿಲ್ಲದ, ವ್ಯರ್ಥ
**अभय** (ನ.) ಅಭಯ, ಭಯವಿಲ್ಲದಿರುವಿಕೆ
**अभि** (ಉಪಸರ್ಗ) ಕಡೆಗೆ
**अभिगच्छ** (ಧಾ.) ಎರಿಹೋಗು, ಎದುರಿಸು, ತೊಂದರೆಕೊಡು
**अभिगम्म**(ಭೂ.ಕೃ.ಅ.) ಎರಿಹೋಗಿ, ಸಮೀಪಿಸಿ
**अभिण्ण** (ವಿ.)ಬೇರೆಯಾಗದ, ಅಭಿನ್ನ
**अभिभव**(ಧಾ.)ಪೀಡಿಸು, ಸೋಲಿಸು
**अभिभूय** (ಭೂ.ಕ.ಕೃ.ವಿ.) ಸೋಲಿಸಲ್ಪಟ್ಟ, ಪೀಡಿಸಲ್ಪಟ್ಟ
**अभिवाय** (ಧಾ.) ಅಭಿವಂದಿಸು, ನಮಸ್ಕರಿಸು
**अभिसेय** (ಪು.) ಅಭಿಷೇಕ
**अभिहाण** (ನ.) ಹೆಸರು
**अमच्च** (ಪು.) ಅಮಾತ್ಯ, ಮಂತ್ರಿ
**अमय** (ನ.) ಅಮೃತ
**अमर** (ಪು.) ದೇವ
**अमराय** (ಧಾ.) ದೇವನಂತೆವರ್ತಿಸು, ನಟಿಸು
**अम्मधाई** (ಸ್ತ್ರೀ.) ದಾಯಿ, ತೊತ್ತು
**अम्मा** (ಸ್ತ್ರೀ.) ತಾಯಿ
**अम्मापिया** (ನ.) ತಾಯಿತಂದೆ
**अमोह** (ವಿ.) ವ್ಯರ್ಥವಾಗದ
**अय** (ಪು.) ಆಡು
**अरण्ण** (ನ.) ಅರಣ್ಯ
**अरहन्त** (ಪು.) ತೀರ್ಥಂಕರ
**अलं** (ಅ.) ಸಾಕು
**अलंकार** (ಪು.) ಆಭರಣ
**अलाउ** (ಪು.) ಕುಂಬಳ
**अलित्त** (ವಿ.) ಅಲಿಪ್ತ, ಸಂಬಂಧಿಸಿದ
**अलिय** (ವಿ.) ಸುಳ್ಳಾದ
**अव** (ಉಪಸರ್ಗ) ಕೆಳಗೆ
**अवगी** (ಧಾ.) ದೂರಮಾಡು, ದೂರಬಯ್ಯು
**अवत्था** (ಸ್ತ್ರೀ.) ಅವಸ್ಥೆ
**अवयर** (ಧಾ.) ಇಳಿ
**अवराह** (ಪು.) ಅಪರಾಧ
**अवराहि** (ಪು.) ಅಪರಾಧಿ
**अवलोय** (ಧಾ.) ನೋಡು
**अवस** (ವಿ.) ಅವಶ, ಅಸ್ವತಂತ್ರ
**अवस्सं** (ಅ.) ಅವಶ್ಯವಾಗಿ, ನಿಶ್ಚಯವಾಗಿ
**अवसाण** (ನ.) ಕೊನೆ, ಮರಣ
**असक्क** (ವಿ.) ಅಶಕ್ಯ
**असच्च** (ನ.) ಅಸತ್ಯ
**असण** (ನ.) ಅಶನ, ಅನ್ನ
**असरण** (ವಿ.) ಅಶರಣ, ರಕ್ಷಕರಿಲ್ಲದ
**असंसत्त** (ವಿ.) ಅನಾಸಕ್ತ
**असार** (ವಿ.) ಅಸಾರ
**असारया** (ಸ್ತ್ರೀ.) ಅಸಾರತೆ

**असाहु** (ವಿ) ಅಸಾಧು
**असि** (ಪು.) ಖಡ್ಗ
**असीइ** (ವಿ.) ಎಂಬತ್ತು
**अह** (ಅ.) ಈಗ, ಇನ್ನು ಮುಂದೆ
**अह** (ನ.) ದಿವಸ
**अहम्मिय** (ವಿ.) ಅಧಾರ್ಮಿಕ
**अहवा** (ಅ.) ಅಥವಾ
**अहि** (ಪು.) ಸರ್ಪ
**अहिणव** (ವಿ.) ಅಭಿನವ, ಹೊಸ
**अहियं** (ಅ.) ಬಹಳವಾಗಿ, ಹೆಚ್ಚಾಗಿ
**अहिलस** (ಧಾ.) ಇಚ್ಛಿಸು
**अहिव** (ಪು.) ಅಧಿಪ, ರಾಜ, ಒಡೆಯ
**अहिंसा** (ಸ್ತ್ರೀ.) ಅಹಿಂಸೆ
**अहेसर** (ಪು.) ಸೂರ್ಯ
**अहे** (ಅ.) ಕೆಳಗೆ
**अहो** (ಅ.) ಆಶ್ಚರ್ಯಸೂಚಕ ಉದ್ಗಾರ

## आ

**आ** (ಉಪಸರ್ಗ) ವರೆಗೆ, ತನಕ
**आइ** (ವಿ.) ಆದಿ, ಮೊದಲು
**आइच्च** (ಪು.) ಸೂರ್ಯ
**आउ** (ನ.) ಆಯುಷ್ಯ
**आउल** (ವಿ.) ವ್ಯಾಕುಲ, ಚಿಂತೆಯುಳ್ಳ
**आउलीहूय** (ಭೂ.ಕ.ಕೃ.ವಿ.) ಗಾಬರಿಯಾದ
**आगच्छ** (ಧಾ.) ಬರು
**आगंतूण** (ಭೂ.ಕೃ.ಅ.) ಬಂದು
**आगय** (ಭೂ.ಕ.ಕೃ.ವಿ.) ಬಂದ
**आगार** (ನ.) ಮನೆ
**आगिइ** (ಸ್ತ್ರೀ.) ಆಕೃತಿ
**आढत्त** (ಭೂ.ಕ.ಕೃ.ವಿ.) ಪ್ರಾರಂಭಿಸಲ್ಪಟ್ಟ
**आण** (ಧಾ.) ತರು
**आणण** (ನ.) ಮುಖ
**आणंदिणी** (ಸ್ತ್ರೀ.) ಆನಂದಕೊಡುವವಳು
**आणप्प** (ವಿ.ಕ.ಕೃ.ವಿ.) ಆಜ್ಞೆ ಪಾಲಿಸಲು ಯೋಗ್ಯ
**आणयण** (ನ.) ತರುವದು
**आणा** (ಸ್ತ್ರೀ.) ಆಜ್ಞೆ
**आणावे** (ಧಾ.) ತರಿಸು
**आमोय** (ಧಾ.) ಆನಂದಬಡು
**आयंक** (ಪು.) ರೋಗ
**आयण्ण** (ಧಾ.) ಕೇಳು
**आयर** (ಧಾ.) ಆಚರಿಸು
**आयर** (ಪು.) ಆದರ
**आयरण** (ನ.) ಆಚರಣ
**आयरिय** (ಪು.) ಆಚಾರ್ಯ
**आयाहिण** / **पयाहिण** } (ನ.) ಪ್ರದಕ್ಷಿಣೆ
**आरक्खग** (ಪು.) ಆರಕ್ಷಕ, ಪೋಲೀಸ
**आरद्ध** (ಭೂ.ಕ.ಕೃ.ವಿ.) ಪ್ರಾರಂಭಿಸಲ್ಪಟ್ಟ
**आरंभ** (ಪು.) ಆರಂಭ
**आरूढ** (ಭೂ.ಕ.ಕೃ.ವಿ.) ಏರಿದ, ಹತ್ತಿದ
**आलस्स** (ನ.) ಆಲಸ್ಯ
**आलोग** / **आलोय** } (ಧಾ.) ನೋಡು

**आवट्ट** (ಪು.) ತಿರುಗಣಿಮಡು
**आवन्न** (ಭೂ.ಕ.ಕೃ.ವಿ.) ಹೊಂದಿದ
**आवन्नसत्ता** (ಸ್ತ್ರೀ.) ಗರ್ಭವತಿ ಸ್ತ್ರೀ
**आवास** (ಪು.) ನಿವಾಸಸ್ಥಾನ
**आवेक्ख** (ಧಾ.) ನಿರೀಕ್ಷಿಸು, ಕಾಳಜಿ ತೆಗೆದುಕೊಳ್ಳು
**आस** (ಪು.) ಕುದುರೆ
**आसंदय** (ಪು.) ಮಂಚ
**आसन्न** (ವಿ.) ಸಮೀಪ, ಬಳಿಯು
**आसम** (ಪು.) ಆಶ್ರಮ
**आसाय** (ಧಾ.) ಆಸ್ವಾದಿಸು, ರುಚಿ ನೋಡು
**आसीसा** (ಸ್ತ್ರೀ.) ಆಶೀರ್ವಾದ
**आहय** (ಭೂ.ಕ.ಕೃ.ವಿ.) ಹೊಡೆಯಲ್ಪಟ್ಟ, ಕೊಲ್ಲಲ್ಪಟ್ಟ
**आहर**(ಧಾ.)ಆಹಾರ ತೆಗೆದುಕೊಳ್ಳು, ಊಟಮಾಡು

## इ

**इओ** (ಅ.) ಇಲ್ಲಿಂದ
**इच्छ** (ಧಾ.) ಇಚ್ಛಿಸು
**इच्छा** (ಸ್ತ್ರೀ.) ಇಚ್ಛೆ
**इणं** (ಅ.) ಅವನೇ, ಅವಳೇ, ಅದೇ
**इत्थि** (ಸ್ತ್ರೀ.) ಸ್ತ್ರೀ.
**इत्थिलोल** / **इत्थिलोलुय** (ವಿ.) ಸ್ತ್ರೀಲಂಪಟ
**इदाणिं** (ಅ.) ಈಗ
**इंदिय** (ನ.) ಇಂದ್ರಿಯ, ಅವಯುವ
**इंधण** (ನ.) ಉರವಲು
**इब्भ** (ಪು.) ವ್ಯಾಪಾರಿ
**इव** (ಅ.) ಅಂತೆ
**इसु** (ಪು.) ಬಾಣ
**इह** (ಅ.) ಇಲ್ಲಿ
**इहलोय** (ಪು.) ಈ ಲೋಕ

## ई

**ईसा** (ಸ್ತ್ರೀ.) ಈರ್ಷೆ, ಮತ್ಸರ
**ईसिं** (ಅ.) ಸ್ವಲ್ಪ

## उ

**उ** (ಅ.) ಪರಂತು, ಆದರೆ
**उ** (ಉಪಸರ್ಗ.) ಮೇಲೆ
**उक्कंपावे** (ಧಾ.) ನಡುಗು
**उक्किट्ठ** (ವಿ.) ಉತ್ಕೃಷ್ಟ
**उक्कुरुडिया** (ಸ್ತ್ರೀ.) ತಿಪ್ಪೆ
**उग्ग** (ವಿ.) ಉಗ್ರ
**उग्गम** (ಧಾ.) ಮೂಡು, ಹುಟ್ಟು
**उच्छुखड** (ಪು.ನ.) ಕಬ್ಬಿನ ಗಣಿಕೆ
**उज्जाण** (ನ.) ಉದ್ಯಾನ, ತೋಟ
**उज्जु** / **उज्जुअ** (ವಿ.) ಸರಳ
**उज्जुत्त** (ವಿ.) ಉದ್ಯುಕ್ತ
**उज्झ** (ಧಾ.) ಒಗೆ, ಬಿಡು
**उड्डु, उड्डे** (ಧಾ.) ಹಾರು
**उड्ढं** (ಅ.) ಮೇಲೆ
**उत्तम** (ವಿ.) ಉತ್ತಮ
**उत्तर** (ನ.) ಉತ್ತರ
**उद्दाल** (ಧಾ.) ಅಗಿ, ತೋಡು

**उद्दे** (ಧಾ.) ಮೂಡು
**उद्देस** (ಪು.) ಉದ್ದೇಶ, ಪ್ರದೇಶ
**उप्पील** (ಪು.) ನೆರೆ, ನೀರಿನ ಪೂರ
**उम्मग्ग** (ಪು.) ಉನ್ಮಾರ್ಗ, ವಿರುದ್ಧ ಮಾರ್ಗ
**उब्भन्त** (ವಿ.) ಉದ್ಭ್ರಾಂತ, ಚಿಂತಾಕುಲಿ
**उम्मत्त** (ವಿ.) ಉನ್ಮತ್ತ, ಹುಚ್ಚ
**उरग** (ಪು.) ಸರ್ಪ
**उराल** (ವಿ.) ಉದಾರ
**उल्लस** (ಧಾ.) ಆನಂದಬಡು
**उव** (ಉಪಸರ್ಗ.) ಹತ್ತಿರ, ಸಮೀಪ
**उवगम** (ಧಾ.) ಸಮೀಪಕ್ಕೆ ಹೋಗು
**उवचिट्ठ** (ಧಾ.) ಸಮೀಪ ಇರು
**उवज्झाय** (ಪು.) ಉಪಾಧ್ಯಾಯ, ಶಿಕ್ಷಕ
**उवट्ठा** (ಧಾ.) ಸೇವೆಮಾಡು
**उवणी** (ಧಾ.) ಅರ್ಪಿಸು
**उवद्दव** (ಪು.) ತೊಂದರೆ, ಪೀಡೆ
**उवद्दव** (ಧಾ.) ತೊಂದರೆ ಕೊಡು
**उवभुंज** (ಧಾ.) ಉಪಭೋಗಿಸು
**उवरि**, **उवरिं** (ಅ.) ಮೇಲೆ
**उवलिप्प**, **उवलिव** (ಧಾ.) ಅಂಟು, ಹತ್ತು
**उवसंहर** (ಧಾ.) ಉಪಸಂಹರಿಸು
**उवाय** (ಪು.) ಉಪಾಯ
**उसभ** (ಪು.) ಋಷಭ, ಮೊದಲ ತೀರ್ಥಂಕರ

## ए

**ए** (ಧಾ.) ಬರು
**एक्कलिय** (ವಿ.) ಒಬ್ಬನೆ, ಒಂಟಿಯಾದ
**एक्कणउइ**, **एक्काणउइ** (ವಿ.) ತೊಂಬತ್ತೊಂದು
**एक्कवीस** (ವಿ.) ಇಪ್ಪತ್ತೊಂದು
**एक्कसत्तरि**, **एगसत्तरि** (ವಿ.) ಎಪ್ಪತ್ತೊಂದು
**एक्कारस**, **एयारह** (ವಿ.) ಹನ್ನೊಂದು
**एक्कावन्न**, **एगावन्न** (ವಿ.) ಐವತ್ತೊಂದು
**एग** (ವಿ.) ಒಂದು
**एगट्ठि**, **एगसट्ठि** (ವಿ.) ಅರವತ್ತೊಂದು
**एगचत्तालीस**, **एक्कचत्तालीस**, **इगयाल** (ವಿ.) ನಲವತ್ತೊಂದು
**एगन्त** (ಪು.) ಏಕಾಂತ
**एगतीस**, **एक्कतीस** (ವಿ.) ಮೂವತ್ತೊಂದು
**एगत्थं** (ಅ.) ಒಂದೆಡೆಗೆ
**एगागी** (ವಿ.) ಒಬ್ಬನೆ
**एगासीइ**, **एक्कासीइ** (ವಿ.) ಎಂಬತ್ತೊಂದು
**एगूणचत्तालिस** (ವಿ.) ಮೂವತ್ತ ರೊಂಬತ್ತು
**एगूणनउइ** (ವಿ.) ಎಂಬತ್ತರೊಂಬತ್ತು
**एगूणपन्नास**, **एगूणपन्न**, **अउणापन्न** (ವಿ.) ನಾಲ್ವತ್ತ ರೊಂಬತ್ತು

एगूणवीस
अउणवीस (ವಿ.) ಹತ್ತೊಂಬತ್ತು
अउणवीसइ

एगूणसट्ठि (ವಿ.) ಐವತ್ತರೊಂಬತ್ತು

एगूणसत्तरि }
अउणसत्तरि } (ವಿ.) ಅರವತ್ತರೊಂಬತ್ತು

एगूणासीइ (ವಿ.) ಎಪ್ಪತ್ತರೊಂಬತ್ತು

एत्थ (ಅ.) ಇಲ್ಲಿ

एत्थन्तरम्मि }
एत्थन्तरे } (ಅ.) ಇಷ್ಟರಲ್ಲಿ

एत्थेव (ಅ.) ಇಲ್ಲಿಯೆ

एरिस (ವಿ.) ಈಪ್ರಕಾರದ

एव (ಅ.) 'ಏ' ಎಂಬ ಅವಧಾರಣಾರ್ಥದ ಅವ್ಯಯ

एवं (ಅ.) ಈ ಪ್ರಕಾರ

एवमाइ }
एमाइ } (ಅ.) ಈ ಮೊದಲಾಗಿ

## ओ

ओ [अव] (ಅ.) ದೂರ

ओइण्ण (ಭೂ.ಕ.ಕೃ.ವಿ.) ಅವತೀರ್ಣ, ಕೆಳಗೆ ಇಳಿದ

ओज्झ (ಧಾ.) ತೊಂದರೆ ಕೊಡು

ओसह (ನ.) ಔಷಧ

## क

कइ (ಪು.) ಮಂಗ

कइवय (ವಿ.) ಕೆಲವು

कए (ಅ.) ಸಲುವಾಗಿ

कओ (ಅ.) ಎಲ್ಲಿಂದ

कंख (ಧಾ.) ಇಚ್ಛಿಸು

चुलिया (ಸ್ತ್ರೀ.) [ಹಾವಿನ] ಪರೆ

कज्ज (ನ.) ಕಾರ್ಯ

कट्ठ (ನ.) ಕಟ್ಟಿಗೆ

कंठ (ಪು.) ಕುತ್ತಿಗೆ

कट्टु (ಭೂ.ಕೃ.ಅ.) ಮಾಡಿ

कट्ठमय (ವಿ.) ಕಟ್ಟಿಗೆಯಿಂದ ಮಾಡಿದ

कड, कय (ಭೂ.ಕ.ಕೃ.ವಿ.) ಕೃತ, ಮಾಡಿದ, ಮಾಡಲ್ಪಟ್ಟ

कडप्प (ಪು.) ಸಮೂಹ

कडय (ನ.) ಸೈನ್ಯದ ವಿಭಾಗ, ಶಿಬಿರ

कण्ण (ಪು.) ಕಿವಿ

कणिट्ठ (ವಿ.) ಕನಿಷ್ಠ

कंतार (ನ.) ಅಡವಿ

कत्तार (ವಿ.) ಮಾಡುವವ-ಳು

कंति (ಸ್ತ್ರೀ.) ಕಾಂತಿ

कत्तो (ಅ.) ಎಲ್ಲಿಂದ

कत्थ (ಅ.) ಎಲ್ಲಿ

कत्थइ (ಅ.) ಎಲ್ಲಿಯೂ

कंद (ಪು.) ಆಕ್ರಂದನ, ಅಳುವದು

कद्दम (ಪು.) ಕೆಸರು

कन्ना (ಸ್ತ್ರೀ.) ಕನ್ಯೆ

कंबल (ನ.) ಕಂಬಳಿ

कमल (ನ.) ಕಮಲ

कम्म (ನ.) ಕರ್ಮ

कमेण (ಅ.) ಕ್ರಮವಾಗಿ

कयंजली (ಪು.ಸ್ತ್ರೀ.) ಕೈಮುಗಿದ

कयली (ಸ್ತ್ರೀ.) ಬಾಳೆ

कयविक्कय (ಪು.) ಕೊಳ್ಳುವದು, ಮಾರುವದು

कयावि (ಅ.) ಒಮ್ಮೆ, ಯಾವಾಗಲೂ

कर (ಧಾ.) ಮಾಡು

करि (ಪು.) ಆನೆ

कल्लं (ಅ.) ನಿನ್ನೆ, ನಾಳೆ

कलस (ಪು.) ಕಲಶ, ಪಾತ್ರೆ

कलह (ಪು.) ಜಗಳ

कला (ಸ್ತ್ರೀ.) ಕಲೆ

कलाव (ಪು.) ಸಮೂಹ

कलुस (ಧಾ.) ಕೆಟ್ಟುಹೋಗು, ದೂಷಿತವಾಗು

कवड (ನ.) ಕಪಟ

कसिण (ವಿ.) ಕೃಷ್ಣ, ಕಪ್ಪಾದ

कह (ಧಾ.) ಹೇಳು

कहं (ಅ.) ಹೇಗೆ

कह वि (ಅ.) ಹೇಗಾದರೂ

कहकहवि (ಅ.) ಹೇಗೊ, ಬಹು ಕಷ್ಟದಿಂದ

कहा (ಸ್ತ್ರೀ.) ಕಥಾ, ಸಂಗತಿ

कहिं (ಅ.) ಎಲ್ಲಿ

का (ಧಾ.) ಮಾಡು

काउं (ಹೇ.ಅ.) ಮಾಡಲು

काण (ವಿ.) ಒಂಟಿಗಣ್ಣಿನ

कामा (ಪು.) ಕಾಮ, ಇಚ್ಛೆ, ವಿಷಯಸುಖ

कामकम (ಪು.) ಮನಸ್ಸಿಗೆ ಬಂದಂತೆ ತಿರುಗುವ

काय (ಪು.) ದೇಹ

कायमणि (ಪು.) ಕಾಜಿನ ಹರಳು

कायव्व (ವಿ.ಕ.ಕೃ.ವಿ.) ಕರ್ತವ್ಯ, ಮಾಡಲ್ಪಡತಕ್ಕ

कारण (ನ.) ಕಾರಣ, ಉದ್ದೇಶ

कारुण्ण (ನ.) ಕಾರುಣ್ಯ

कारे (ಧಾ.) ಮಾಡಿಸು

काल (ಪು.) ವೇಳೆ, ಸಮಯ

किच्चा (ಭೂ.ಕೃ.ಕ.) ಮಾಡಿ

किंचि (ಅ.) ಸ್ವಲ್ಪ, ಏನಾದರೂ

किज्ज (ಕರ್ಮಣಿರೂಪ) ಮಾಡಲ್ಪ...

कित्ति (ಸ್ತ್ರೀ.) ಕೀರ್ತಿ

किन्तु (ಅ.) ಆದರೆ

किरण (ಪು.ನ.) ಕಿರಣ

किसिवल (ಪು.) ಒಕ್ಕಲಿಗ

कीडक्खइय (ಭೂ.ಕ.ಕೃ.ವಿ.) ಹುಳ ತಿಂದ

कीण (ಧಾ.) ಕೊಂಡುಕೊಳ್ಳು

कील (ಧಾ.) ಆಡು

कीस (ಅ.) ಏಕೆ

कुच्छि (ಸ್ತ್ರೀ.) ಹೊಟ್ಟೆ

कुडागारसाला (ಸ್ತ್ರೀ.) ಶಿಖರದ ಆಕಾರದ ಮನೆ

कुण (ಧಾ.) ಮಾಡು

कुबेर (ಪು.) ಕುಬೇರ, ದೇವತೆಗಳ ಒಂದು ಪ್ರಕಾರ

कुंभ (ಪು.) ಕೊಡ

कुंभआर (ಪು.) ಕುಂಬಾರ

कुमार (ಪು.) ಹುಡುಗ

